ಕಸ್ತೂರಿ

ಪ್ರಕಟನೆ:
ಪ್ರತಿ ತಿಂಗಳ ೧ ನೇ ದಿನಾಂಕ

ವ್ಯವಸ್ಥಾಪಕ ಸಂಪಾದಕರು:
ರಂಗನಾಥ ದಿವಾಕರ

ಪ್ರಧಾನ ಸಂಪಾದಕರು:
ಪಾದ್ರಿ ಶಾವಣ್ಣ

ಸಹಸಂಪಾದಕರು:
ದ. ಲ. ಕೆರೂರ

ಪ್ರಕಾಶಕರು:
ಕರ್ನಾಟಕ ಪತ್ರಿಕಾ ಪ್ರೈ. ಲಿ.
ಹುಬ್ಬಳ್ಳಿ

ಕಚೇರಿ:
ಕಸ್ತೂರಿ ಕಾರ್ಯಾಲಯ ಹುಬ್ಬಳ್ಳಿ

ಕಲೆ:
ಕೆ. ಬಿ. ಕುಲಕರ್ಣಿ

ಮುದ್ರಣ:
ಸಂಯುಕ್ತ ಕರ್ನಾಟಕ ಪ್ರೆಸ್
ಹುಬ್ಬಳ್ಳಿ

ಮುಖಪುಟ:
ಹಂಪಿಯ ಕಲ್ಲಿನ ತೇರು
ಟಿ. ಎಸ್. ರಾಜಗೋಪಾಲ

ಚಂದಾದರ

೧ ವರ್ಷ (ಅಂಚೆ ಸೇರಿ) ರೂ. ೩೫-೦೦
೩ ವರ್ಷ " ರೂ. ೨೫-೦೦
೨ ವರ್ಷ " ರೂ. ೧೪-೦೦
ಅರ್ಧ ವರ್ಷ " ರೂ. ೭-೫೦

KASTURI June 1975

# ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವುದು. ಕಾಗದದ ಒಂದೇ ಮಗ್ಗುಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖನಗಳಾದರೆ ಅವುಗಳ ಮೂಲ ಲೇಖಕ ಹಾಗೂ ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖನಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವುದು. ಅಸ್ವೀಕೃತ ಲೇಖನಗಳು ತಿರುಗಿ ಬೇಕಾಗಿದ್ದರೆ ಲೇಖಗಳ ಸಂಗಡವೇ ತಿರುಗಿ ಕಳಿಸಲು ಅವಶ್ಯ ಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು 'ಇದುವೆ ಜೀವ' ಮೊದಲಾದ ಚುಟುಕುಗಳನ್ನು ತಿರುಗಿ ಕಳಿಸಲು, ಆ ಬಗ್ಗೆ ಪತ್ರವ್ಯವಹಾರ ಮಾಡಲು ಸಾಧ್ಯವಿಲ್ಲ. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವುದು. ಲೇಖಕರು ತಮ್ಮ ಲೇಖನಗಳ ನಕಲಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವುದೊಳಿತು. ಲೇಖನಗಳು ಆಕಸ್ಮಾತ್ತಾಗಿ ಕಳೆದುಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖನ ಪ್ರಕಟವಾದರೆ, ಕಸ್ತೂರಿಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡುವುದು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

---

# ಚಂದಾದಾರರಿಗೆ ಸೂಚನೆ

ಪ್ರತಿ ತಿಂಗಳ ಕಸ್ತೂರಿ ಆಯಾ ತಿಂಗಳ ೧ ನೇ ದಿನಾಂಕದೊಳಗೆ ಪ್ರಕಟವಾಗುವುದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲುಪುವುದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲುಕಚೇರಿಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರ್ ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ



**ಪುಸ್ತಕ ವಿಭಾಗ**

# ಸಹಚಿಂತನ

## ಗರುಡಗಂಬ

ಏಪ್ರಿಲ್ ಕಸ್ತೂರಿ ಸಂಚಿಕೆಯಲ್ಲಿ ಪ್ರಕಟವಾಗಿದ್ದ ಪುರಾಣ ಪ್ರಸಿದ್ಧ ಪಕ್ಷಿ 'ಗರುಡ'ನನ್ನು ಓದಿ ಅದರಲ್ಲಿ ಮೂಡಿ ಬಂದಿರುವ ಕಲ್ಪನಾ ವಿಲಾಸಗಳನ್ನು ಮೆಚ್ಚಿದೆನು. 'ಈ ಗರುಡರ ಆತ್ಮಾರ್ಪಣೆಯ ನೆನಪಿಗಾಗಿ ದೇವಾಯತನದ ಇದಿರು ಗರುಡ ಗಂಭ 'ಸ್ಥಾಪಿಸುವುದು ಆಗ ಅನುಸರಿಸುತ್ತಿದ್ದ ರೀತಿ' ಎನ್ನುವ ವಾಕ್ಯಕ್ಕೆ ಆಧಾರಗಳನ್ನು ತಿಳಿಯಬಯಸುತ್ತೇನೆ. ಮನಸ್ಸಿನಲ್ಲಿ ಮೂಡುವ ತಮ್ಮದೇ ಆದ ಕಲ್ಪನೆಗಳನ್ನು ಹೀಗೆ authentic ಆಗಿ ಬರೆದರೆ ಅದು ಸಂಶೋಧನೆಗೆ ಕೊಡಲಿಯ ಪೆಟ್ಟು. ಸಿದ್ಧಾಂತವಾಗಿ ಒಂದು ನುಡಿಯನ್ನು ಹೇಳಿದರೆ ಸಮರ್ಥನೆ. ಗರುಡಗಂಭ ಶ್ರೀ 'ಕಲಾಪೂರ್ಣರು' ತಿಳಿದಿರುವಂತೆ ಮಾಸತಿಗಲ್ಲೋ ಅಥವಾ ವೀರಗಲ್ಲೋ ಅಲ್ಲ, ಆದರೆ ಅದು ವಿಷ್ಣು ಆಲಯಗಳ ಧ್ವಜ (ಗರುಡನು ತಾನೇ ವಿಷ್ಣುವಿನ ಧ್ವಜದಲ್ಲಿ ನೆಲಸಿದವ) ಸ್ತಂಭ.

ಮಂಗಳೂರು — -ಎಂ. ಆರ್. ನರಸಿಂಹನ್

ಏಪ್ರಿಲ್ ೭೫ ರ ಸಂಚಿಕೆಯಲ್ಲಿ 'ಕಲಾಪೂರ್ಣ' ಅವರು 'ಪುರಾಣ ಪ್ರಸಿದ್ಧ: ಗರುಡ'ನ ಬಗ್ಗೆ ಉತ್ತಮ ಮಾಹಿತಿಯನ್ನು ಒದಗಿಸಿದ್ದಾರೆ. ಆದರೆ ಲೇಖಕರು ಇತ್ತೀಚಿನ ಗರುಡನ ಅಸ್ತಿತ್ವವನ್ನು ಉಲ್ಲೇಖಿಸಿಲ್ಲ. ಭಾರತದಿಂದ ಸೀಮೋಲ್ಲಂಘನ ಮಾಡಿರುವ ಗರುಡ ಇಂಡೋನೇಷಿಯಾದಲ್ಲಿ ಇಂದಿಗೂ ಗರುಡ (ಸಂಸ್ಕೃತದ ಪದ) ಎಂದೇ ಕರೆಯಲ್ಪಡುತ್ತದೆ. ಗರುಡ ಗಾತ್ರ, ಗಾಂಭೀರ್ಯ, ಶಕ್ತಿ ಶೌರ್ಯಗಳ ಪ್ರತೀಕ ಎಂತಲೇ ಅದು ಪಕ್ಷಿಗಳ ರಾಜ. ಗರುಡ ಹಾರಾಟದ ಸಂಕೇತ. ಆದ್ದರಿಂದ ಇಂಡೋನೇಷಿಯ ದೇಶವು ತನ್ನ ವಿಮಾನ ಸಂಸ್ಥೆಗೆ ಇಟ್ಟಿರುವ ಹೆಸರು 'ಗರುಡ ಏರ್ ಲೈನ್ಸ್' ಎಂದು!

ಪುರಾತನ ಪರಂಪರೆಯಿಂದ ಬಂದ ನಮ್ಮ ಗರುಡನಿಗೆ ನಮ್ಮಲ್ಲಿ ಸಿಗದ ಸ್ಥಾನ ಇಂಡೋನೇಷಿಯಾದಲ್ಲಿ ಸಿಕ್ಕಿದೆ. ನಮ್ಮತನಕ್ಕೆ ನಮ್ಮಲ್ಲಿ ಎಷ್ಟರಮಟ್ಟಿಗೆ ಬೆಲೆ ಸಿಕ್ಕೀತು ಎನ್ನುವುದಕ್ಕೆ ಇದು ಉತ್ತಮ ಉದಾಹರಣೆ.

ಪ. ಜರ್ಮನಿ ಸರ್ಕಾರವು ಗರುಡನನ್ನು ತನ್ನ ಮುದ್ರೆಯನ್ನಾಗಿ ಮಾಡಿಕೊಂಡಿದೆ. ಆದರೆ ಅದು ಗರುಡ ಎಂದು ಕರೆಸಿಕೊಳ್ಳದೆ 'ಈಗಲ್' ಎಂದು ಆಂಗ್ಲ ಭಾಷೆಯಲ್ಲಿ ಕರೆಸಿಕೊಳ್ಳುತ್ತದೆ ಅಷ್ಟೆ.

ಮಾರಡಿಹಳ್ಳಿ — -ಮ. ಶಿ. ವಿಶ್ವೇಶ್ವರ

ಏಪ್ರಿಲ್ ೧೯೭೫ ಸಂಚಿಕೆಯಲ್ಲಿ 'ಕಲಾಪೂರ್ಣ' ಅವರ "ಪುರಾಣ ಪ್ರಸಿದ್ಧ ಗರುಡ" ಲೇಖನ ಓದಿದೆ. ಅದರಲ್ಲಿ ಗರುಡನ ಹಿರಿಮೆಯನ್ನು ಬಣ್ಣಿಸುವಾಗ ಲೇಖಕರು ಒಂದು ಮಾತನ್ನು ಮರೆತಿದ್ದಾರೆ. ಅದೆಂದರೆ;

ಭಾರತೀಯ ವಾಯುದಳವನ್ನೊಳಗೊಂಡು ಇನ್ನಿತರ ಅನೇಕ ರಾಷ್ಟ್ರಗಳ ವಾಯು ಸೇನೆಗಳು ಗರುಡನನ್ನು ತಮ್ಮ ಲಾಂಛನವಾಗಿರಿಸಿಕೊಂಡಿವೆ. ಗರುಡ ಲಾಂಛನ ನಮ್ಮ ಭಾರತೀಯ ವಾಯುದಳದ ಪ್ರಬಲ ಶಕ್ತಿ, ಸ್ವಾಮಿನಿಷ್ಠತೆ, ನಿಷ್ಠಾವಂತ ಸೇವೆಗಳನ್ನು ವ್ಯಕ್ತಪಡಿಸುವ ದ್ಯೋತಕವಾಗಿದೆ. ಸ್ಪೇನ್ ದೇಶದ ರಾಷ್ಟ್ರೀಯ ಲಾಂಛನವೂ ಗರುಡನೇ ಆಗಿದೆ.

ಹೊಸದಿಲ್ಲಿ — -ಬಾಲಕೃಷ್ಣ ಹೆಗಡೆ

ನಾನು ಗರುಡ ಲೇಖನದ ಬರವಣಿಗೆಗೆ ಆಧಾರವಾಗಿ ಮೈಸೂರು ವಿಶ್ವವಿದ್ಯಾನಿಲಯದವರು ಪ್ರಕಟಪಡಿಸಿದ 'ವಿಶ್ವಕೋಶ'ವನ್ನು ಗಮನಿಸಿದ್ದೆ. ಅದರಲ್ಲಿ ನಿರೂಪಿತವಾದ ಅಂಶ:–ದೇವಾಲಯಗಳ ಇದಿರು ಇರುವ ಗರುಡ ಗಂಬ ಅಥವಾ ವಿಷ್ಣು ದೇವಾಲಯಗಳ ಇದಿರಿನ ಧ್ವಜ ಸ್ತಂಭಗಳನ್ನು ಗರುಡಗಂಬಗಳೆಂದೇ ಎಲ್ಲೆಡೆಯೂ ಗುರುತಿಸಲಾಗುತ್ತದೆ. ಇದೂ ರೂಢಿಯಲ್ಲಿರುವುದು ನಿಜವೇ.

ಸಿರಸಿ — -'ಕಲಾಪೂರ್ಣ'

## ಜ್ವಲಂತ ಸಮಸ್ಯೆ

ಹರಿಜನ ಸಮಸ್ಯೆಯನ್ನು ಬಿಟ್ಟರೆ, ಪ್ರಸಕ್ತ ಹಿಂದೂ ಸಮಾಜವನ್ನು ಗೆದ್ದಲಿನಂತೆ ಕಾಡುತ್ತಲಿರುವ ವಿಧವಾ ಸಮಸ್ಯೆಯ ಮೇಲಿನ ಕ್ಷ ಕಿರಣದಲ್ಲಿ ('ಕಸ್ತೂರಿ' ಮೇ, ೭೫) ಹೊರಹೊಮ್ಮಿದ ವಿಚಾರಧಾರೆ ತರ್ಕಬದ್ಧವಾಗಿದೆ. ಲೇಖಕರಾದ ಶ್ರೀ ವೆಂಕಟೇಶರವರು ವಿಧವೆಯನ್ನು 'ಅನುಕಂಪನೀಯ ಪ್ರಾಣಿ' ಎಂದು ಸರಿಯಾಗಿ ಗುರ್ತಿಸಿ, ಅವಳ ಬಗೆಗೆ ಹಿಂದೂ ಸಮಾಜವು ತಳೆದಿರುವ ಕ್ಷುಲ್ಲಕ ಮನೋಭಾವವನ್ನು ನಿಷ್ಠುರವಾಗಿ ಖಂಡಿಸಿರುವುದು ಲೇಖನಕ್ಕೆ ಶೋಭೆ ನೀಡುತ್ತದೆ.

ಧರ್ಮ ಎಂದರೆ ನಿರಂತರ ಆವರಣಕ್ಕೆ ಹೊಂದಿಕೊಳ್ಳುವ ಯತ್ನ. ಈ ಗುಣ ಇಲ್ಲದ ಧರ್ಮ ಅರ್ಬುದ ರೋಗದ ಗಡ್ಡೆಯಾಗುತ್ತದೆ. ಸಂಪ್ರದಾಯಬದ್ಧರಾದ ಹಿಂದೂ ಪ್ರಾಜ್ಞರು ವಸ್ತುಸ್ಥಿತಿಯೆಡೆಗೆ ಗಮನ ಹರಿಸುವುದೂ, ಕರ್ತವ್ಯನಿಷ್ಠ ಪ್ರಜ್ಞೆಯನ್ನು ಜಾಗೃತಗೊಳಿಸಿಕೊಳ್ಳುವುದೂ ಈ ದೃಷ್ಟಿಯಿಂದ ಅನಿವಾರ್ಯವಾಗಿದೆ. ಪ್ರಸ್ತುತ ಅಂತರರಾಷ್ಟ್ರೀಯ ಮಹಿಳಾ ವರ್ಷದಲ್ಲಿ ನಮ್ಮ ಸುಶಿಕ್ಷಿತ ಮಾನಿನಿಯರು 'ವಿಧವೆ' ಎಂಬ ಶಬ್ದ ಇನ್ನಿಲ್ಲದಂತೆ ಮಾಡಲು ಶಕ್ತರಾದರೆ ಮಹಿಳಾ ವರ್ಷಕ್ಕೆ ಅದಕ್ಕಿಂತ ಉತ್ತಮ ಕಾಣಿಕೆ ಬೇರಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದು.

ಕೂಡ್ಲಿಗಿ — -ಯು. ಅನಂತೇಶರಾವ್

ಶ್ರೀ ಎಸ್. ವೆಂಕಟೇಶರವರು, ವಿಧವೆಯರು ಸಮಾಜದಲ್ಲಿ ಅನುಭವಿಸುತ್ತಿರುವ ವಿಚಿತ್ರ ಹಿಂಸೆಗಳನ್ನು ಮತ್ತು

ಅವರುಗಳು ಪಡುತ್ತಿರುವ ಮಾನಸಿಕ ಹಿಂಸೆಗಳನ್ನು, ಸಮಾಜದಲ್ಲಿನ, ಅವರ ಸ್ಥಾನಮಾನಗಳನ್ನು ಮನಕರಗುವಂತೆ ವಿವರಿಸಿದ್ದಾರೆ. ಆದರೆ ಅತಿ ನಿಷ್ಠುರವಾದ ಸಮಾಜಕ್ಕೆ ಇದು ಮನವರಿಕೆ ಆಗುವುದೇ?

ಅದರಲ್ಲೂ ಬಾಲವಿಧವೆಯರು ಅನುಭವಿಸುತ್ತಿರುವ ಹಿಂಸೆಯಂತೂ ಅಮಾನುಷವಾದುದು.

ಹಿಂದೊಂದು ಕಾಲದಲ್ಲಿ ಇದ್ದಂತಹ "ಸತಿ" ನಿಯಮವನ್ನು ನಿಲ್ಲಿಸಲು ಮೇಧಾವಿಗಳು ಪ್ರಯತ್ನಿಸಿ ನಿಲ್ಲಿಸಿದಂತೆ ಈಗಲೂ ಸಮಾಜದ ಹಿರಿಯ ವ್ಯಕ್ತಿಗಳು ಈ ರೀತಿಯ ವಿರೂಪಗೊಳಿಸುವಿಕೆ, ಸಮಾಜದಲ್ಲಿ ಅತಿ ಕನಿಷ್ಠವಾಗಿ ಕಾಣುವುದನ್ನು ನಿಲ್ಲಿಸಲು ನೆರವಾಗುತ್ತಾರೆಯೆ?

ಕಾಲಾನುಕಾಲಕ್ಕೆ, ಪರಿಸ್ಥಿತಿ, ಸಂದರ್ಭಗಳಿಗೆ ಅನುಸಾರವಾಗಿ ಸಮಾಜ ಧರ್ಮ ಬದಲಾಗಬೇಕಾದುದು ಅನಿವಾರ್ಯ. ಪ್ರಕೃತಿ ಧರ್ಮಕ್ಕೆ ಮತ್ತು ಮೂಲಸಂಪ್ರದಾಯಕ್ಕೆ ವಿರೋಧವಾಗದ ರೀತಿ ಸಮಾಜದ ರೀತಿ, ನೀತಿಗಳನ್ನು ಬದಲಾಯಿಸಿಕೊಂಡಲ್ಲಿ ಬಾಧಕವೇನೂ ಆಗಲಾರದು. ಇದಕ್ಕೆ ಸಮಾಜ ಸೇವಕರು, ಶ್ರದ್ಧಾಳುಗಳು, ಪ್ರಾಣಿ ದಯಾ ಸಂಘಗಳು ಮುಂದೆ ಬರಲಿ.

ಶಿವಮೊಗ್ಗ -ಜಿ. ವಿ. ಶ್ರೀನಿವಾಸ ಮೂರ್ತಿ

ಇಂದಿನ ಸಮಾಜ ತನ್ನ ಮೌರ್ಢ್ಯದಿಂದಾಗಿ ವಿಧವೆಯರನ್ನು ನಿಕೃಷ್ಟವಾಗಿ ಕಾಣುತ್ತಿರುವುದರ ಬಗೆಗೆ ಶ್ರೀ ಎಸ್. ವೆಂಕಟೇಶರವರು ತಮ್ಮ 'ಅನುಕಂಪನೀಯ ಪ್ರಾಣಿ' ಲೇಖನದಲ್ಲಿ ತುಂಬ ಕಾಳಜಿ ವ್ಯಕ್ತಪಡಿಸಿದ್ದಾರೆ. ವಿಧವೆಯರನ್ನು ಕುರಿತು ನಾಲ್ಕು ಮಾತು ಇಲ್ಲಿ ಹೇಳಬೇಕೆನಿಸುತ್ತದೆ. ಹಿಂದೂಗಳ ಪರಮ ಪೂಜ್ಯ ಗ್ರಂಥಗಳಾದ ರಾಮಾಯಣ, ಮಹಾಭಾರತಗಳಲ್ಲಾಗಲೀ, ವೇದಗಳ ಕಾಲದಲ್ಲಾಗಲೀ ವಿಧವೆಯ ಕೇಶ ಸಂಸ್ಕಾರವನ್ನು ಕುರಿತ ಮಾಹಿತಿ ಇಲ್ಲ. ಬುದ್ಧನ ಕಾಲದಲ್ಲಿ ಮತ್ತು ನಂತರ, ಅವನ ಮತದ ಪ್ರಭಾವ ಹಿಂದೂ ಧರ್ಮದ ಮೇಲಾದುದರಿಂದ ಈ ಪದ್ಧತಿಗಳು ಹಿಂದೂ ಧರ್ಮದಲ್ಲಿ ಬೆಳೆದು ಬಂದವನ್ನಬಹುದು. ಇದಕ್ಕೆ ಮೊದಲು ನಮಗೆ ಇದರ ಬಗ್ಗೆ ಎಲ್ಲಿಯೂ ಮಾಹಿತಿ ದೊರೆತಿಲ್ಲ. ವಿಧವೆಯು ಪುನರ್ವಿವಾಹವಾಗುವುದಕ್ಕೂ ಅವಕಾಶಗಳಿವೆ ಎಂಬುದನ್ನು ಹಿಂದೂ ಧರ್ಮದಲ್ಲಿ ಕಾಣಬಹುದು. ವಿಧವೆಯರೂ ಸಮಾಜದಲ್ಲಿ ಎಲ್ಲ ಸ್ಥಾನಮಾನಗಳಿಗೆಗರ್ಹರು. ಆಕೆಯನ್ನು ನಿಕೃಷ್ಟವಾಗಿ ಕಾಣಬೇಡಿ ಎಂದು ಶ್ರೀ ಎಸ್. ವೆಂಕಟೇಶರೊಂದಿಗೆ ನಾನೂ ಧ್ವನಿಗೂಡಿಸುತ್ತೇನೆ.

ಮೈಸೂರು -ನಾಗಚಂದ್ರ

## ಗುಲಗಂಜಿ

'ಕಸ್ತೂರಿ'ಯ ಏಪ್ರಿಲ್ ಸಂಚಿಕೆಯಲ್ಲಿ ಶ್ರೀಮಾನ್ ಲಕ್ಷ್ಮೀನಾರಾಯಣ ಹೆಗಡೆಯವರು ಗುಲಗಂಜಿ ಬೀಜದಲ್ಲಿ ವಿಷವಿರುವ ಹಾಗೆ ತಂಬಾಕು ಕವಳದಲ್ಲಿ ಉಪಯೋಗಿಸಲಾಗುವ ಗುಲಗಂಜಿ ಎಲೆಯಲ್ಲಿಯೂ ವಿಷವಿರುವುದಿಲ್ಲವೇ? ಎಂಬ ಬಗ್ಗೆ ಜಿಜ್ಞಾಸೆಯನ್ನು ವ್ಯಕ್ತಪಡಿಸಿದ್ದಾರೆ ಅದಕ್ಕೆ ನನ್ನ ಉತ್ತರವಿಷ್ಟು:

ಗುಲಗಂಜಿ ಬೀಜ ಅಬ್ರಿನ್ ವಿಷವನ್ನು ಒಳಗೊಂಡಿರುತ್ತದೆಯಾದರೂ ಅದರ ಎಲೆ ಈ ವಿಷವನ್ನು ಒಳಗೊಂಡಿರುವುದಿಲ್ಲ ಈ ಎಲೆಗಳು ಮಧುರವಾಗಿದ್ದು ತಿನ್ನಲು ರುಚಿಕರವಾಗಿರುತ್ತವೆ. ಗಂಟಲು ಒಡೆದಾಗ ಈ ಎಲೆಗಳನ್ನು ಸೇವಿಸಿದರೆ ಅದರಲ್ಲಿನ ಗ್ಲಿಸಿರಿಜಿನ್ ಎಂಬ ಘಟಕ ಗಂಟಲನ್ನು ಸರಿಪಡಿಸುತ್ತದೆಂದೂ ಹೇಳಲಾಗುತ್ತಿದೆ.

ಇದೇ ರೀತಿ ವಿಷವೂ ಅಮೃತವೂ ಒಂದೆಡೆ ಸೇರಿದ ಸಸ್ಯ ಪ್ರಪಂಚದ ಇನ್ನೊಂದು ವಸ್ತುವೆಂದರೆ ಸೇಬು. ಹಣ್ಣು ಅನೇಕ ಪೌಷ್ಟಿಕಾಂಶಗಳನ್ನು ಹೊಂದಿರುವುದರಿಂದ ದೇಹಕ್ಕೆ ಒಳ್ಳೆಯದು. ಆದರೆ ಸೇಬು ಬೀಜದಲ್ಲಿ ವಿಷಾಕ್ತವಾದ ಹೈಡ್ರೋಸಿನಿಕ್ ಕ್ಷಾರ ಸಮಾಹಿತವಾಗಿರುವುದರಿಂದ ಅದು ದೇಹಕ್ಕೆ ಮಾರಕವಾದದ್ದು.

ಫಿಲಾಡೆಲ್ಫಿಯಾ -ಮುಕುಂದ ಯಲವಿಗಿ

## ಉರಿ

ಮೇ ೭೫ ರ ಕಸ್ತೂರಿ ಸಂಚಿಕೆಯಲ್ಲಿ ಪ್ರಕಟವಾದ ಗೀತಾ ಕುಲಕರ್ಣಿಯವರ "ಉರಿ" ಕಥೆ ತುಂಬ ಮಾರ್ಮಿಕವಾಗಿದೆ. ಅಡಕೊತ್ತಿನಲ್ಲಿ ಸಿಕ್ಕ ಅಡಕೆಯ ಸ್ಥಿತಿ ಕಥಾ ನಾಯಕಿಯದು. ಅತ್ತ ಆಗಲೇ ಕೈಯಿಂದ ಜಾರಿದ ಪತಿ, ಇತ್ತ ಜಾರುವ ಸ್ಥಿತಿಯಲ್ಲಿರುವ ಪ್ರಾಯದ ಮಗಳು. ನಾಯಕಿ ಇವರಿಬ್ಬರನ್ನೂ ಹತೋಟಿಯಲ್ಲಿಟ್ಟುಕೊಳ್ಳಲು ನಡೆಸುವ ಹೋರಾಟದಲ್ಲಿ ಎದ್ದ ಉರಿಗೆ ಅವಳೇ ಬಲಿ. ಇಂಥ ಸಂದಿಗ್ಧಕ್ಕೆ ಸಿಕ್ಕ ಹೆಣ್ಣು ಅವಳಿಗೆ ತಾಗಿದ ಉರಿಯ ಕಲ್ಪನೆ ಓದುಗರಿಗೆ ಮನದಟ್ಟಾಗುವಂತೆ ಬರೆದ ಗೀತಾ ಅವರ ಸಮರ್ಥ ಲೇಖನ ಸಮಾಜದಲ್ಲಿ ಇಂಥದೇ ಕಷ್ಟಕ್ಕೆ ಸಿಲುಕಿ ನರಳುತ್ತಿರುವ ಎಷ್ಟೋ ಹೆಣ್ಣುಗಳ ಬಗ್ಗೆ ಓದುಗರ ಅನುಕಂಪ ಹುಟ್ಟಿಸುತ್ತದೆ.

ಖುಶವಂತ ಸಿಂಗರ "ಲಂಡನ್ನಿನಲ್ಲೊಂದು ಪ್ರೇಮ ಪ್ರಕರಣ" ಸರಳ, ಸುಂದರವಾದ ಕಥೆ ಎಸ್. ವೆಂಕಟೇಶ ಅವರ "ಅನುಕಂಪನೀಯ ಪ್ರಾಣಿ" ತುಂಬ ವಿಚಾರಪೂರ್ಣ ಲೇಖನ. ವಿಧವೆಯನ್ನು ಸಮಾಜ ಕಾಣುವ ಕ್ರೂರ ದೃಷ್ಟಿಯನ್ನು ಲೇಖಕರು ತುಂಬ ಕಟುವಾಗಿ ಟೀಕಿಸಿದ್ದಾರೆ. ವಿಧವೆಯರ ಬಗ್ಗೆ ಲೇಖಕರಿಗೆ ಇರುವ ದೃಷ್ಟಿಯೇ ಸಮಾಜದ ಪ್ರತಿಯೊಬ್ಬನಿಗೂ ಇದ್ದರೆ ಅವಳ ಬಾಳು ಸಹ್ಯವಾಗುತ್ತದೆ ಹಾಗೆ ಸಮಾಜದ ಸುಧಾರಣೆಯೂ ಆಗುತ್ತದೆ.

ಶಿವಮೊಗ್ಗಾ -ಕುಮಾರಿ ಕೆ. ಸ್ನೇಹಲತಾ

ಕಸ್ತೂರಿ

ಸಂಚಿಕೆ: ೧೦ ಕಸ್ತೂರಿ, ಜೂನ್ ೧೯೭೫ ವರ್ಷ: ೧೯

# ತ್ರಿವಿಧಭಕ್ತಿ

ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲು ಯಾವ ಬಗೆಯ ಭಕ್ತಿ ಬೇಕು ಎಂದು ಪರಿಚಿತನೊಬ್ಬನು ಶ್ರೀ ರಾಮಕೃಷ್ಣ ಪರಮಹಂಸರನ್ನು ಪ್ರಶ್ನಿಸಿದನು.

ಆಗ ಪರಮಹಂಸರು ನೀಡಿದ ಉತ್ತರ ಹೀಗಿದೆ.

"ಒಬ್ಬೊಬ್ಬನ ಸ್ವಭಾವಕ್ಕನುಸರಿಸಿ ಮೂರು ಬಗೆಯ ಭಕ್ತಿಗಳಿವೆ; ಭಕ್ತಿ, ಸಾತ್ವಿಕ, ರಾಜಸಿಕ ಮತ್ತು ತಾಮಸಿಕ ಸ್ವರೂಪ ತಾಳಬಹುದು.

"ಸಾತ್ವಿಕ ಭಕ್ತಿ ಎಂಥದೆಂದು ಭಗವಂತನೊಬ್ಬನಿಗೇ ಗೊತ್ತು. ಅಲ್ಲಿ ಭಕ್ತನು ರಹಸ್ಯದಲ್ಲಿ ದೇವರನ್ನು ಪ್ರೀತಿಸುತ್ತಾನೆ. ಅವನ ಧ್ಯಾನ ಪ್ರೀತಿಗಳು ಇನ್ನೊಬ್ಬರಿಗೂ ತಿಳಿದಿರುವದಿಲ್ಲ. ಸೂರ್ಯೋದಯಕ್ಕಿಂತ ಮುಂಚೆ ಕೆಂಪಡಗೇಮಂತೆ, ಆಧ್ಯಾತ್ಮ ಸಿದ್ಧಿಗೆ ಮೊದಲು, ಭಕ್ತನು ಸತ್ವಗುಣಭರಿತನಾಗುತ್ತಾನೆ.

"ರಾಜಸಿಕ ಭಕ್ತನಾದವನು, ಅದನ್ನು ತೋರಿಸಿಕೊಳ್ಳಲು ಇಷ್ಟಪಡುತ್ತಾನೆ. ಅವನಲ್ಲಿ ಸ್ವಲ್ಪ ಡಂಭಾಚಾರ ಹೆಚ್ಚು. ಪೀತಾಂಬರವನ್ನುಟ್ಟು, ಕೊರಳಿಗೆ ರುದ್ರಾಕ್ಷಿ ಮಾಲೆಯನ್ನು ತೊಟ್ಟು, ಮುತ್ತು ರತ್ನಗಳ ಜಪಸರ ಹಿಡಿದು ಪೂಜೆಗೆ ಹೋದರೂ ಹೋದನೇ.

"ತಾಮಸಿಕ ಭಕ್ತಿಯ ರೂಪವು ಮನೆ ಮುರಿಯಲು ಹೊರಟ ಡಕಾಯಿತರಂತಿರುತ್ತದೆ. ಮನೆ ಮುರಿಯುವಾಗ, ಆ ಮಂಥ ಹಿಡಿದುಕೊಂಡು, ಹೊಡೆದು ಬಡಿದು, ಪೋಲೀಸರು ಬಂದಾರೆಂದು ಬೆದರದೆ, 'ಕೊಲ್ಲು' 'ಸುಲಿ' ಎಂದು ಕೂಗುತ್ತಿರುತ್ತಾರೆ. ತಾಮಸಿಗೆ ಭಕ್ತರು ಹಾಗೆಯೇ ಹುಚ್ಚಾಗಿ ಬೊಬ್ಬಿರಿಯುತ್ತ 'ಹರ ಹರ' ಎಂದೋ 'ಓಂ' ಕಾರ

ಜಪಿಸಿಯೋ, 'ಕಾಳಿಗೆ ಜಯ' ವೆಂದೋ ಕೂಗುತ್ತಿರುತ್ತಾರೆ; ಅವರ ಮನಸ್ಸು ಗಟ್ಟಿ; ಶ್ರದ್ಧೆಯೂ ಹೆಚ್ಚು.

"ಶಕ್ತಿಯ ಆರಾಧಕರು ಹೆಚ್ಚಾಗಿ ಈ ಪಂಥದವರು. ಅವರ ನಂಬಿಕೆ ಹೀಗೆ– 'ಒಮ್ಮೆ ನಾನು ಕಾಳಿ ಇಲ್ಲವೆ ದುರ್ಗಾ ಇಲ್ಲವೆ ರಾಮ ಇವರುಗಳ ಹೆಸರೆತ್ತಿದೆನೆಂದ ಮೇಲೆ, ನನಗೆ ಪಾಪವೆಂಬುದು ಹೇಗೆ ಬಂದೀತು?' ಎಂಬ ದೃಢ ವಿಶ್ವಾಸ ಅವರದು.

"ವೈಷ್ಣವರು ಹಾಗಲ್ಲ. ಅವರ ಭಕ್ತಿಯಲ್ಲಿ 'ಇಲ್ಲ' ಎಂಬುದೇ ಮುಖ್ಯ. ಸದಾ ತನ್ನನ್ನು ಅಲ್ಪನನ್ನಾಗಿ ಮಾಡಿಕೊಂಡು, ಬೇಡಿ ಮಣಿಯುವವರು ಅವರು. ಅಂಥವರು ಯಾವಾಗಲೂ ಜಪಸರವನ್ನು ತಿರುವುತ್ತಾರೆ, ಅಲ್ಲಿದ್ದ ಬಲರಾಮನ ತಂದೆಯನ್ನು ತೋರಿಸುತ್ತ, ದೇವರೊಡನೆ 'ಓ, ಕೃಷ್ಣಾ. ನನ್ನ ಮೇಲೆ ಕರುಣೆಯನ್ನಿಡು. ನಾನು ತೀರ ಕ್ಷುಲ್ಲಕಜೀವಿ; ನಾನು ಪಾಪಿ' ಎಂದು ಮೊರೆಯಿಡುತ್ತಿರುತ್ತಾರೆ.

"ಒಬ್ಬನಲ್ಲಿ ಭಗವನ್ನಾಮಸ್ಮರಣೆಯಿಂದ ತನ್ನೆಲ್ಲ ಪಾಪಗಳು ಧ್ವಂಸವಾಗುತ್ತವೆ ಎಂಬ ಅಖಂಡವಾದ ವಿಶ್ವಾಸವಿರಬೇಕು. ಒಬ್ಬಾತನು ಹಗಲು ರಾತ್ರಿಯೂ ದೇವರ ನಾಮಸ್ಮರಿಸುತ್ತಲೇ ಇದ್ದು, ತಿರುತಿರುಗಿ ಅದೇ ಉಸಿರಿಂದ, 'ನಾನು ಪಾಪಿ' ಎಂದರೆ ಏನು ಅರ್ಥ ? ✻



## ಕಾರ್ಮಿಕರ ಹಿತರಕ್ಷಣೆ

ನೌಕರದಾರರು, ಕೂಲಿಕಾರರು ಮೊದಲಾದವರು ಕರಾರಿನ ಪ್ರಕಾರ ಕೆಲಸ ಮಾಡಿ ವೇತನ ಪಡೆಯಬೇಕು. ಗೋಪಾಲಕರು ಅಥವಾ ಒಕ್ಕಲಿಗರು ಹೈನದ ಅಥವಾ ಬೆಳೆಯ ಹತ್ತನೆಯ ಪಾಲು ಪಡೆಯಬೇಕು. ಕಸಬುದಾರರು, ಶಿಲ್ಪಿಗಳು, ಗಾಯಕರು, ಚಿಕಿತ್ಸಕರೇ ಮೊದಲಾದವರು ಅಂಥ ಕೆಲಸದಲ್ಲಿ ತೊಡಗಿದ ಇತರರು ಎಷ್ಟು ಪಡೆಯುವರೊ ಅಷ್ಟು ಅಥವಾ ತಜ್ಞರು ಗೊತ್ತು ಮಾಡಿದಷ್ಟು ಪಡೆಯಬೇಕು.

ಕೂಲಿ ತೆಗೆದುಕೊಂಡು ಕೆಲಸ ಮಾಡದಿದ್ದರೆ ದಂಡ. ಆದರೆ ಬೇನೆ ಬೇಸರಿಕೆ ಉಂಟಾದಾಗ ಮತ್ತು ಸಂಕಟ ಪ್ರಾಪ್ತವಾದಾಗ ಸವಲತ್ತು ತೋರಿಸಬೇಕು. ಕೂಲಿಕಾರರು ಕೆಲಸಕ್ಕೆ ಬಂದಾಗ ಅವರಿಂದ ಕೆಲಸ ಮಾಡಿಸಿಕೊಳ್ಳದಿದ್ದರೂ ಕೂಲಿ ಕೊಡಬೇಕು ಎಂಬ ಆಚಾರ್ಯರ ಅಭಿಪ್ರಾಯ ಸ್ವೀಕಾರಾರ್ಹವಲ್ಲ. ತುಸು ಕೆಲಸ ಮಾಡಿಸಿಕೊಂಡು ಉಳಿದುದನ್ನು ಮಾಡಿಸಿಕೊಳ್ಳದಿದ್ದವನ ಎಲ್ಲ ಕೆಲಸ ಮುಗಿಸಿದಂತೆಯೆ ಎಂದು ತಿಳಿದುಕೊಳ್ಳಬೇಕು, ಕೆಲಸದ ವೇಳೆಯನ್ನೂ ಸ್ಥಳವನ್ನೂ ಕೂಲಿಕಾರರು ತಪ್ಪಿಸಕೂಡದು. ಹೇಳಿದ್ದಕ್ಕಿಂತ ಹೆಚ್ಚಿನ ಕೆಲಸ ಮಾಡಿದರೆ ಮಾಲಿಕ ಅದನ್ನು ವ್ಯರ್ಥ ಹೋಗಗೊಡಬಾರದು.

—'ಕೌಟಿಲ್ಯನ ಅರ್ಥಶಾಸ್ತ್ರ'ದಿಂದ



# ಆಕಾಶದಲ್ಲಿ ಆರ್ಯಭಟ

## ಆಕಾಶ ರಾಷ್ಟ್ರಗಳ ಮಾಲಿಕೆಯಲ್ಲಿ ಭಾರತ

**ಜಿ. ಟಿ. ನಾರಾಯಣರಾವ್**

ಏಪ್ರಿಲ್ ೨೦ರ ಮುಂಜಾನೆಯ ವೃತ್ತಪತ್ರಿಕೆಗಳು ಆರ್ಯಭಟದ ಉಡ್ಡಾಣದ ಸುದ್ದಿಯನ್ನು ಹೊತ್ತು ತರುವವರೆಗೆ ಜನಸಾಮಾನ್ಯರಿಗೆ ಇಂಥ ಒಂದು ಯೋಜನೆಯ ಸುಳಿವು ಕೂಡ ಹೊಳೆದಿರಲಿಲ್ಲ. ಆದ್ದರಿಂದ ಭಾರತವು ಆಕಾಶ ಯುಗದಲ್ಲಿ ಕಾಲಿರಿಸಿದ್ದು ಮತ್ತು ಆಕಾಶ ರಾಷ್ಟ್ರಗಳ ಸಮುದಾಯವನ್ನು ಸೇರಿದ್ದು ತೀರ ಹಠಾತ್ತಾಗಿ ಎಂದೆನ್ನಿಸಿರಬಹುದು. ಘಟನೆಯ ಪ್ರಕಟಣೆ ಮಾತ್ರ ಹಠಾತ್ತೇ ಹೊರತು ಅದರ ಹಿನ್ನೆಲೆಯಲ್ಲಿನ ಪ್ರಯತ್ನ, ಸಾಧನೆ, ಸಿದ್ಧಿ ಹಾಗಲ್ಲ.

### ಆಕಾಶಯುಗ

ನಮ್ಮ ಮನೆಯಾದ ಭೂಮಿ ಸರಾಸರಿ ೧೨.೭೦೦ ಕಿಲೋಮೀಟರ್ ವ್ಯಾಸವಿರುವ ಒಂದು (ಸರಿ ಸುಮಾರು) ಗೋಳ. ಇದರ ಸುತ್ತ ಹಬ್ಬಿಕೊಂಡಿರುವ ವಾಯುಮಂಡಲದ ಅರ್ಧಾಂಶ ಭೂಮಿಗೆ ಒತ್ತಾಗಿ ಹೆಚ್ಚು ಕಡಿಮೆ ೬ ಕಿಲೋಮೀಟರ್ ಒಳಗೆ ದಟ್ಟಣಿಸಿಕೊಂಡಿದೆ. ಅಲ್ಲಿಂದ ಮೇಲೆ ಮೇಲೆ ಏರಿದಂತೆ ಇದು ಗಮನಾರ್ಹವಾಗಿ ವಿರಳವಾಗುತ್ತ. ಪ್ರಾಯಶಃ, ೧೬೦೦ ಕಿಲೋಮೀಟರ್ ಎತ್ತರದಿಂದ ಆಚೆಗೆ ಪೂರ್ಣವಾಗಿ ಇಲ್ಲವಾಗುವುದು.

ಆಕಾಶಯುಗ, ಆಕಾಶರಾಷ್ಟ್ರ, ಆಕಾಶಯಾನ ಎಂಬ ಪದಗಳನ್ನು ಬಳಸುವಾಗ ನಾವು ತಿಳಿಯುವ 'ಆಕಾಶ' ದಟ್ಟವಾಯುಮಂಡಲದ ಆಚೆಗಿನದು. ಅಂದರೆ ೬ ಕಿಲೋಮೀಟರ ಎತ್ತರದಿಂದ ಹೊರಗಿನದು; ಅಲ್ಲಿಗೆ ನಮ್ಮ

ಯಾವ ವಿಮಾನಗಳೂ ಹೋಗಲಾರವು; ಏಕೆಂದರೆ ಸಾಂಪ್ರದಾಯಿಕ ವಿಮಾನಗಳೇ ಆಗಲಿ ಜೆಟ್ ವಿಮಾನಗಳೇ ಆಗಲಿ ತಾತ್ತ್ವಿಕವಾಗಿ ಅವು ವಾಯು ಸಮುದ್ರದಲ್ಲಿ ಸಾಗುವ ನಾವೆಗಳು. ತಟ್ಟೆ ನೀರಿನಲ್ಲಿ ನಾವೆಗಳು ಸಂಚರಿಸಲಾರವಷ್ಟೆ. ಹಾಗೆಯೇ ವಿರಳ ವಾಯುವಿನಲ್ಲಿ ವಿಮಾನಗಳು ಹಾರಲಾರವು; ಆದ್ದರಿಂದ ಆಕಾಶಯಾನಕ್ಕೆ ಬೇಕಾಗುವ ವಾಹನ ಬೇರೆಯೇ ಆಗಬೇಕಾಗುವದು. ಇಂಥ ನೂತನ ವಾಹನದ ನಿರ್ಮಾಣ ಸಫಲವಾದದ್ದು ೧೯೫೭ ರಲ್ಲಿ. ಆ ವರ್ಷದ ಅಕ್ಟೋಬರ ೪ ರಂದು ಸ್ಪೂತ್ನಿಕ್–೧ (ರಶ್ಯ) ಆಕಾಶ ಯುಗವನ್ನು ಆವಾಹಿಸಿತು.

೧೯೫೭ರಿಂದ ಈವರೆಗಿನ ಹದಿನೆಂಟು ವರ್ಷಗಳಲ್ಲಿ 'ಆಕಾಶರಾಷ್ಟ್ರ' (ಅಂದರೆ ಆಕಾಶ ಯಾನವನ್ನು ನಿಭಾಯಿಸಿರುವ ದೇಶ) ಎಂಬ ಅಂತಸ್ತನ್ನು ಪಡೆದಿರುವ ರಾಷ್ಟ್ರಗಳಿವು: ರಶ್ಯ, ಅಮೇರಿಕ, ಇಂಗ್ಲೆಂಡ್, ಕೆನಡ, ಇಟಲಿ, ಫ್ರಾನ್ಸ್, ಪಶ್ಚಿಮ ಜರ್ಮನಿ, ಚೀನ, ಆಸ್ಟ್ರೇಲಿಯ, ಜಪಾನ್ ಹಾಗೂ ಭಾರತ. ಒಂದು ದೇಶದ ಶುದ್ಧ ಹಾಗೂ ತಂತ್ರ ವಿಜ್ಞಾನಗಳ ಪ್ರಗತಿಯನ್ನೂ ಕೈಗಾರಿಕೋದ್ಯಮದ ಉತ್ಕರ್ಷೆಯನ್ನೂ ಅಳೆಯಲು ಬಳಸುವ ಒಂದು ಮಾನದಂಡವೆಂದರೆ ಆಕಾಶ ತಂತ್ರವಿಜ್ಞಾನದಲ್ಲಿ ಅದು ಸಾಧಿಸಿರುವ ಹಿರಿಮೆ. ಭಾರತದ ಸುಪ್ರಸಿದ್ಧ ಖಗೋಳ ವಿಜ್ಞಾನಿ ಆರ್ಯಭಟನ (ಕ್ರಿಸ್ತ ಶಕ ಐದನೆಯ ಶತಮಾನ) ಹೆಸರನ್ನು ಅರ್ಥಪೂರ್ಣವಾಗಿ ಪಡೆದು ಈಗ ಆಕಾಶದಲ್ಲಿ ಭೂಮಿಯ ಸುತ್ತ ತಿರುಗುತ್ತಿರುವ ಆರ್ಯಭಟ ಕೃತಕ ಉಪಗ್ರಹವು ಖಂಡಿತವಾಗಿಯೂ ಭಾರತೀಯ ವಿಜ್ಞಾನದ ಪ್ರಬುದ್ಧತೆಯ ಪ್ರತೀಕ.

ಸೂರ್ಯ ಒಂದು ನಕ್ಷತ್ರ— ಅಂದರೆ ಉರಿಯುತ್ತಿರುವ ಅನಿಲಗೋಳ. ಇದರ ಸುತ್ತಲೂ ವಿವಿಧ ದೂರಗಳಲ್ಲಿ ಪರಿಭ್ರಮಿಸುವ ಕಾಯಗಳಿಗೆ ಗ್ರಹಗಳೆಂದು ಹೆಸರು; ಇವು ಜಡವಸ್ತುಗಳು (ಉರಿಯುತ್ತಿಲ್ಲ ಎನ್ನುವ ಅರ್ಥದಲ್ಲಿ). ಭೂಮಿ ಒಂದು ಗ್ರಹ. ಗ್ರಹದ ಸುತ್ತಲೂ ಕಕ್ಷಿಸುವ ಕಾಯಕ್ಕೆ ಉಪಗ್ರಹವೆಂದು ಹೆಸರು. ಚಂದ್ರ ಭೂಮಿಯ ಏಕೈಕ ನೈಸರ್ಗಿಕ ಉಪಗ್ರಹ. ಭೂಮಿಯ ಸುತ್ತ (ಅಥವಾ ಬೇರೆ ಯಾವುದೇ ಆಕಾಶಕಾಯದ ಸುತ್ತ) ಪರಿಭ್ರಮಿಸುವಂತೆ ಮನುಷ್ಯ ಉಡಾಯಿಸುವ ವಸ್ತುಗಳನ್ನು ಕೃತಕ ಉಪಗ್ರಹಗಳೆಂದು ಕರೆಯುತ್ತೇವೆ. ಆದ್ದರಿಂದ ನಮ್ಮ ಆಧುನಿಕ ಆರ್ಯಭಟ ಭೂಮಿಯ ಒಂದು ಕೃತಕ ಉಪಗ್ರಹ. ಇದರ ಅಸ್ತಿತ್ವದೊಡನೆ ಭಾರತವೂ ಆಕಾಶ ರಾಷ್ಟ್ರವಾಯಿತು (೧೯–೪–೧೯೭೫)

## ಉಡಾವಣೆ

ಉಪಗ್ರಹದ ಉಡಾವಣೆಯಲ್ಲಿ ಎರಡು ಮುಖ್ಯ ಘಟ್ಟಗಳಿವೆ: ನೆಲದಿಂದ ಆಕಾಶಕ್ಕೆ ನೆಗೆತ, ಕಕ್ಷೆಗೆ ಉಪಗ್ರಹದ ತೂರಿಕೆ. ಉಪಗ್ರಹಕ್ಕೆ ಸ್ವತಃ ನೆಗೆಯಲಾಗಲಿ ಕಕ್ಷೆಗೆ ತೂರಿಕೊಳ್ಳಲಾಗಲಿ ಸಾಧ್ಯವಾಗುವುದಿಲ್ಲ. ಅದನ್ನು ಹೊತ್ತು, ಯುಕ್ತ ಎತ್ತರಕ್ಕೆ ಒಯ್ದು, ಅಲ್ಲಿಂದ ಕಕ್ಷೆಗೆ ತಳ್ಳಲು ಒಂದು ವಾಹನ ಬೇಕು. ಇದರ ಹೆಸರು ರಾಕೆಟ್. ಉಡಾವಣೆಯ ಮೊದಲು ರಾಕೆಟ್ ತನ್ನ ಶಿರದ ಮೇಲೆ ಉಪಗ್ರಹವನ್ನು ಹೊತ್ತು ನೆಲಕ್ಕೆ ಲಂಬವಾಗಿ ನಿಂತಿರುತ್ತದೆ. ರಾಕೆಟನ್ನು ಆಸ್ಫೋಟಿಸಿದಾಗ ಅದು ಅಗ್ನಿಜ್ವಾಲೆಯನ್ನು ಹಿಮ್ಮೊಗವಾಗಿ ಕಾರುತ್ತ ಮೇಲೆ ಮೇಲೆ ವಕ್ರರೇಖಾತ್ಮಕ ಪಥದಲ್ಲಿ ಧಾವಿಸುವುದು. (ರಾಕೆಟ್‌ನ ಇಂಧನ ಉರಿಯಲು ವಾಯುಮಂಡಲ ಬೇಕಾಗಿಲ್ಲ.)

ಆರ್ಯಭಟ ಉಪಗ್ರಹದ ಆಲೇಖ್ಯವನ್ನು ತಯಾರಿಸಿ ಅದರ ನಿರ್ಮಾಣವನ್ನು ಪೂರೈಸಿದವರು ಭಾರತೀಯ ವಿಜ್ಞಾನಿಗಳು. ಇದರ ಕೆಲವೊಂದು ಅತಿಸೂಕ್ಷ್ಮ ಬಿಡಿಭಾಗಗಳ ಹಾಗೂ ಉಪಕರಣಗಳ ಹೊರತಾಗಿ ಉಳಿದೆಲ್ಲವೂ ಸ್ವದೇಶೀಯವೇ. ಆದರೆ ಇದರ ಉಡಾವಣೆಗೆ ಬೇಕಾದ ರಾಕೆಟ್ ವಾಹನ ಭಾರತದಲ್ಲಿ ಇರಲಿಲ್ಲ. ಹೀಗಾಗಿ ಮಿತ್ರರಾಷ್ಟ್ರವಾದ ರಶ್ಯದ ಸೇವೆಯನ್ನು ಭಾರತ ಪಡೆಯುವುದು ಅನಿವಾರ್ಯವಾಯಿತು. ಉಡಾವಣೆ ನಡೆದದ್ದು ಮಾಸ್ಕೊ ಸಮೀಪದ ಒಂದು

ಸ್ಥಳದಿಂದ. ಅಂದ ಮಾತ್ರಕ್ಕೆ ಭಾರತ ಈಗ ಸಾಧಿಸಿರುವ ಯಶಸ್ಸು ಏನೂ ಕಡಿಮೆಯದಲ್ಲ! ಸ್ವದೇಶೀ ನಿರ್ಮಿತ ಉಪಗ್ರಹವೊಂದು ಉಡಾವಣೆ ಕಾಲದ ಹಾಗೂ ತದನಂತರದ ಸಮಸ್ತ ಕಠಿನ ಹಾಗೂ ದುರ್ಧರ ಸನ್ನಿವೇಶಗಳನ್ನು ಎದುರಿಸಿ ತನಗೆ ವಿಧಿಸಿದ ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸುತ್ತಿದೆ ಎಂಬುದೊಂದೇ ಸಾಕು, ಇದರ ಹಿರಿಮೆಯನ್ನು ಸಾರಲು.

ಒಂದು ಯಶಸ್ವಿ ಉಪಗ್ರಹ ಕೆಲವು ಮುಖ್ಯ ನಿಯಮಗಳನ್ನು ಪಾಲಿಸಬೇಕಾಗುತ್ತದೆ.

ಮೊದಲನೆಯದಾಗಿ, ಉಪಗ್ರಹ ದಟ್ಟ ವಾಯುಮಂಡಲದಿಂದ (೬ ಕಿಲೋಮೀಟರ್ ಪರಿಮಿತಿ) ಆಚೆಗೆ ಇರಬೇಕು. ಇಲ್ಲವಾದರೆ ವಾಯುವಿನ ಅಣುಗಳೊಂದಿಗೆ ಸತತವಾಗಿ ಘರ್ಷಣೆ ಸಂಭವಿಸಿ ಅದು ಬೇಗನೆ ನಾಶವಾಗಿ ಹೋಗುತ್ತದೆ. ಆರ್ಯಭಟದ ಕಕ್ಷೆಯು ಭೂಮಿನೀಚಬಿಂದು (ದೀರ್ಘ ವೃತ್ತಾಕಾರದಲ್ಲಿ ಇರುವ ಕಕ್ಷೆಯಲ್ಲಿ ಭೂಮಿಗೆ ಸಮೀಪತಮ ಬಿಂದು) ೫೬೪ ಕಿಲೋಮೀಟರ್ ಎತ್ತರದಲ್ಲಿಯೂ ಭೂಮ್ಯುಚ್ಚಬಿಂದು (ದೂರತಮ ಬಿಂದು) ೬೨೩ ಕಿಲೋಮೀಟರ್ ಎತ್ತರದಲ್ಲಿಯೂ ಇವೆ.

ಎರಡನೆಯದಾಗಿ, ಉಪಗ್ರಹದ ಕಕ್ಷಾವೇಗದ ಪರಿಮಿತಿಗಳು. ನಾವು ಎಸೆದ ಯಾವುದೇ ಕಲ್ಲು ಎಂದೂ ಸರಳರೇಖೆಯ ಮೇಲೆ ಸಾಗುವುದಿಲ್ಲ. ಅದು ಒಂದು ವಕ್ರರೇಖೆಯಲ್ಲಿ ತೆರಳಿ ಇನ್ನೆಲ್ಲೋ ಭೂಮಿಯ ಮೇಲೆ ಬೀಳುತ್ತದೆ. ಭೂಮಿ ಒಂದು ಗೊತ್ತಾದ ಬಲದಿಂದ ಸಮಸ್ತ ವಸ್ತುಗಳನ್ನೂ ತನ್ನ ಕೇಂದ್ರದೆಡೆಗೆ ಆಕರ್ಷಿಸುವುದರಿಂದ ಹೀಗಾಗುವುದು. ಈ ಬಲಕ್ಕೆ ಗುರುತ್ವ ಎಂದು ಹೆಸರು. ಆದ್ದರಿಂದ ಯಾವುದೇ ವಸ್ತು ಉಡಾವಣೆಗೊಂಡ ಬಳಿಕ ಭೂಮಿಯ ಮೇಲೆ ಬೀಳದೆಯೂ ಗುರುತ್ವದ ಸೆಳೆತದಿಂದ ತಪ್ಪಿಸಿಕೊಂಡು ಹೋಗದೆಯೂ (ಅಂದರೆ ಅದು ಭೂಮಿಯ ಸುತ್ತ ಪರಿಭ್ರಮಿಸುತ್ತಲೇ) ಇರಬೇಕಾದರೆ ಅದನ್ನು ಯಾವ ಎತ್ತರದಲ್ಲಿ ಎಷ್ಟು ಪ್ರಾರಂಭಿಕವೇಗ ಮತ್ತು ಕೋನಗಳಿಂದ ಕಕ್ಷೆಗೆ ತಳ್ಳಬೇಕು ಎಂಬುದನ್ನು ಗಣಿಸಬಹುದು. ಆರ್ಯಭಟದ ರಚನೆ ಗಾತ್ರ ತೂಕಗಳನ್ನು ಅವಲಕ್ಷಿಸಿ, ಮೇಲಿನ ಅವಶ್ಯಕತೆಗಳ ರೀತ್ಯ ಅದನ್ನು ಉಡಾಯಿಸಿದ್ದರಿಂದಲೇ ಈ ಪ್ರಯೋಗ ಯಶಸ್ವಿ ಆಯಿತು. ಇದರಲ್ಲಿ ಏನಾದರೂ ತಪ್ಪು ಆಗಿದ್ದರೆ ಆಗ ಆರ್ಯಭಟ ನೆಲಕ್ಕೆ ಬಡಿದು, ಆ ಮುನ್ನವೇ ಉರಿದು ಹೋಗಿರದಿದ್ದರೆ, ನುಚ್ಚುನೂರಿ ಆಗಿರುತ್ತಿತ್ತು, ಇಲ್ಲವೇ ಆಕಾಶದ ಮಹಾ ವಿಸ್ತಾರದಲ್ಲಿ ಹೇಳಹೆಸರಿಲ್ಲದೇ ಮಾಯವಾಗಿ ಹೋಗಿರುತ್ತಿತ್ತು. ಆರ್ಯಭಟ ಸರಾಸರಿ ೬೦೦ ಕಿಲೋಮೀಟರ್ ಎತ್ತರದಲ್ಲಿ ಭೂಮಿಗೆ ಪ್ರತಿ ೯೬ ನಿಮಿಷಗಳಿಗೊಮ್ಮೆ ಸುತ್ತು ಬರುತ್ತಿದೆ ಎಂಬುದನ್ನು ಗಮನಿಸಿದರೆ ಇದರ ಸರಾಸರಿ ಕಕ್ಷಾವೇಗ ಗಂಟೆಗೆ ೨೮,೦೦೦ ಕಿಲೋಮೀಟರ್ ಆಗುವುದು.

ಮೂರನೆಯದಾಗಿ, ಕಕ್ಷೆಯಲ್ಲಿ ಉಪಗ್ರಹದ ಸ್ಥಿರತೆ. ಅಯನಿಸುತ್ತಿರುವ ಬುಗರಿ (ಅಂದರೆ ನೆಲಕ್ಕೆ ಸ್ವಲ್ಪ ವಾಲಿಕೊಂಡು ಗಿರಕಿಸುತ್ತಿರುವ ಬುಗರಿ), ಸರ್ಕಸಿನಲ್ಲಿ ನಾವು ಕಾಣುವ ಬೂಮರಾಂಗ (ಎಸೆದಲ್ಲಿಂದ ಗಿರಕಿಸುತ್ತ ದೂರ ಸಾಗಿ ಮತ್ತೆ ಹಿಂತಿರುಗಿ ಎಸೆದವನಲ್ಲಿಗೆ ಬರುವ ಒಂದು ಸಾಧನ) ಅಥವಾ, ಹೆಚ್ಚೇಕೆ, ಮಟ್ಟಸ ನೇರಹಾದಿಯ ಮೇಲೆ ಉರುಳಿ ಬಿಟ್ಟ ಒಂದು ಗಾಲಿ–ಇವೆಲ್ಲವೂ ತಮ್ಮ ಚಲನೆಯ ವೇಳೆ ಸ್ಥಿರತೆಯನ್ನು ಪಡೆದಿರುವುವು. ಸ್ಥಿರತೆಯನ್ನು ಕಳೆದುಕೊಂಡ ಒಡನೆಯೇ ಅವು ಯದ್ವಾತದ್ವಾ ಹರಿದಾಡಿ ಬಿದ್ದು ಹೋಗುತ್ತವೆ. ಇದೇ ವಿಧದ ಕಕ್ಷಾಸ್ಥಿರತೆ ಆರ್ಯಭಟಕ್ಕೂ ಅಗತ್ಯ. ಇಲ್ಲವಾದರೆ ಅದು ಸಮತೂಕ ತಪ್ಪಿದ ಉರುಳು



ಗಾಳಿಯಂತೆ ವರ್ತಿಸಿ ಬೇಗನೆ ಕಕ್ಷೆಯಿಂದ ಉಚ್ಚಾಟನೆಗೊಂಡು ನಾಶವಾಗಿ ಹೋದೀತು. ಇನ್ನೂ ಒಂದು ಮುಖ್ಯ ಕಾರಣಕ್ಕಾಗಿ ಕಕ್ಷಾ ಸ್ಥಿರತೆಯು ಪ್ರತಿಯೊಂದು ಉಪಗ್ರಹಕ್ಕೂ ಅನಿವಾರ್ಯ. ಒಂದು ಉಪಗ್ರಹವು ಅದಕ್ಕೆ ವಿಧಿಸಿದ ಹಲವಾರು ಕರ್ತವ್ಯಗಳನ್ನು ನಿರ್ವಹಿಸಬೇಕು. ಆದ್ದರಿಂದ ಅದರ ಚಲನೆಯಲ್ಲಿ ಒಂದು ಸ್ಥಿರತೆ ಮತ್ತು ಅದರ ವಿನ್ಯಾಸದಲ್ಲಿ ಒಂದು ಕ್ರಮ ಇರಬೇಕಾಗುತ್ತದೆ. ಇಂಥ ಸ್ಥಿರತೆಯನ್ನು ಉಪಗ್ರಹಕ್ಕೆ ನೀಡುವ ಏರ್ಪಾಡಿಗೆ ಗಿರಕಿ ಸ್ಥಿರೀಕರಣ ವ್ಯವಸ್ಥೆ ಎಂದು ಹೆಸರು. ಆರ್ಯಭಟಕ್ಕೆ ಜೋಡಿಸಿರುವ ಈ ವ್ಯವಸ್ಥೆಯಲ್ಲಿ ಟೈಟಾನಿಯಮ್ ಲೋಹದಿಂದ ರಚಿಸಿರುವ ಆರು ಉರುಳೆಗಳಿವೆ. ಇವುಗಳೊಳಗೆ ಅತ್ಯುನ್ನತ ಸಂಮರ್ದದಲ್ಲಿರುವ ನೈಟ್ರೋಜನ್ ಅನಿಲವನ್ನು ತುಂಬಿ ಇವನ್ನು ಆರ್ಯಭಟದ ತಳದಲ್ಲಿ ಒಂದು ವೃತ್ತದ ಮೇಲೆ ಅಳವಡಿಸಿದೆ. ಉಪಗ್ರಹವನ್ನು ಕಕ್ಷೆಗೆ ತಳ್ಳಿದ ಮರುಕ್ಷಣದಲ್ಲೇ ಈ ಉರುಳೆಗಳ ಪೈಕಿ ಎರಡು ತೆರೆದುಕೊಂಡು ಅವುಗಳಿಂದ ಅನಿಲಧಾರೆಗಳು ವಿರುದ್ಧ ದಿಶೆಗಳಲ್ಲಿ ಹೊರ ಚಿಮ್ಮಿದವು. ಆಗ ಉತ್ಪನ್ನವಾದ ವಿರುದ್ಧ ದಿಶೆಯ ಬಲಗಳು (ಕೈಗಾಣದ ಅಡ್ಡದಿಂಡನ್ನು ಒಂದೊಂದು ಕೊನೆಯಲ್ಲಿ ಒಬ್ಬರಂತೆ ಎದುರು ಬದುರಾಗಿ ಇಬ್ಬರು ನೂಕಿದಾಗ ಅದು ಭರದಿಂದ ತಿರುಗುವಂತೆ) ಆರ್ಯಭಟನಿಗೆ ಸ್ವಮಿತ ಗಿರಕಿಯನ್ನೂ ಅಗತ್ಯ ವಿನ್ಯಾಸವನ್ನೂ ಒದಗಿಸಿದುವು. ಅಂದರೆ ಉಪಗ್ರಹವು ಅದರ ಕಕ್ಷಾಚಲನೆಯ ಜೊತೆಗೆ ಸ್ವಮಿತವಾಗಿ ತನ್ನ ಸುತ್ತ ಆವರ್ತಿಸಲು ಸಹ ಆರಂಭಿಸಿತು; ಇದರೊಂದಿಗೆ ಆವರ್ತನಾಕ್ಷ ಆಕಾಶದಲ್ಲಿ ಸದಾ ಒಂದೇ ದಿಶೆಯನ್ನು ಕಾಪಾಡಿಕೊಳ್ಳುವಂತೆಯೂ ಆಯಿತು. ಆರ್ಯಭಟನ ಗಿರಕಿಯ ವೇಗ ಮಿನಿಟೊಂದರ ೫೦ ಆವರ್ತನೆಗಳು. (ಭೂಮಿ ೨೪ ಗಂಟೆಗಳಲ್ಲಿ–ಒಂದು

ಉಪಗ್ರಹ ಆರ್ಯಭಟ



ದಿವಸ-ಆವರ್ತಿಸುತ್ತ, ೩೬೫.೨೪೨೨ ದಿವಸಗಳಲ್ಲಿ-ಒಂದು ವರ್ಷ-ಸೂರ್ಯನ ಸುತ್ತ ಪರಿಭ್ರಮಿಸುತ್ತಿದೆ; ಈ ಹೋಲಿಕೆಯ ರೀತ್ಯ ಆರ್ಯಭಟನ 'ದಿವಸ' ೧.೨ ಸೆಕೆಂಡುಗಳು ಮತ್ತು 'ವರ್ಷ' ೯೬ ಮಿನಿಟುಗಳು.) ಉಪಗ್ರಹದ ಗಿರಕಿ ದರ ಮಂದವಾದಾಗ ಭೂಮಿಯಿಂದ ಪ್ರೇಷಿಸಿದ ಆಜ್ಞಾನುಸಾರ ಇತರ ಉರುಳೆಗಳನ್ನು ತೆರೆಯುವಂತೆ ಮಾಡಿ ಹೊಸ ಅನಿಲಧಾರೆಗಳನ್ನು ಪ್ರವರ್ತಿಸಿ ಗಿರಕಿ ದರವನ್ನು ಕಾಯ್ದಿಟ್ಟುಕೊಳ್ಳುವುದು ಸಾಧ್ಯ. ಈಗಿನ ಲೆಕ್ಕಾಚಾರದಂತೆ ಟೈಟಾನಿಯಮ್ ಉರುಳೆಗಳು ಹೆಚ್ಚುಕಡಿಮೆ ಆರು ತಿಂಗಳುಗಳಲ್ಲಿ ಖಾಲಿ ಆಗುವುದರಿಂದ ಉಪಗ್ರಹದ ಉಪಯುಕ್ತ ಜೀವಿತಾವಧಿ ಅಷ್ಟೇ ಎಂದಿದೆ. ಆದರೆ ಅದು ಸುಮಾರು ೩೦ ತಿಂಗಳ ಕಾಲ ಕಕ್ಷಾಸಂಚಾರಿಯಾಗಿರುವ ಸಾಧ್ಯತೆ ಉಂಟು.

ನಾಲ್ಕನೆಯದಾಗಿ, ಸ್ವತಃ ಉಪಗ್ರಹದ ಹಾಗೂ ಅದರಲ್ಲಿ ಅಳವಡಿಸಿರುವ ಸೂಕ್ಷ್ಮೋಪಕರಣಗಳ ಭದ್ರತೆ ಮತ್ತು ಉಳಿವು. ಉಡಾವಣೆಯ ವೇಳೆ ಉಪಗ್ರಹ ಅತ್ಯಂತ ಪ್ರಬಲವಾದ ನೂಕ ಬಲಕ್ಕೆ ಈಡಾಗುತ್ತದೆ. ತರುವಾಯ ಅದು ಅಸಾಧಾರಣ ಕಕ್ಷಾವೇಗದಿಂದ (ಗಂಟೆಗೆ ೨೮,೦೦೦ ಕಿಲೋಮೀಟರ್) ಭೂಮಿಯ ಸುತ್ತ ಪರಿಭ್ರಮಿಸುತ್ತಿರುವುದು. ಅದೇ ವೇಳೆ ಅದು ಎದುರಿಸುವ ಉಷ್ಣತೆಗಳಲ್ಲಿನ ಏರಿಳಿತಗಳು ಅತಿ ತೀವ್ರ: ಧನ ಎಪ್ಪತ್ತೈದು ಡಿಗ್ರಿ ಸೆಲ್ಸಿಯಸಿನಿಂದ ಋಣ ನೂರು ಡಿಗ್ರಿ ಸೆಲ್ಸಿಯಸ್ ವರೆಗೆ (ನೀರು ಸೊನ್ನೆ ಡಿಗ್ರಿಯಲ್ಲಿ ಬರ್ಫವಾಗುತ್ತದೆ, ನೂರು ಡಿಗ್ರಿಯಲ್ಲಿ ಕುದಿಯುತ್ತದೆ). ಉಪಗ್ರಹದ ಹೊರಮೈ ಈ ಏರಿಳಿತಗಳನ್ನು ಎದುರಿಸಿ ಭದ್ರವಾಗಿ ಉಳಿಯಬೇಕು. ಮಾತ್ರವಲ್ಲ, ಒಳಗಿನ ಕೋಮಲಭಾಗಗಳಿಗೆ ಘಾಸಿ ಆಗದಂತೆ ರಕ್ಷಣೆಯನ್ನೂ ಒದಗಿಸಬೇಕು. ಆರ್ಯಭಟದ ಅಂತರಿಕ ಉಷ್ಣತೆ ಸೊನ್ನೆ ಡಿಗ್ರಿ ಸೆಲ್ಸಿಯಸಿನಿಂದ ನಲವತ್ತು ಡಿಗ್ರಿ ಸೆಲ್ಸಿಯಸ್ ವ್ಯಾಪ್ತಿಯೊಳಗೆ ಇದ್ದರೆ ಮಾತ್ರ ಉಪಕರಣಗಳು ಕೆಲಸ ಮಾಡಿಯಾವು. ಆರ್ಯಭಟದ ವಿವಿಧ ಭಾಗಗಳನ್ನು ಯುಕ್ತ ಲೋಹಗಳಿಂದ ರಚಿಸಿ ಅವನ್ನು ರಾಸಾಯನಿಕ ಸಂಸ್ಕರಣಕ್ಕೆ ಒಳಪಡಿಸಿ ಈ ಆವಶ್ಯಕತೆಗಳನ್ನು ಒದಗಿಸಲಾಗಿದೆ. ಆಕಾಶ ಎದುರೊಡ್ಡುವ ಕಠಿನ ಸವಾಲುಗಳನ್ನು ಆರ್ಯಭಟ ಜಯಪ್ರದವಾಗಿ ಬಗೆಹರಿಸುತ್ತಿರುವುದರಿಂದ ನಮ್ಮ ಶಿಲ್ಪಿಗಳ ಪ್ರಯತ್ನಗಳು ಸಫಲವಾಗಿವೆ.

## ಇತರ ವಿವರಗಳು

ಆರ್ಯಭಟಕ್ಕೆ ನೀಲ ಮತ್ತು-ನೇರಿಳೆ-ಬಣ್ಣದ ಇಪ್ಪತ್ತಾರು ಮಟ್ಟದ ಮುಖಗಳಿವೆ: ಅಗ್ರದಲ್ಲಿಯೂ ತಳದಲ್ಲಿಯೂ ಒಂದೊಂದು, ಎಂಟು ಊರ್ಧ್ವ ಮುಖಗಳು. ಪ್ರತಿಯೊಂದು ಊರ್ಧ್ವಮುಖಕ್ಕೂ ಮೇಲೊಂದು ಕೆಳಗೊಂದು ಓರೆ ಮುಖಗಳು. ಇದರ ತೂಕ ೩೬೦ ಕಿಲೋಗ್ರಾಮ್, ಎತ್ತರ ೧೧೮ ಸೆಂಟಿಮೀಟರ್, ವ್ಯಾಸ ೧೪೭ ಸೆಂಟಿಮೀಟರ್. ಆರ್ಯಭಟದ ಕವಚದ ರಚನೆಗೆ ವಿಶೇಷವಾದ ಅಲ್ಯೂಮಿನಿಯಮ್ ಮಿಶ್ರಲೋಹವನ್ನು ಬಳಸಿದೆ.

ಒಂದು ಉಪಗ್ರಹವನ್ನು ಕಕ್ಷೆಗೆ ನೂಕಿದ ಬಳಿಕ ಅದರ ಗಿರಕಿ ಸ್ಥಿರತೆ ಸಮರ್ಪಕವಾಗಿದ್ದರೆ ತಾತ್ತ್ವಿಕವಾಗಿ ಅದು ದೀರ್ಘಕಾಲ ಕಕ್ಷೆಯಲ್ಲಿಯೇ ಉಳಿದಿರಬೇಕು. ಆದರೆ ಅದರ ಕಕ್ಷಾಚಾಲನೆಗೆ ಮತ್ತೆ ಶಕ್ತಿಯನ್ನು ಪೂರೈಸಬೇಕಾಗುವುದಿಲ್ಲ. ಆದರೆ ಉಪಗ್ರಹ ನಿರ್ವಹಿಸಬೇಕಾದ ಕರ್ತವ್ಯಗಳು (ಆ ಎತ್ತರದಲ್ಲಿ ಮನುಷ್ಯನ ಪ್ರತಿನಿಧಿಯಾಗಿ ಮಾಹಿತಿ ಸಂಗ್ರಹ ಹಾಗೂ ಪ್ರಸಾರ) ಶಕ್ತಿಯನ್ನು ಬೇಡುತ್ತವೆ. ಈ ಸಮಸ್ಯೆಯನ್ನು ಬಗೆಹರಿಸಲು ಸೂರ್ಯನಿಂದ ವಿಪುಲವಾಗಿ ಪ್ರವಹಿಸುವ ಶಕ್ತಿಯ ಹೊನಲನ್ನು ಉಪಗ್ರಹದಲ್ಲಿ ಅಳವಡಿಸಿದ ಉಪಕರಣಗಳ ನೆರವಿನಿಂದ ವಿದ್ಯುತ್ತಾಗಿ ಪರಿವರ್ತಿಸುತ್ತಾರೆ. ಆರ್ಯಭಟದ ಹೊರಮೈ ಸುಮಾರು ೧೮೫೦೦ ಬಿಡಿ ಸೌರಕೋಶಗಳಿರುವ ಸೌರಫಲಕಗಳಿಂದ ಆವೃತ್ತವಾಗಿದೆ. ಇವನ್ನು ಬಿಸಿಲಿಗೆ ಒಡ್ಡಿದಾಗ ೪೬ ವ್ಯಾಟ್‌ಗಳ ವರೆಗೂ ಇವು ವಿದ್ಯುತ್ತನ್ನು ಉತ್ಪಾದಿಸಬಲ್ಲವು. ಉಪಗ್ರಹದಲ್ಲಿ ೨೦ ನಿಕಲ್-ಕ್ಯಾಡ್ಮಿಯಮ್ ಪುನ-

# ಆರ್ಯಭಟ: ಪೂರ್ವಕಥೆ

ಭಾರತದ ಆಕಾಶ ಯೋಜನೆಯ ಪ್ರಧಾನ ಉದ್ದೇಶಗಳಿವು:

೧ ರಾಷ್ಟ್ರದ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಆಕಾಶ ವಿಜ್ಞಾನ ಮತ್ತು ತಂತ್ರ ವಿಜ್ಞಾನಗಳ ವ್ಯಾಪಕ ಬಳಕೆ. ಅಂದರೆ ಭೂರಿಕ್ತಿಸಂಪರ್ಕ ವ್ಯವಸ್ಥೆಯ ಸ್ಥಾಪನೆ, ಸಾರ್ವತ್ರಿಕ ವಿದ್ಯಾ ಪ್ರಸಾರ, ಉಪ ಗ್ರಹಗಳಿಂದ ಭೂ ವೀಕ್ಷಣೆ ಮಾಡಿ ನೈಸರ್ಗಿಕ ಸಂಪನ್ಮೂಲಗಳ ವ್ಯವಸ್ಥಿತ ಅನ್ವೇಷಣೆ, ಇತ್ಯಾದಿ.

೨ ಮೇಲೆ ಹೇಳಿರುವ ಅನ್ವಯಗಳನ್ನು ಕಾರ್ಯರೂಪಕ್ಕೆ ಇಳಿಸಲೋಸ್ಕರ ಸ ದೇಶೀಯ ತಂತ್ರ ವಿಜ್ಞಾನದ ಸರ್ವಾಂಗೀಣ ಅಭಿವರ್ಧನೆ. ಅಂದರೆ ರಾಕೆಟ್ ಮತ್ತು ಉಪ ಗ್ರಹಗಳ ಆಲೇಖ್ಯ, ರಚನೆ, ಉಡಾವಣೆ, ಅಧ್ಯಯನ, ಇತ್ಯಾದಿ.

ಯೋಜನೆ ೧೯೬೧ ರಲ್ಲಿ ಆರಂಭವಾಯಿತು. ನಮ್ಮ ದೇಶದ ಪ್ರತಿಭಾವಂತ ವಿಜ್ಞಾನಿಗಳನ್ನೂ ನೈಸರ್ಗಿಕ ಸಂಪನ್ಮೂಲಗಳನ್ನೂ ಸಂಯೋಜಿಸಿ ರಾಷ್ಟ್ರ ಕಲ್ಯಾಣವನ್ನು ಸಾಧಿಸಲು ಇರುವ ಮಹಾವಕಾಶ ಆಕಾಶ ಸಂಶೋಧನೆಯಲ್ಲಿ ಹುದುಗಿದೆ ಎಂಬುದನ್ನು ನಿಚ್ಚಳವಾಗಿ ಅರಿತ ಡಾ. ಹೋಮಿ ಭಾಭಾ ಮತ್ತು ಡಾ. ವಿಕ್ರಮ್ ಸಾರಾಭಾಯ್ ಇದರ ಸಂಸ್ಥಾಪಕರು. ಇವರ ಪ್ರಯತ್ನಗಳ ಫಲವಾಗಿ ತುಂಬಾ ಉಡಾವಣಾ ಕೇಂದ್ರ (TERLS) ಅಸ್ತಿತ್ವಕ್ಕೆ ಬಂತು. (೧೯೬೩). ಭಾರತದ ಆಕಾಶ ಸಂಶೋಧನಾ ಸಂಘಟನೆಯ (ISRO) ಒಂದು ಘಟಕವಿದು. ಈ ಸಂಸ್ಥೆಯ ಅಧ್ಯಕ್ಷರು ಡಾ. ಸತೀಶ ಧವನ ಅವರು.

ಆಕಾಶ ಸಂಶೋಧನೆಯ ಅಂತರಂಗದಲ್ಲಿ ಬಲು ನಾಜೂಕಾದ, ಜಟಿಲವಾದ ಮತ್ತು ಸೂಕ್ಷ್ಮವಾದ ತಂತ್ರ ವಿಜ್ಞಾನ ಅಡಕವಾಗಿದೆ. ಇದಕ್ಕೆ ಸಾಕಷ್ಟು ಸೇನಾ ಸಾಧ್ಯತೆಗಳೂ ಇರುವುದರಿಂದ ಯಾವುದೇ ಆಕಾಶರಾಷ್ಟ್ರವು ತನ್ನ ಜ್ಞಾನವನ್ನು ಅತ್ಯಂತ ಜತನದಿಂದ ಕಾಯ್ದಿಟ್ಟುಕೊಳ್ಳುವುದು ನಿರೀಕ್ಷಿತವೇ. ಹೀಗಾಗಿ ಒಂದೊಂದು ರಾಷ್ಟ್ರವೂ, ಉದ್ದೇಶ ಶಾಂತಿಯುತವಾದದ್ದಿರಲಿ ಸೇನಾಯುತವಾದದ್ದಿರಲಿ, ಸ್ವಂತವಾಗಿ ಕಠಿನ ಮಾರ್ಗಕ್ರಮಣದಿಂದಲೇ ಆಕಾಶ ವಿಜ್ಞಾನದ ವಿವಿಧ ಮಜಲುಗಳನ್ನು ಕಂಡುಕೊಂಡು ಮೇಲಕ್ಕೆ ಏರಬೇಕಾಗುತ್ತದೆ. ಈ ಹಾದಿಯಲ್ಲಿ ಎರಡು ಮುಖ್ಯ ಘಟ್ಟಗಳಿವೆ: ಉಡಾವಣೆಗೆ ಸಂಬಂಧಿಸಿದ ರಾಕೆಟ್ ವಿಜ್ಞಾನದಲ್ಲಿ ಪರಿಣತಿ, ಕೃತಕ ಉಪಗ್ರಹದ ರಚನೆಗೆ ಸಂಬಂಧಿಸಿದ ವಿಜ್ಞಾನದಲ್ಲಿ ಪರಿಣತಿ. TERLS ಮೊದಲಿನ ಘಟ್ಟವನ್ನು ಕುರಿತು ಸಂಶೋಧನೆ ಮತ್ತು ಪ್ರಯೋಗಗಳನ್ನು ಮುಂದುವರಿಸುತ್ತಿದ್ದಂತೆಯೇ, ಪ್ರತ್ಯೇಕವಾಗಿ (ಅಥವಾ ಪೂರಕವಾಗಿ) ಎರಡನೆಯ ಘಟ್ಟವನ್ನು ನಿರ್ವಹಿಸಲು ISRO ದ ಅಂಗವಾಗಿ ಉಪಗ್ರಹ ವ್ಯವಸ್ಥೆಗಳ ವಿಭಾಗ (SSD) ಮೈದಳೆಯಿತು. (೧೯೭೦), ಡಾ. ಯು. ಆರ್. ರಾವ್ ಇದರ ನಿರ್ದೇಶಕರು.

ಉಪಗ್ರಹವನ್ನು ಕಕ್ಷೆಗೆ ತೂರಲು ಹಲವಾರು ರಾಕೆಟುಗಳ ಒಂದು ಸರಣಿಯನ್ನೇ ಉಪಯೋಗಿಸಬೇಕಾಗುತ್ತದೆ. ಈ ದಿಶೆಯಲ್ಲಿ ಪೂರ್ಣ ಯಶಸ್ಸು ಲಭಿಸುವ ವರೆಗೂ ಉಪಗ್ರಹದ ಉಡಾವಣೆಯನ್ನು ಮುಂದುವರಿಸಿದ್ದೇ ಆದರೆ ಈಗಾಗಲೇ ಆಕಾಶ ವಿಜ್ಞಾನದಲ್ಲಿ ಸಾಕಷ್ಟು ಹಿಂದೆ ಉಳಿದಿರುವ ನಮ್ಮ ದೇಶ ಇನ್ನೂ ಹಲವಾರು ವರ್ಷಗಳ ಕಾಲ ಶಿಶಿರ ನಿದ್ರೆಯಲ್ಲಿಯೇ ಇರಬೇಕಾದೀತೆಂದು ಮನಗಂಡ ISRO ವು ಉಪಗ್ರಹವನ್ನು ಮಿತ್ರ ರಾಷ್ಟ್ರವಾದ ರಷ್ಯದ ನೆರವಿನಿಂದ ಉಡಾಯಿಸುವುದೊಂದೇ ಸರಿಯಾದ ಹಾದಿ ಎಂದು ತೀರ್ಮಾನಿಸಿತು.

೧೯೭೨ರ ಜುಲೈಯಲ್ಲಿ ಭಾರತೀಯ ಉಪಗ್ರಹವೊಂದರ ಕಂಡರಿಕೆಗೆ ಚಾಣದ ಮೊದಲ ಸ್ಪರ್ಶವಾಯಿತು. ಭಾರತೀಯ ವೈಜ್ಞಾನಿಕ ಉಪಗ್ರಹ ಯೋಜನೆ (ISSP) ಆಗ ಪೀಣ್ಯದಲ್ಲಿ (ಬೆಂಗಳೂರು) ಸ್ಥಾಪಿತವಾಯಿತು. ಇದರ ಪ್ರಧಾನ ಶಿಲ್ಪಿ ಡಾ. ಯು. ಆರ್. ರಾವ್. ಬಹು ಮಂದಿ ಸಮರ್ಥ ವಿಜ್ಞಾನಿಗಳನ್ನೂ ತಂತ್ರಜ್ಞರನ್ನೂ ಸಂಘಟಿತ ರೀತಿಯಲ್ಲಿ ಹಲವಾರು ವಿಜ್ಞಾನ ಮಂದಿರಗಳ ಹಾಗೂ ಉದ್ಯಮಗಳ ನೆರವಿನಿಂದ ಉದ್ದಿಷ್ಟ ಲಕ್ಷ್ಯದೆಡೆಗೆ ಕ್ಲುಪ್ತ ವೇಳೆಯಲ್ಲಿ ಸಾಗಿಸುತ್ತ ಫಲಿತಾಂಶವನ್ನೇ ಪ್ರದರ್ಶಿಸಬೇಕಾದ ಕಾರ್ಯಕ್ರಮ ಇವರ ಮುಂದೆ ಇತ್ತು. ಏಪ್ರಿಲ್ ೧೯ ರಂದು ಆರ್ಯಭಟದ ಉತ್ತರಣವಾದದ್ದು ಈ ತಂಡದ ವಿಜಯದ ಪ್ರತ್ಯಕ್ಷ ನಿದರ್ಶನ.

೧೯೭೨ ರಿಂದ ಸಂದ ಮೂರು ವರ್ಷಗಳಿಗೂ ಕಡಿಮೆ ಅವಕಾಶದಲ್ಲಿ ಡಾ. ಯು. ಆರ್. ರಾಯರ ತರುಣ ತಂಡ ನಡೆದು (ಓಡಿ) ಬಂದ ಹಾದಿ ಅತ್ಯಂತ ರೋಮಾಂಚಕಾರಿ ಆಗಿದೆ.

* ಉಪಗ್ರಹವನ್ನು ಕಕ್ಷೆಗೆ ತೂರುವುದು ರಶ್ಯದ ರಾಕೆಟ್. ಇದರ ರಚನೆಯನ್ನು ಹೊಂದಿ ಇದಕ್ಕೆ ಸರಿಯಾಗಿ ಲಗತ್ತಾಗುವಂತೆ ಉಪಗ್ರಹದ ಗಾತ್ರ ತೂಕ ಆಕಾರ ಇರಬೇಕು. ಇವನ್ನು ಅನುಲಕ್ಷಿಸಿ ಉಪಗ್ರಹದ ಯಾಂತ್ರಿಕ ಅಣಕು ಪ್ರತಿರೂಪವೊಂದನ್ನು, ಅದರ ವಿವಿಧ ಉಪವ್ಯವಸ್ಥೆಗಳ ಸಮೇತ, ರಚಿಸಿದರು. (ವಿದ್ಯುದ್ವ್ಯವಸ್ಥೆ, ಸಂಪರ್ಕ ವ್ಯವಸ್ಥೆ, ನಿರಕಿಸ್ಥಿರೀಕರಣ ವ್ಯವಸ್ಥೆ ಇತ್ಯಾದಿಗಳು ಉಪಗ್ರಹದ ಉಪವ್ಯವಸ್ಥೆಗಳು). ಇವರ ಮೇಲೆ ಪ್ರಯೋಗಗಳನ್ನು ನಡೆಸಿ ಸಿದ್ಧಪಡಿಸಿದ ಯಾಂತ್ರಿಕ ಪ್ರತಿರೂಪವನ್ನು ರಶ್ಯದ ಉಡಾವಣೆ ಕೇಂದ್ರಕ್ಕೆ ಒಯ್ದು ಅಲ್ಲಿ ನಾನಾ ವಿಧವಾದ ಪ್ರಯೋಗ ಪರೀಕ್ಷೆಗಳನ್ನು ಮುಂದುವರಿಸಿದರು. (ಫೆಬ್ರುವರಿ–ಏಪ್ರಿಲ್ ೧೯೭೪).

* ಪೂರ್ವ ಆದಿಮ ಪ್ರರೂಪ (Pre proto type) ಉಪಗ್ರಹದ ರಚನೆ ಮುಂದಿನ ಹಂತ ಆಕಾಶದಲ್ಲಿ ಉಪಗ್ರಹದ ಮೇಲೆ ಕಿಡೆಯುವ ವಿವಿಧ ಸನ್ನಿವೇಶಗಳ ಪ್ರಭಾವಗಳನ್ನು ಇದರ ಮೇಲೆ ಬೀರಿ ಪ್ರಯೋಗಗಳನ್ನು ಮಾಡಿದರು. ಹೀಗೆ ಲಭಿಸಿದ ತಿಳಿವಳಿಕೆಯನ್ನು ಅಳವಡಿಸಿ ಆದಿಮ ಪ್ರರೂಪವನ್ನು ನಿರ್ಮಿಸಿ ಅದನ್ನು ಮತ್ತಷ್ಟು ಆಕಾಶ ಪರೀಕ್ಷೆಗಳಿಗೆ ಸ್ಥಳೀಯವಾಗಿ ಒಡ್ಡಿದರು. ಇಂಥ ಒಂದು ಪ್ರರೂಪದ ಒಳಗಿನ ವಿವಿಧ ಉಪಕರಣಗಳು ಹೇಗೆ ಕಾರ್ಯವೆಸಗುತ್ತವೆ, ನೆಲದ ಆಜ್ಞೆಗಳಿಗೆ ಅವುಗಳ ಅನುಕ್ರಿಯೆ ಏನು, ಅವುಗಳಿಂದ ಪ್ರೇಷಿತವಾಗುವ ಮಾಹಿತಿಗಳನ್ನು ನೆಲದಲ್ಲಿ ಸ್ವೀಕರಿಸುವಾಗ ಎದುರಾಗುವ ಸಮಸ್ಯೆಗಳೇನು— ಇವೆಲ್ಲ ವ್ಯಾಪಕವಾಗಿಯೂ ಸೂಕ್ಷ್ಮವಾಗಿಯೂ ನಡೆಸಿದ ಪ್ರಯೋಗಗಳು (ಜನವರಿ ೧೯೭೫).

* ಅಂತಿಮ ಹಂತವಾಗಿ ಎರಡು ಉಡಾವಣೆ ಪ್ರತಿರೂಪಗಳು ನಿರ್ಮಿತವಾದುವು ಒಂದು ಸಮರ್ಪಕವಾಗದಿದ್ದರೆ ಇನ್ನೊಂದು ಕೈಮೇಲಿರಲಿ ಎಂಬುದು ಇಲ್ಲಿನ ಉದ್ದೇಶ. ಉಡಾವಣೆ ಪ್ರತಿರೂಪ–೧ ರ ಕೂಲಂಕಷ ಪರೀಕ್ಷೆ ಜನವರಿ–ಮಾರ್ಚ್ ೧೯೭೫ ರಲ್ಲಿ ಯಶಸ್ವಿಯಾಯಿತು. ಮಾರ್ಚ್ ೧೭ ರಂದು ಈ ಪ್ರತಿರೂಪವನ್ನು ರಶ್ಯದ ಉಡಾವಣೆ ಕೇಂದ್ರಕ್ಕೆ ವಿಶೇಷ ವಿಮಾನದಲ್ಲಿ ಸಾಗಿಸಿದರು. ಏಪ್ರಿಲ್ ೧೯ರಂದು ಇದು ಆರ್ಯಭಟ ಎಂಬ ಹೆಸರಿನಿಂದ ಭಾರತೀಯ ವಿಜ್ಞಾನದ ಪ್ರಬುದ್ಧತೆಯ ಪ್ರತೀಕವಾಗಿ, ಭಾರತೀಯರ ಭವ್ಯ ಭವಿಷ್ಯದ ಮುಂಗೋಳಿಯಾಗಿ ರಶ್ಯ–ಭಾರತ ದೇಶಗಳ ಚಿರಂತನ ಸ್ನೇಹದ ಕುರುಹಾಗಿ ಮೈದಳೆಯಿತು

ರ್ಭರಣಶೀಲ (ಅಂದರೆ ಒಮ್ಮೆ ವೆಚ್ಚವಾಗಿ ಹೋದ ವಿದ್ಯುತ್ತನ್ನು ಪುನಃ ಭರಿಸಬಹುದಾದ, ಉದಾಹರಣೆಗೆ, ಮೋಟಾರ್ ಬಂಡಿಗಳಲ್ಲಿ ಬಳಸುವ ಬ್ಯಾಟರಿಗಳಂಥ) ಬ್ಯಾಟರಿಗಳೂ ಇವೆ. ಭೂಮಿಯು ಸೂರ್ಯಾಭಿಮುಖಪಾರ್ಶ್ವದಲ್ಲಿ ಉಪಗ್ರಹ ಸಾಗುತ್ತಿರುವಾಗ ಅದರ ಮೇಲೆ ಬಿಸಿಲು ಬಿದ್ದು ಸೌರಫಲಕಗಳಿಂದ ವಿದ್ಯುದುತ್ಪಾದನೆ ಆಗಿ ಉಪಕರಣಗಳ ಚಟುವಟಿಕೆಗಳಿಗೆ ಶಕ್ತಿ ಒದಗುತ್ತದೆ. ಇದರೊಂದಿಗೆ ನಿಕಲ್–ಕ್ಯಾಡ್ಮಿಯಂ ಬ್ಯಾಟರಿಗಳು ಪುನರ್ಭರಿತವೂ ಆಗುತ್ತವೆ. ಭೂಮಿಯು ಸೂರ್ಯ ವಿಮುಖ ಪಾರ್ಶ್ವಕ್ಕೆ (ಅಂದರೆ ಕತ್ತಲೆ ಪಾರ್ಶ್ವಕ್ಕೆ) ಉಪಗ್ರಹ ಬಂದಾಗ ಸೌರಫಲಕಗಳು ಸ್ಥಗಿತವಾಗುವುವು. ಆಗ ನಿಕಲ್–ಕ್ಯಾಡ್ಮಿಯಮ್ ಬ್ಯಾಟರಿಗಳು ಶಕ್ತಿ ಪೂರೈಕೆಯ ಹೊಣೆಯನ್ನು ವಹಿಸಿಕೊಳ್ಳುತ್ತವೆ. ಹೀಗೆ ಉಪಗ್ರಹಕ್ಕೆ ನಿರಂತರವಾಗಿ ಶಕ್ತಿ ಸರಬರಾಜು ನಡೆದಿರುವುದು. ಆರ್ಯಭಟದ ಜೀವಿತಕಾಲದಲ್ಲಿ ಸಮರ್ಪಕವಾಗಿ ಕಾರ್ಯವೆಸಗುವಂತೆ ಈ ಪರಸ್ಪರ ಪೂರಕ ವ್ಯವಸ್ಥೆಯನ್ನು ರಚಿಸಲಾಗಿದೆ.

ಆರ್ಯಭಟ ಆಕಾಶದಲ್ಲಿ ಕ್ರಮಿಸುತ್ತಿರುವ ಹಾದಿ ಭೂಮಧ್ಯ ವೃತ್ತಕ್ಕೆ (ಸಮಭಾಜಕ ವೃತ್ತ) ೫೦.೪ ಡಿಗ್ರಿಗಳಷ್ಟು ವಾಲಿಕೊಂಡಿದೆ. ಉಪಗ್ರಹದ ಕಕ್ಷಾತಲ ಭೂಗೋಳವನ್ನು ಛೇದಿಸುವ ಸ್ಥಳಗಳು ಸುಮಾರಾಗಿ ಈ ಮುಂದಿನವು: ದಕ್ಷಿಣ ಅಮೇರಿಕದ ಫ್ರೆಂಚ್ ಗಯಾನ, ಫ್ರಾನ್ಸಿನ ಟೌಲೋಸ್, ಮಾಸ್ಕೋದಲ್ಲಿನ ಬ್ಯಾರ್ಸ್ ಲೇಕ್ ಮತ್ತು ಭಾರತದ ಶ್ರೀಹರಿಕೋಟ. ಇದರ ಅರ್ಥ ಉಪಗ್ರಹವು ಈ ಸ್ಥಳಗಳ ಮೇಲೆ ಸುಮಾರು ೬೦೦ ಕಿಲೊಮೀಟರ್ ಎತ್ತರದಲ್ಲಿ ಪ್ರತಿ ೯೬.೪೧ ಮಿನಿಟುಗಳಿಗೊಮ್ಮೆ ಸಾಗಿ ಹೋಗುತ್ತಿದೆ ಎಂದು. ಆರ್ಯಭಟದ ಪಥವೀಕ್ಷಣೆ ಮಾಡಲು ಬ್ಯಾರ್ಸ್‌ಲೇಕಿನಲ್ಲಿಯೂ ಶ್ರೀಹರಿಕೋಟದಲ್ಲಿಯೂ ಏರ್ಪಾಡು ಉಂಟು. ಫ್ರಾನ್ಸ್ ದೇಶವನ್ನೂ ಭಾರತ ನೆರವಿಗಾಗಿ ಪ್ರಾರ್ಥಿಸಿಕೊಂಡಿದೆ. ಉಪಗ್ರಹವು ಅದರ ಸಂಚಾರದ ಪ್ರತಿ ಕ್ಷಣವೂ ನಿಯೋಜಿತ ರೀತಿಯಲ್ಲಿ ಮಾಹಿತಿ ಸಂಗ್ರಹವನ್ನು ಮಾಡುತ್ತಲೇ ಇರುವುದು. ಅದರ ಒಳಗೆ ಜೋಡಿಸಿರುವ ಪಟ್ಟಿಮುದ್ರಕವು (ಟೇಪ್ ರಿಕಾರ್ಡರ್) ಸೆಕೆಂಡೊಂದರಲ್ಲಿ ೨೫೬ ತುಣುಕುಗಳನ್ನು ಸ್ವೀಕರಿಸುತ್ತದೆ. ಆದರೆ ಇದು ಮಾಹಿತಿಯನ್ನು ಹತ್ತು ಪಟ್ಟು ಭರದಿಂದ, ಅಂದರೆ ಸೆಕೆಂಡಿಗೆ ೨೫೬೦ ತುಣುಕುಗಳಂತೆ, ಭೂಮಿಗೆ ಪ್ರೇಷಿಸಬಲ್ಲುದು. ಆದ್ದರಿಂದ ೯೬.೪೧ ಮಿನಿಟುಗಳಲ್ಲಿ (ಒಂದು ಪರಿಭ್ರಮಣೆ) ಸಂಗ್ರಹಿಸಿದ ಮಾಹಿತಿಯನ್ನು ಉಪಗ್ರಹವು ೯.೬೪೧ ಮಿನಿಟುಗಳಲ್ಲಿ ಪ್ರೇಷಿಸುತ್ತದೆ. ಇದರ ಅನುಕೂಲತೆ ಏನೆಂದರೆ ಆರ್ಯಭಟ ಶ್ರೀ ಹರಿಕೋಟ ಹಾಗೂ ಬ್ಯಾರ್ಸ್ ಲೇಕ್ ಮೇಲೆ ಸಾಗುತ್ತಿರುವಾಗ 'ಅವನನ್ನು ಮಾತಾಡಿಸಿ' ವಿಷಯ ತಿಳಿದುಕೊಳ್ಳಬಹುದು.

ಭೂಮಿ–ಆರ್ಯಭಟ ಸಂಭಾಷಣೆ ನಡೆಯುವುದು ವಿದ್ಯುತ್ ಸ್ಪಂದನಗಳ ಮೂಲಕ, ಸಾಂಕೇತಿಕ ಭಾಷೆಯಲ್ಲಿ. ಎಲೆಕ್ಟ್ರಾನಿಕ್ ಗಣಕ ಯಂತ್ರಗಳು, ಆ ಮೊದಲೇ ಮನುಷ್ಯ ಅವುಗಳಿಗೆ ಉಣಿಸಿದ ಕ್ರಮವಿಧಿಯ ಅನುಸಾರ ಈ ಕಾರ್ಯವನ್ನು ನಿರ್ವಹಿಸುತ್ತವೆ. ಒಂದು ಸೆಕೆಂಡಿನಲ್ಲಿ ಅವೆಷ್ಟೊ ಸಾವಿರ ಸಾವಿರ ಗಣನೆಗಳನ್ನು ಮಾಡಿ ಫಲಿತಾಂಶವನ್ನು ನೀಡಬಲ್ಲ ಗಣಕಗಳ ಕಾರ್ಯ ವಿಧಾನ ಬೆರಗುಗೊಳಿಸುವಂಥದು. ಗಣಕಗಳಿಂದ ದೊರೆಯುವ ಮಾಹಿತಿಗಳನ್ನು ಅರ್ಥವಿಸಿ ತೀರ್ಮಾನಕ್ಕೆ ಬರುವಲ್ಲಿ ಮನುಷ್ಯ ಶ್ರಮಿಸಬೇಕಾಗುತ್ತದೆ. ಏಕೆಂದರೆ ಇದು ಸಾರತಃ ಸೃಷ್ಟ್ಯಾತ್ಮಕ ಕ್ರಿಯೆ. ಎಪ್ರಿಲ್ ೨೯ ರ ವೇಳೆಗೆ (ಅಂದರೆ ಹತ್ತು ದಿವಸಗಳ ಅವಧಿಯಲ್ಲಿ) ಆರ್ಯಭಟ ಸುಮಾರು ೬೦೦ ಮಿನಿಟುಗಳಷ್ಟು ಕಾಲದ ಮಾಹಿತಿಯನ್ನು ಶ್ರೀಹರಿಕೋಟಕ್ಕೂ ಅಷ್ಟೇ ಮಾಹಿತಿಯನ್ನು ಬ್ಯಾರ್ಸ್‌ಲೇಕಿಗೂ ರವಾನಿಸಿತ್ತು. ಇವನ್ನು ವಿಸಂಕೇತೀಕರಿಸಿ ಸಾದಾ ಭಾಷೆಯಲ್ಲಿ ಬರೆದರೆ ಆ ಕಾಗದದ ಹಾಳೆಗಳ ಪೇರಿಕೆ ೫ ಅಡಿ ಎತ್ತರವಾದೀತಂತೆ. ಆರ್ಯಭಟದ ಜೀವಿತಾವಧಿಯಲ್ಲಿ ನಮಗೆ ದೊರೆಯುವ ಮಾಹಿತಿಗಳ ಪೂರ್ಣ ಸಂಸ್ಕರಣ

ಮತ್ತು ಅರ್ಥವಿಸುವಿಕೆಗಳಿಗೆ ಹಲವಾರು ವರ್ಷಗಳೇ ಬೇಕಾಗಬಹುದು.

## ಉದ್ದೇಶ

ಭಾರತವು ಈ ಹಿಂದೆ ಪರಮಾಣು ರಾಷ್ಟ್ರವಾದಂತೆ ಈಗ ಆಕಾಶ ರಾಷ್ಟ್ರವೂ ಆಗಿದೆ. ಅಂತಾರಾಷ್ಟ್ರೀಯ ವೇದಿಕೆಯಲ್ಲಿ ಭಾರತಕ್ಕೆ ಒದಗಿರುವ ಈ ಅಂತಸ್ತು ಖಂಡಿತವಾಗಿಯೂ ನಮ್ಮ ವಿಜ್ಞಾನಿಗಳಿಗೆ, ನಮ್ಮ ವಿವಿಧ ಉದ್ಯಮಗಳಿಗೆ ಅಪಾರ ಕುಮ್ಮಕ್ಕನ್ನು ನೀಡಿದೆ.

ವಿಜ್ಞಾನಿಗಳು ಆರ್ಯಭಟಕ್ಕೆ ವಿಧಿಸಿರುವ ಕರ್ತವ್ಯಗಳು ಮುಖ್ಯವಾಗಿ ಮೂರು,

೧ ವಿಶ್ವದಲ್ಲಿರುವ ಪ್ರಮುಖ ಎಕ್ಸ್‌ಕಿರಣಾಕರಗಳ ಅಧ್ಯಯನ ಸೂರ್ಯ ಚಂದ್ರ ಗ್ರಹ ನಕ್ಷತ್ರಗಳು ಬೆಳಕನ್ನು ಪ್ರಸರಿಸುತ್ತವೆ. ಆದ್ದರಿಂದ ಅವು ನಮಗೆ ಗೋಚರಿಸುತ್ತವೆ. ಈ ಬೆಳಕು ಎನ್ನುವುದೊಂದು ಶಕ್ತಿ. ಇದರಂತೆ ಎಕ್ಸ್ ಕಿರಣವೂ ಒಂದು ಶಕ್ತಿ. ಇವನ್ನು ನಾವು ಕಾಣಲಾರೆವು; ಆದರೆ ಛಾಯಾಚಿತ್ರ ಫಲಕಗಳ ಮೇಲೆ ಗುರುತಿಸಬಲ್ಲೆವು. ವಿಶ್ವದಲ್ಲಿ ಎಕ್ಸ್ ಕಿರಣಗಳನ್ನು ಮಾತ್ರ ಪ್ರೇಷಿಸುವಂಥ ಹಲವಾರು ಆಕರಗಳಿವೆ ಎಂಬುದಾಗಿ ೧೯೬೨ ರಿಂದ ಈಚೆಗೆ ತಿಳಿದು ಬಂದಿದೆ, ಇವುಗಳಿಗೆ ಎಕ್ಸ್ ಕಿರಣ ನಕ್ಷತ್ರಗಳೆಂದು ಹೆಸರು. ಇವುಗಳ ಸೂಕ್ಷ್ಮಾವಲೋಕನ ಮಾಡಬೇಕಾದರೆ ವಾಯುಮಂಡಲದಿಂದ ಹೊರತಾಗಿ ಆಕಾಶದ ಎಕ್ಸ್ ಕಿರಣ ಛಾಯಾಚಿತ್ರಣ ಮಾಡಿ ಬಳಿಕ ಆ ಫಲಕಗಳನ್ನು ಅಧ್ಯಯಿಸಬೇಕಾಗುವುದು, ಆರ್ಯಭಟ ಈಗ ನಿರ್ವಹಿಸಬೇಕಾಗಿರುವ ಒಂದುಕರ್ತವ್ಯ ಆಕಾಶದ ನಿಯೋಜಿತ ವಲಯಗಳಲ್ಲಿ ಎಕ್ಸ್‌ಕಿರಣ ನಕ್ಷತ್ರಗಳಿಗಾಗಿ ಶೋಧನೆ.

೨ ಉನ್ನತ ವಾಯುಸ್ತರ ವಿಜ್ಞಾನದಲ್ಲಿ ಅಧ್ಯಯನ; ಮುಖ್ಯವಾಗಿ ಆರ್ಯಭಟ ಸಾಗುತ್ತಿರುವ ವಲಯದ ಭೌತವೃತ್ತಾಂತದ ಅಧ್ಯಯನ— ಅಲ್ಲಿನ ವಾಯುರಚನೆ. ಉಷ್ಣತೆ, ಸಾಂದ್ರತೆ ಮುಂತಾದವನ್ನು ಕುರಿತ ಅನ್ವೇಷಣೆ.

೩ ಸೌರ ಭೌತವಿಜ್ಞಾನದಲ್ಲಿ ಅಧ್ಯಯನ. ಸೂರ್ಯನಿಂದ ನಿರಂತರವಾಗಿ, ಅದರಲ್ಲೂ ಉದ್ರೇಕಗಳ ವೇಳೆ, ಪ್ರವಹಿಸುವ ನ್ಯೂಟ್ರಾನುಗಳ ಹಾಗೂ ಗಾಮಕಿರಣಗಳ ಅಧ್ಯಯನ.

## ಪರಿಸಮಾಪ್ತಿ

ಸುಮಾರು ಐದು ಕೋಟಿ ರೂಪಾಯಿ ವೆಚ್ಚದ ಈ "ಹುಚ್ಚು ಸಾಹಸ" ಹೊಟ್ಟೆಗೆ ಹಿಟ್ಟಿಲ್ಲದವನ ಜುಟ್ಟಿಗೆ ಮಲ್ಲಿಗೆಯಂತಾಗದೇ ಎಂದು ಅನೇಕ ಭಾರತೀಯರು ಪ್ರಾಮಾಣಿಕವಾದ ಕಾಳಜಿಯನ್ನು ವ್ಯಕ್ತಪಡಿಸಿದ್ದಾರೆ. ಯಾವುದೇ ಸಂಶೋಧನೆಯ ಮೌಲ್ಯವನ್ನು ಸಮಕಾಲೀನವಾಗಿ ಅಳೆಯಲು ಸಾಧ್ಯವಾಗುವುದಿಲ್ಲ ಎಂದು ವಿಜ್ಞಾನದ ಇತಿಹಾಸ ಸಾರಿ ಸಾರಿ ಹೇಳುತ್ತದೆ. ಆದ್ದರಿಂದ ಸದ್ಯಕ್ಕೆ ನಮ್ಮ ದೇಶಕ್ಕೆ ಪ್ರಾಪ್ತವಾದ ಈ ಹೊಸ ಹಿರಿಮೆಯನ್ನು ಹೆಮ್ಮೆಯಿಂದ ಸ್ವೀಕರಿಸೋಣ. ಇದಕ್ಕೆ ನೇರವಾಗಿ ಕಾರಣರಾದ ಪ್ರೊ॥ ಯು. ಆರ್. ರಾವ್ ಮತ್ತು ಬಳಗದವರನ್ನು ಹಾರ್ದಿಕವಾಗಿ ಅಭಿನಂದಿಸೋಣ. ಈ ಮಹಾಯೋಜನೆಯ ನಾಯಕರಾದ ಡಾ॥ ಸತೀಶ್ ಧಾವನ್ ಅವರ ಉದ್ಗಾರವನ್ನು ನಾವೂ ಪ್ರತಿಧ್ವನಿಸೋಣ: ನಾವೂ ಆಕಾಶಕ್ಕೆ ತೆರಳುವುದು ಭೂಮಿಗೆ ಮರಳಲಿಕ್ಕಾಗಿ. ✡



ಪ್ರದರ್ಶಕಕಾರರ ಸಮ್ಮೇಳನದಲ್ಲಿ ತರುಣ ಸಿನಿಮಾ ನಿರ್ದೇಶಕನೊಬ್ಬ ಕ್ರೋಧತಪ್ತನಾಗಿ ಕಿರುಚಿದ,

"ನಾನು ನಿರ್ದೇಶಿಸಿದ ಚಿತ್ರಗಳನ್ನು ಸಿನಿಮಾಮಂದಿರಗಳಲ್ಲಿ ಜನಸಂದಣಿ ಇಲ್ಲದಾಗಲೇ ತೋರಿಸುತ್ತಿರಬೇಕೇಕೆ?"

- ಎಸ್. ವಿಶ್ವನಾಥ

# ಉಜ್ವಲ ಭಾರತಾಭಿಮಾನಿ ಬ್ಯಾ. ನಾರ್ಟನ್

**ಚಂದ್ರಕಾಂತ ದೇಶಪಾಂಡೆ**

ಭಾರತದ ರಾಜಕೀಯ ಮತ್ತು ಆರ್ಥಿಕ ಉನ್ನತಿಗಾಗಿ ಮಾನವೀಯ ಹಾಗೂ ಉದಾರ ಧೋರಣೆ ತಳೆದ ಕೆಲವೇ ಇಂಗ್ಲಿಷರಲ್ಲಿ ಆರ್ಡ್ಲೀ ನಾರ್ಟನ್ನರೂ ಒಬ್ಬರು. ಸ್ವರಾಜ್ಯಕ್ಕಾಗಿ ಕಂಕಣಬದ್ಧರಾದ ಅಲನ್ ಹ್ಯೂಮ್, ಆನಿ ಬೆಸೆಂಟ್ ಮುಂತಾದವರ ಸಾಲಿನಲ್ಲಿ ಅವರ ಹೆಸರು ರಾರಾಜಿಸುತ್ತದೆ. ಇಂಗ್ಲಂಡಿನಲ್ಲಿ ಹುಟ್ಟಿ ಬೆಳೆದು, ಆಕ್ಸಫರ್ಡ್ ಗ್ಲೌಸೆಸ್ಟರಗಳಲ್ಲಿ ತರಬೇತಾದ ನಾರ್ಟನ್ನರಿಗೆ ತಮ್ಮ ತಂದೆ ಮದ್ರಾಸಿನಲ್ಲಿ ಎಡ್ವೋಕೇಟ್ ಜನರಲ್ ಆಗಿ ಬಹಳ ವರ್ಷ ಕೆಲಸ ಮಾಡಿದುದರಿಂದ ಅಲ್ಲಿಯೇ ತಾವೂ ವಕೀಲರೆಂದು ತಮ್ಮ ದೈವಪರೀಕ್ಷೆ ಮಾಡಿಕೊಳ್ಳಬೇಕೆಂದು ಸ್ವಾಭಾವಿಕವಾಗಿಯೇ ಮನಸ್ಸಾಯಿತು. ಮೊದಲ ವರ್ಷಗಳು ನಿರಾಶಾದಾಯಕವಾಗಿದ್ದರೂ ಪರಿಶ್ರಮ-ಪೂರ್ವಕ ಅಭ್ಯಾಸ, ಆಳವಾದ ಕಾಯಿದೆ ಜ್ಞಾನ ಮತ್ತು ಅದರ ಮೇಲಿನ ಪ್ರಭುತ್ವ, ವಾಕ್ ಚಾತುರ್ಯ, ವಿನೋದ ಪ್ರವೃತ್ತಿ ಹಾಗೂ ಸ್ವತಂತ್ರ ವಿಚಾರಗಳು ಅವರಿಗೆ ಅಭೂತಪೂರ್ವವಾದ ಗೆಲುವನ್ನು ತಂದುಕೊಟ್ಟವು. ಉದ್ವೇಗಕಾರಕ ಮೊಕದ್ದಮೆಗಳು ಕೆಲವೇ ಕಾಯಿದೆ ತಜ್ಞರಿಗೆ ಒಪ್ಪಿಸಲ್ಪಡುತ್ತಿದ್ದರೆ ನಾರ್ಟನ್ ನಿರ್ವಹಿಸುತ್ತಿದ್ದ ಪ್ರತಿ ವ್ಯಾಜ್ಯವೂ ಉದ್ವೇಗಕಾರಕವಾಗಿ ಮದ್ರಾಸ ಮುಷ್ಟು ನ್ಯಾಯಾಲಯವು ವಕೀಲರು, ಕಕ್ಷಿಗಾರರು ವಿದ್ಯಾರ್ಥಿಗಳು ಅಲ್ಲದೆ ಸಾಮಾನ್ಯ ಜನರಿಂದಲೂ ಕಿಕ್ಕಿರಿದು ತುಂಬುವಂತಾಯಿತು.

ಒಮ್ಮೆ ಒಂದು ಪೂರ್ಣನ್ಯಾಯಪೀಠದ ಮುಂದೆ ನಾರ್ಟನ್ನರು ವಾದಿಸುತ್ತಿದ್ದಾಗ ಅದರಲ್ಲೊಬ್ಬರಾದ ನ್ಯಾಯಮೂರ್ತಿ ಬೋಧ್ಯಾಮ್‌ರನ್ನು ಉದ್ದೇಶಿಸಿ ತಮ್ಮ ಮೂವತ್ತೆರಡು ವರ್ಷಗಳ ವಕೀಲವೃತ್ತಿಯಲ್ಲಿ ಇಷ್ಟೊಂದು ತಪ್ಪುಮಾಡಿದ ನ್ಯಾಯಮೂರ್ತಿಯನ್ನು ತಾವು ಕಂಡಿಲ್ಲವೆಂದರು. ಕ್ರುದ್ಧ ನ್ಯಾ. ಬೋಧ್ಯಾಮ್‌ರು, "ಬ್ಯಾ. ನಾರ್ಟನ್ನರೇ, ನೀವು ಹೇಳುತ್ತಿರುವ, ನಾನು ಮಾಡಿದೆನೆನ್ನಲಾದ ತಪ್ಪುಗಳನ್ನು ಅಳಿಸಿ ಹಾಕಿ ನನ್ನ ತೀರ್ಪುಗಳಿಗೆ ಕೆಲವಾದರೂ ಸಾಕ್ಷ್ಯಾಧಾರಗಳಿಲ್ಲವೆ ?" ಎಂದು ನಡುವೆಯೇ ಕೇಳಿದರು. ಆಗ ನಾರ್ಟನ್ನರು ಕಹಿಯಾಗಿ ಹೀಗೆ ಮಾರ್ನುಡಿದರು: "ನ್ಯಾಯಮೂರ್ತಿಗಳು ಅಸಾಧ್ಯವಾದುದನ್ನು ನನಗೆ ಮಾಡಲು ಹೇಳುತ್ತಿದ್ದಾರೆ. ಅದು ಅಕ್ರಮವಾದುದನ್ನು ಹೋಗಲಾಡಿಸಲಾರದು. ಅರೇಬಿಯದ ಎಲ್ಲ ಪರಿಮಳಗಳೂ ಈ ಚಿಕ್ಕ ಕೈಯನ್ನು ಪರಿಶುದ್ಧಗೊಳಿಸಲಾರವು. ಆ ಅಕ್ರಮಗಳು ಪೂರ್ಣನ್ಯಾಯಪೀಠದ ತೀರ್ಪಿನಿಂದ ಮಾತ್ರವೇ ಅಳಿಸಿ ಹೋಗುವವು. ಇನ್ನುಳಿದ ನ್ಯಾಯಮೂರ್ತಿಗಳು ಇದನ್ನು ಮುಕ್ತ ಮನಸ್ಸಿನಿಂದ ಒಪ್ಪುವರೆಂದು ನಂಬಿದ್ದೇನೆ. ತಪ್ಪು ಮಾಡುವ ನ್ಯಾಯಮೂರ್ತಿ

ಗಳಿಗೂ ಸರಿಪಡಿಸಿಕೊಳ್ಳುವ ಸ್ಥಾನ (ಪೂರ್ಣ ನ್ಯಾಯಪೀಠ) ಇದೆ."

ಇದಾದ ಬಳಿಕ ಪೂರ್ಣ ನ್ಯಾಯಪೀಠ ಬ್ಯಾ. ನಾರ್ಟನ್ನರ ಕಕ್ಷಿಗಾರನ ಪರವಾಗಿ ನಿರ್ಣಯ ಕೊಟ್ಟಿತೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

"ಇನಸ್ಪೆಕ್ಟರ್ ಕೊಲೆ" ಎಂಬ ಪ್ರಸಿದ್ಧವಾದ ಖಟ್ಲೆಯಲ್ಲಿ ಆರೋಪಿ ನಿರ್ಮಲಕಾಂತ ರಾಯ್, ಇನಸ್ಪೆಕ್ಟರನನ್ನು ಕೊಲ್ಲಲು ಬಳಸಿದ ನೆನ್ನಲಾದ ಬಂದೂಕಿನ ತಂತ್ರವನ್ನು ಪ್ರದರ್ಶಿಸಿ, ನ್ಯಾಯಮೂರ್ತಿಗಳೆದುರು ಅಭೂತಪೂರ್ವವಾಗಿ ವಾದಿಸಿ ಬ್ಯಾ. ನಾರ್ಟನ್ನರು ಅವನ ಜೀವ ಉಳಿಸಿದರು. ಅಷ್ಟೇ ಅಲ್ಲ, ಅವನ ನಿರ್ದೋಷಿತ್ವವನ್ನು ಮಾನಗಂಡು ತಾವು ತೆಗೆದುಕೊಂಡ ಫೀ ಹಣದಲ್ಲಿ ೧೪,೦೦೦ ರೂಪಾಯಿಗಳನ್ನು ಔದಾರ್ಯದಿಂದ ತಿರುಗಿ ಕೊಟ್ಟು ಇಂಗ್ಲಂಡಿನಲ್ಲಿ ಅವನು ಕಾಯಿದೆ ಅಭ್ಯಾಸಮಾಡಲು ಅನುಕೂಲಮಾಡಿಕೊಟ್ಟರು.

ಕಲಕತ್ತೆಯಲ್ಲಿ ಇನ್ನೂ ತಮ್ಮ ವೃತ್ತಿಯಲ್ಲಿ ತೊಡಗುತ್ತಿದ್ದಂತೆಯೇ ಸರಕಾರವು ಶ್ರೀ ಅರವಿಂದರು ಆಪಾದಿತರಲ್ಲೊಬ್ಬರಾಗಿದ್ದ ಐತಿಹಾಸಿಕ ಹಾಗೂ ದೀರ್ಘಾವಧಿ ವಿಚಾರಣೆಯ ಅಲೀಪುರ ಬಾಂಬ ಖಟ್ಲೆಯಲ್ಲಿ ಬ್ಯಾ. ನಾರ್ಟನ್ನರನ್ನು ನೇಮಿಸಿತು. ಈ ಮೊಕದ್ದಮೆಯಲ್ಲಿ ವಿಫಲರಾದರೂ ಅವರ ವಾದಸರಣಿ ಅತ್ಯಾಶ್ಚರ್ಯಕರವಾಗಿತ್ತು.

ಬ್ಯಾ. ನಾರ್ಟನ್ನರು ೧೯೨೮ ರಲ್ಲಿ ತಾಯ್ನಾಡಾದ ಇಂಗ್ಲಂಡಿಗೆ ಮರಳಿದರು. ಆಕ್ಸಫರ್ಡ ಯೂನಿಯನ್ನಿನ ವಿಶೇಷ ಆಮಂತ್ರಣದ ಮೇರೆಗೆ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿಗೆ ಸಂಬಂಧಿಸಿದಂತೆ, ಅದರ ಪರವಾಗಿ ಇದ್ದ ಒಂದು ನಿರ್ಣಯದ ಮೇಲಿನ ಚರ್ಚೆಯನ್ನು ಅಲ್ಲಿ ಉದ್ಘಾಟಿಸಿದರು. ಉಗ್ರರಾಷ್ಟ್ರೀಯವಾದಿಗಳಾದ ಶ್ರೀ ಸುರೇಂದ್ರನಾಥ ಬ್ಯಾನರ್ಜಿಯವರೂ ಆ ಸಭೆಯಲ್ಲಿ ಉಪಸ್ಥಿತರಿದ್ದರು. ಲಾರ್ಡ ಸೆಸಿಲ್‌ರು ಗೊತ್ತುವಳಿಯನ್ನು ವಿರೋಧಿಸಿ ಮಾತನಾಡಿದರು, ಭಾರತವು ಹಿಂದುಳಿದುದೆಂದು ಪಾಶ್ಚಿಮಾತ್ಯ ನಾಗರಿಕತೆಯ ಶ್ರೇಷ್ಠತೆಯೊಂದಿಗೆ ಹೋಲಿಸಿ ಭಾರತದ ಉತ್ಕಟ ಇಚ್ಛೆಗಳನ್ನು ಹೀನಾಯವಾಗಿ ಕಂಡರು.

ಅದನ್ನು ಕೇಳಿದ ವಾಗ್ಮಿ ನಾರ್ಟನ್ನರು ಹೀಗೆ ಆರ್ಭಟಿಸಿದರು ; "ಅಧ್ಯಕ್ಷ ಮಹಾಶಯರೆ, ಭಾರತದ ಬಗ್ಗೆ ಏನೂ ಗೊತ್ತಿರದ, ಅಷ್ಟೇ ಏಕೆ ಭಾರತದ ಆ ವಿಶಿಷ್ಟ ಭಾಗ (ಬಂಗಾಲ)ವನ್ನೂ ವಿಶ್ವವಿದ್ಯಾಲಯ ಕಾಲೇಜಿನ ಮಾನ್ಯ ಸದಸ್ಯರು ಟೀಕಿಸಿ ಒಳ್ಳೆಯದನ್ನು ಮಾಡಿದ್ದಾರೆ. ಭಾರತೀಯನನ್ನು, ಅದರಲ್ಲಿಯೂ ವಿಶೇಷವಾಗಿ ಪ್ರತಿಯೊಬ್ಬ ಬಂಗಾಲಿಯನ್ನು ಅವನು ರಾಜಕೀಯ ಬದಲಾವಣೆಗೆ ನಿರಂತರವಾಗಿ ಅಸಮರ್ಥನೂ ಎಂದೂ ಹೊರಗೆ ಬರಲಾರದ ಗಾಢಾಂಧಕಾರದಲ್ಲಿ ತೊಳಲಾಡುತ್ತಿರುವನೆಂದೂ ಆರೋಪಿಸುವಾಗ ಅಲ್ಲಿಯವನಾದ (ಬ್ಯಾ. ನಾರ್ಟನ್ನರು ಕಲಕತ್ತೆಯಲ್ಲಿಯೂ ಕೆಲ ವರ್ಷ ವಕೀಲಿವೃತ್ತಿ ಕೈಕೊಂಡಿದ್ದರು) ಹೇಳಿಕೊಳ್ಳಲು ನನಗೆ ಅಭಿಮಾನವೆನಿಸುತ್ತದೆ. ಜಗತ್ತು ಇನ್ನೂ ಬಾಲ್ಯಾವಸ್ಥೆಯಲ್ಲಿದ್ದಾಗ ಮತ್ತು ಮಾನ್ಯ ಸೆಸಿಲ್ ಸಾಹೇಬರ ಪೂರ್ವಜರು ಬಾಲದಿಂದ ಜೋತು ಬಿದ್ದು ಗಿಡದಿಂದ ಗಿಡಕ್ಕೆ ಹಾರಾಡುತ್ತಿದ್ದಾಗ ನನ್ನ ದೇಶ (ಭಾರತ)ದಲ್ಲಿ ತತ್ತ್ವಜ್ಞಾನ ಮತ್ತು ರಾಜಕೀಯ ಸಿದ್ಧಾಂತಗಳ ಪದ್ಧತಿಗಳು ವಿಕಾಸವಾದವೆಂದು ಈ ಪ್ರಾಜ್ಞರ ಸಭೆಯು ನೆನಪಿಗೆ ತಂದುಕೊಳ್ಳುತ್ತಿದ್ದೇನೆ"

ಭಾರತ ಪ್ರಾಚೀನ ಹಿರಿಮೆಯನ್ನು ತೋರಿಸಿದ ಈ ಔದಾರ್ಯದ ಮಾತುಗಳನ್ನು ಕೇಳಿ ಕಿವಿ ಗಡಚಿಕ್ಕುವ ಚಪ್ಪಾಳೆ ಕೇಳಿ ಬಂತು. ✿



ಪ್ರಾಚೀನ ಕಾವ್ಯ ಸುಧೆ

# ಸತಿ-ಪತಿ ಸಂಬಂಧ

('ಹದಿಬದೆಯ ಧರ್ಮ'ದ ಹೊನ್ನಮ್ಮ ಕನ್ಯೆಯು ತಂದೆ-ತಾಯಿಗಳಿಗೆ ನೀಡಿದ ಹಿತ ವಚನಗಳು ಹೃದಯಂಗಮವಾಗಿರುವಂತೆ ಆ ಕವಯಿತ್ರಿಯು ಸತಿ-ಪತಿಯರಿಗೆ ಇತ್ತಿರುವ ಹಿತ ವಚನಗಳೂ ತುಂಬ ಮಾರ್ಮಿಕವಾಗಿವೆ. ಸತಿ ಪತಿಯರ ಪರಸ್ಪರ ಸಂಬಂಧ ಎಂತಿರಬೇಕು, ಅವರ ನಡೆವಳಿಕೆ, ನುಡಿವಳಿಕೆಗಳು ಹೇಗಿರಬೇಕು ಎಂಬುದನ್ನು ಹೊನ್ನಮ್ಮ ಮಧುರವಾಗಿ ಇಲ್ಲಿ ತಿಳಿಸಿದ್ದಾಳೆ.)

ಸತಿ ಪತಿಯರ ಸೌಹೃದಯದಿಂದ ಸಂಸಾರವತಿಶಯವಡೆದು ತೋರುವದು
ಇತರೇತರ ವೈರದಿಂದೀರ್ವರಿಗೆ ದುರ್ಗತಿಯಂತೆ ಕಂಗೊಳಿಸುವದು ||೧||
ಒಳತೋಟಿಯೊಡರಿಪ ಗಂಡ ಪೆಂಡಿರ ಮನೆ ನೆಳಲ ಸೇರರು ನೀತಿವಿದರು
ಬಳಿಕ ಮಾತೇನಿನ್ನು ಬಸುರೊಳು ಬಂದ ಮಕ್ಕಳುಮಲ್ಲಗಳೆದು ನಡೆವರು ||೨||
ದಂಪತಿಗಳ ಪಗೆತನದಿಂದೀರ್ವರ ಪೆಂಪಿನ ಬೇರು ಪರಿವುದು
ಸೊಂಪುಗೆಡುವದು ಸೊಬಗು ಸಂಸಾರದ ಜೊಂಪು ಸಡಿಲಿ ಜಾರುವದು ||೩||
ನಲ್ಲನಿಗೊಲಿದು ನಾಣ್ಚುವ ಮುದುವೆಣ್ಣಿನ ಮೆಲ್ಲೆರ್ದೆ ಕಲ್ಲೆರ್ದೆಯೆನಿಸೆ
ಬಲ್ಲವನವಳ ಬಲುಮೆಗೈದು ಬಳಲದೆ ಚೆಲ್ಲವಾಡುವುದು ಜಾಣ್ಮೆಯೊಳು ||೪||
ನಿಟ್ಟುಸಿ ತಲೆವಾಗುವ ನೇಹದೊಳು ಮನವುಟ್ಟು ಮರಳಿ ನಿಟ್ಟಿಸುವ
ದಿಟ್ಟ ದಿಟ್ಟಗಳೊಡವೆರೆಯೆ ನಾಣ್ಚುವರೊಳಗುಟ್ಟರಿತುಪಚರಿಸುವದು ||೫||
ಮೀರಲೆಳಸಿ ಮೇಲುವರಿವ ಮನದ ಮಿತಿ ಮೀರಲಂಜಿಕೆಗೊಂಬ ಮೆಯ್ಯ
ಏರುವ ಪುರ್ಬಿನೆರಗುವೊಳ್ಮೊಗದೆಳೆ ನೀರೆಯ ನೆಲೆಯ ತಿಳಿವುದು ||೬||
ಗಲಗೆಸಗದೆ ಗಾಬರಿಗೊಳಿಸದೆ ಮಿಗೆ ಕಲಹವ ಗಂಟು ಮಡಿಸದೆ
ಬಲುಮೆಗೈಯದೆ ಬಾಲೆಯ ಬಣ್ಣಮಾತಿನಿಂದೊಲಿಸಿಯೊತ್ತಿಗೆ ಬರಿಸುವದು ||೭||
ನಸು ನಾಣ್ಚುವೆಳವೆಂಡಿರ ನಲವೇರಿಸಿ ಬಸಗೈಯದೆ ಬಲ್ಮೆದೋರೆ
ಪೊಸಪೂವ ಸರಗೈದು ಮುಡಿಯದೆ ನಲುಗಿಸಿ ರಸದೆಗೆವೆಸಕವೆನಿಪುದು ||೮||
ತರತಮ ಭಾವನರಿತು ತರುಣಿಯೊಳೊಡವೆರಸಿ ಬಿನದವೆಸಗುವುದು
ತರವರಿಯದೆ ತಲೆಯೊಳು ಪೊತ್ತು ಲಾಲಿಸೆ ಪರಿಭವಗೈದು ಪಳಿವಳು ||೯||
ಒತ್ತಿಗೆ ಬರಿಸುವದೊಮ್ಮೊಮ್ಮೆ ಬಿನದವಾಡುತ್ತ ಭೀತಿಯ ಬಿಡಿಸುವದು
ಮತ್ತೆ ಮೆಯ್ವಲಿಯೊಳು ಮನ್ನಿಸುವದು ಚಿತ್ತವೃತ್ತಿಯ ಸೆರೆಯ ಪಿಡಿವುದು ||೧೦||
ತನ್ನ ಪೆರ್ಚುಗೆಯೊಳು ಪೆರ್ಚುಗೆಗೊಂಡುರೆ ತನ್ನ ಕುಂದಿನೊಳು ಕುಂದುವಳ
ತನ್ನ ಮೆಯ್ಯೊಳಗರೆ ಮೆಯ್ಯೆನಿಸುವ ಮನದನ್ನಳ ಮನ್ನಿಪುದೊಲಿದು ||೧೧||
ಎಣಿಕೆಗೈವೊಡೆ ರೂಪು ಜವ್ವನವಿದ್ದೇನು ಗುಣವಿಲ್ಲದ ಕುಲಸತಿಗೆ
ಗುಣ ಕರುಗೊಂಡಿರೆ ಕೂರ್ತೆಂದೆಂದಿಗುಮೆಣೆ ಬಿಚ್ಚದೇಕವೆನಿಪುದು ||೧೨||
ದೇವರಿಲ್ಲದ ದೇಗುಲದ ಬಿತ್ತರದಂತೆ ಭೂವರನಿಲ್ಲದೂರಂತೆ
ಜೀವಿತೇಶ್ವರನ ವಿರಹದೊಳು ಸೆಜ್ಜೆಯ ಭಾವಿಸಿ ಬಣ್ಣಗುಂದುವಳು ||೧೩||

ಎಡ ಬಲದವರಂತಿಂತು ನುಡಿವರೆಂದು ತಡೆದು ತನ್ನಿಚ್ಛೆಯೊಳಿರದೆ
ಎಡೆಬಿಡದಿನಿಯನ ನೆನೆದು ನೇಮದೊಳಿರ್ಪ ಮಡದಿಗೆ ಮತ್ತೆಣೆಯುಂಟೆ ॥ ೧೪ ॥
ಎನ್ನಿನಿಯನ ಪಾದ ಸೇವೆಯಿಲ್ಲದೆ ನಾನೆನ್ನಗಮಿಂತಿರ್ಪೆನೆಂದು
ತನ್ನೊಳು ತಾನೇ ತಪಕಗೊಂಬ ಸತಿಯ ಮಹೋನ್ನತಿಗಿನ್ನೆಣೆಯುಂಟೆ ॥ ೧೫ ॥
ಒಲಿದ ನಲ್ಲನ ವಿರಹದೊಳೊರಲುವ ಕುಲ ಲಲನೆಯ ವಿರಹ ವೇದನೆಗೆ
ಪಲ ಬಗೆಯುಗ್ರ ತಪಂಗಳೀಡಲ್ಲೆಂದುಲಿವುವು ಮುನ್ನಿನೋದುಗಳು ॥ ೧೬ ॥
ಈಗಲೇ ಬರ್ಪನೆಂಬುದನಾಲಿಸಿ ತಲೆವಾಗಿಲ ತೆರೆಯುಳೆಲಸುತ
ಬೇಗದೊಳವನ ಸೇವೆಗೆ ಬೇಕಾದುದನಾಗಳೆಯನುಗೊಳಿಸುವಳು ॥ ೧೭ ॥
ಮೊದಲೊಳು ಮುಂದುವರಿವ ನೋಟದಿಂದೊಡನೊದಗುವ ಹರ್ಷಾಶ್ರುವಿಂದ
ಮುದದೊಳು ಮುರಿದೇಳುವ ನವಿರಿಂದೊಡನಿದಿರುಗೊಳುವಳಿನಿಯನನು ॥ ೧೮ ॥
ಕಾಣದೆ ಪಲವಗಲಿಂದ ಕಣ್ಮರೆಯಾದ ಮಾಣಿಕ ಮೈದೋರಿದಂತೆ
ಪ್ರಾಣ ವಲ್ಲಭನ ಪಾದಾರವಿಂದಂಗಳ-ಕಾಣುತ ಕವಿದು ನಿಟ್ಟಿಪಳು ॥ ೧೯ ॥
ಬಳಿಕ ಮನವ ಬಲಿವಿಡಿದಿನಿಯನ ಪಾದನಳಿನಂಗಳಿಗೆ ನತಿಗೈದು
ಘಳಿಲನುಗುವ ಹರ್ಷಾಶ್ರುವಿಂದುಂಗುಟಗಳನು ತೊಳೆದು ಪೂಜಿಪಳು ॥ ೨೦ ॥
ಕಳವು ಕಪಟಗಳ ಕಲಿಯುದಂದದಿ ಮಕ್ಕಳನಡಿಗಡಿಗಳುಕಿಪುದು
ಎಳವೆಯೊಳೆದೆಗೊಂಡ ಸುಗುಣ ದುರ್ಗುಣಗಳ ಕಳೆವುದರಿದು ಕಡೆಕಡೆಗೆ ॥ ೨೧ ॥
ಸಾವಧಾನದೊಳು ಸಂಪಾದಿಸಿ ಮನೆಯೊಳು ತೀವಿದ ದಿವ್ಯ ವಸ್ತುಗಳ
ದೇವರಾರೋಗಣೆಗೆಂಪೆಲ್ಲವ ಭಕ್ತಿ ಭಾವದಿ ಪರಿಶೋಧಿಪುದು ॥ ೨೨ ॥
ಹಳದಾಗದ ಮುನ್ನ ಬಣ್ಣಗೆಡದ ಮುನ್ನ ಮೊಳೆದೋರಿ ಮುಗ್ಗದ ಮುನ್ನ
ಕಳೆಯುಳಿಯದ ಮುನ್ನ ಕಂದಿ ಕುಂದದ ಮುನ್ನ ಬಳಸುವುದಖಿಳ ವಸ್ತುವನು ॥ ೨೩ ॥
ಆಚಾರದಿಂದನುಪಮ ಧರ್ಮದೇಳಿಗೆ ಆಚಾರದಿಂದಾಯುಷ್ಯ
ಆಚಾರದಿಂದಿಹ ಪರವದರಿಂದ ಸದಾಚಾರವತಿಯೆನಿಸುವದು ॥ ೨೪ ॥
ಸಾರಿಸಿ ರಂಗವಲ್ಲಿಯ ಸರಗೊಳಿಸಿ ದೀಪಾರೋಪಣವನಾಚರಿಸಿ
ಹಾರುತ ಮನದನ್ನನ ಬರವನೆ ಮನಪಾರೆ ಕಾದಿಹುದು ಕಾಂತೆಯರು ॥ ೨೫ ॥
ಬಿಡನೆ ತನ್ನಿಷ್ಟ ದೇವತೆಗಾರೋಹಣೆವಡಿಸಿ ತಂದಮೃತಾನ್ನವನು
ತಡೆಯದಿನಿಯನನುಮತಿವಡೆದಪನುಣಬಡಿಸುವುದುಪಚರಿಸುವದು ॥ ೨೬ ॥
ತನ್ನ ಮನೆಯ ಬಡತನಗಳ ಧನಗಳ ತನ್ನಿನಿಯನ ತಪ್ಪುಗಳ
ತನ್ನ ಮರವೆ ಮೋಸಗಳನವರಿವರೊಳು ಬಿನ್ನವಿಸದೆ ಮರಸುವದು ॥ ೨೭ ॥
ಪತಿ ಪಾದ ಭಕ್ತಿಯುರೆನಿಪ ಸತಿಯರು ತಾವತಿಶಯ ಗತಿಗೆಳಸಿದೊಡೆ
ಇತರ ಚಿಂತೆಯನುಳಿದೇಕ ಚಿತ್ತದೊಳು ಶ್ರೀಪತಿ ಪಾದವನೇ ಭಜಿಸುವದು ॥ ೨೮ ॥
ಶುಚಿಯಾಗಿರೆ ದೇವತೆಗಳು ಸಲಹುವರು ಶುಚಿಯನು ಪಿತೃಗಳೋವುವರು
ಶುಚಿಗಂಜುವುವು ಪ್ರೇತ ಭೂತಗಳದರಿಂದ ಶುಚಿಯಪ್ಪುದೆಲ್ಲ ವೇಳೆಯೊಳು ॥ ೨೯ ॥
ಪತಿಯೊಲವಕ್ಕೆ ಸತಿಯರೊಳು ಸತಿಯರು ಪತಿ ಪಾದ ಭಕ್ತಿಯುದಕ್ಕೆ
ಸತಿಯರ ಮೈಮೆ ಸಕಲ ಜಗದೊಳುನಿಲ್ಕೆ ಸತಿ ಧರ್ಮ ಶಾಶ್ವತಮಕ್ಕೆ ॥ ೩೦ ॥

'ಎಂದಿಗೂ ಮರೆಯಲಾಗದ ಸಾಮ್ರಾಜ್ಯ'ದ

# ಕೀರ್ತಿಶೇಷ ಬಿ. ಸೂರ್ಯನಾರಾಯಣರಾವ್

ಭಾರತೀಯ ಜ್ಯೋತಿಷ ಶಾಸ್ತ್ರವು ಜಗತ್ತಿನಲ್ಲೆಲ್ಲ ಬೆಳಗುವಂತೆ ಮಾಡಿದವರಲ್ಲಿ ಕೀ. ಶೇ. ಬೆಂಗಳೂರು ಸೂರ್ಯನಾರಾಯಣ ರಾಯರು ಪ್ರಮುಖರು. ಜ್ಯೋತಿಷವು ಒಂದು ವೈಜ್ಞಾನಿಕ ಶಾಸ್ತ್ರ ಎಂಬುದಾಗಿ ವಿದೇಶೀಯರಿಗೆ ಪರಿಚಯ ಮಾಡಿಕೊಟ್ಟ ಪ್ರಥಮ ಭಾರತೀಯರಿವರು. ಇವರು ಕೇವಲ ಜ್ಯೋತಿಷ ಶಾಸ್ತ್ರಜ್ಞರೇ ಅಲ್ಲದೆ ಕನ್ನಡ ನಾಡು, ನುಡಿಗಳ ಬಗ್ಗೆ ಅನೇಕ ಸಂಶೋಧನಾತ್ಮಕ ಗ್ರಂಥಗಳನ್ನು ಬರೆದಿರುವ ಇತಿಹಾಸಜ್ಞರೂ ಹೌದು.

ಇವರ ಹಿರಿಯರು ದೊಡ್ಡಬಳ್ಳಾಪುರದ ತಾಲ್ಲೂಕಿನ ಹೊನ್ನಾವರ ಗ್ರಾಮದವರು. ಇವರ ತಂದೆಯವರಾದ ಗೋಪಾಲರಾವು ಪಂತುಲು ಅವರು ಒರಿಸ್ಸಾದ ಗಂಜಾಂ ಜಿಲ್ಲೆಗೆ ಸೇರಿರುವ ಪರ್ಲಾಕಿಮಿಡಿ ಎಂಬ ಆಗಿನ ದೇಶೀಯ ಸಂಸ್ಥಾನದಲ್ಲಿ ದಿವಾನರಾಗಿದ್ದರು, ಪಂತುಲು ಮತ್ತು ರುಕ್ಮಿಣಿಯಮ್ಮನವರ ಪ್ರಥಮ ಪುತ್ರರಾಗಿ ೧೨-೨-೧೮೫೬ ರಲ್ಲಿ ಶ್ರೀಕಾಕುಳದಲ್ಲಿ ಸೂರ್ಯನಾರಾಯಣ ರಾಯರು ಜನಿಸಿದರು. ಸ್ವಾತಂತ್ರ್ಯ ಸಮರದ ಗಾಳಿ ಈ ಪುಟ್ಟ ಸಂಸ್ಥಾನದ ಮೇಲೆ ಬೀಸಿದ್ದರ ಪರಿಣಾಮವಾಗಿ ಪಂತುಲುರವರು ಮರಣಹೊಂದಿದರು. ಬೇರೆ ಆಧಾರವಿಲ್ಲದ ರುಕ್ಮಿಣಿಯಮ್ಮನವರು ಮಕ್ಕಳನ್ನು ಕರೆದುಕೊಂಡು ಅವರ ವಿದ್ಯಾಭ್ಯಾಸಕ್ಕಾಗಿ ಬೆಂಗಳೂರಿಗೆ ಬಂದರು, ಲಂಡನ್ ಮಿಶನ್ ಹೈಸ್ಕೂಲಿನಲ್ಲಿ ರಾಯರು ತಮ್ಮ ಪ್ರೌಢ ಶಾಲಾ ವಿದ್ಯಾಭ್ಯಾಸವನ್ನು ಮುಂದುವರಿಸಿ. ೧೮೭೨ ರಲ್ಲಿ ಮೆಟ್ರಿಕ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

೧೮೭೬ ರಲ್ಲಿ ಒಮ್ಮೆ ಬೆಂಗಳೂರು ಮಾಮೂಲು ಪೇಟೆಯಲ್ಲಿನ ಸ್ನೇಹಿತನೊಬ್ಬನ ಮನೆಯ ಜಗುಲಿಯ ಮೇಲೆ ಕುಳಿತು ತಮ್ಮ ಸ್ನೇಹಿತನೊಬ್ಬನ ದುರ್ನಡತೆಯ ಬಗ್ಗೆ ಚರ್ಚಿಸುತ್ತಿದ್ದಾಗ, ಆಗ ಅಲ್ಲಿಗೆ ಬಂದಿದ್ದ ತ್ಯಾಗಗೆರೆ ಸುಬ್ಬರಾಯ ಶಾಸ್ತ್ರಿಗಳೆಂಬುವರು ಅವನ್ನು ಆಲಿಸಿ, ಆ ಸ್ನೇಹಿತನ ಬಗ್ಗೆ ಭವಿಷ್ಯ ನುಡಿದರು. ಇದರಿಂದ ಆಕರ್ಷಿತರಾದ ರಾಯರು ಆ ವಿದ್ಯೆಯನ್ನು ತಮಗೂ ಹೇಳಿಕೊಡುವಂತೆ ಕೇಳಿಕೊಂಡಾಗ, ಅವರು 'ನಿಮ್ಮ ತಂದೆ ಜ್ಯೋತಿಷ್ಯರಲ್ಲ, ನಿಮ್ಮ ತಾತ ಜ್ಯೋತಿಷ್ಯರಲ್ಲ, ನಿನಗೆ ಹೇಗೆ ಬರುತ್ತೆ ಹೋಗಯ್ಯ !' ಎಂದು ಹಾಸ್ಯ ಮಾಡಿದರು; ಇದರಿಂದ ಅವರ ಆತ್ಮಾಭಿಮಾನ ಕೆಣಕಿದಂತಾಯಿತು.' ಇನ್ನು ಆರು ತಿಂಗಳಲ್ಲಿ ಆ ವಿದ್ಯೆಯನ್ನು ಕಲಿಯುತ್ತೇನೆ'ಎಂದು ಶಪಥ ಮಾಡಿದರು.

ನೀಲಗಿರಿಯಲ್ಲಿ ಒಬ್ಬ ಕಾಫೀಪ್ಲಾಂಟರ್ ಬಳಿ ಕನ್ನಡ ಹೇಳಿಕೊಡುವ ಮುನ್ಷಿ ಕೆಲಸ ಖಾಲಿ ಇದೆಯೆಂಬುದನ್ನು ತಿಳಿದು, ಅಲ್ಲಿ ಹೋಗಿ ಕೆಲಸಕ್ಕೆ ಸೇರಿದರು. ದಿನದಲ್ಲಿ ಒಂದೆರಡು ಘಂಟೆಗಳ ಕೆಲಸ, ಉಳಿದ ಸಮಯವನ್ನು ಜ್ಯೋತಿಷ ಗ್ರಂಥಗಳ ಅಧ್ಯಯನದಲ್ಲಿ ಕಳೆದರು. ನೀಲಗಿರಿಯ ಪ್ರಕೃತಿ ಸೌಂದರ್ಯ ಅವರನ್ನು ಕವನಗಳನ್ನು ಬರೆಯುವಂತೆಯೂ ಮಾಡಿತು.

೧೮೮೦ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಎಫ್. ಎ. ತರಗತಿಗೆ ಸೇರಿ ರಾಯರು ವಿದ್ಯಾಭ್ಯಾಸವನ್ನು ಮುಂದುವರೆಸಿದರು. ಸರ್. ಎಂ. ವಿ; ಕರ್ಪೂರ ಶ್ರೀನಿವಾಸರಾಯರು, ಎನ್. ಟಿ.

ಗೋಪಾಲಸ್ವಾಮಿ ಅಯ್ಯಂಗಾರ್‌ರವರುಗಳು ಇವರ ಸಹಪಾಠಿಗಳಾಗಿದ್ದರು. ಈ ಸಮಯದಲ್ಲಿ 'ವಿಕ್ಟೋರಿಯಾ ರಾಜ್ಞೀಯರ ಚರಿತ್ರೆ' ಎಂಬ ಐತಿಹಾಸಿಕ ಗ್ರಂಥವನ್ನು ರಚಿಸಿದರು. ೧೮೮೨ ರಲ್ಲಿ ಎಫ್. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ, ಜೀವಶಾಸ್ತ್ರದ ಬಿ. ಎ. ಗೆ ಸೇರಿದರು. ತುಂಬಾ ಬುದ್ಧಿವಂತರಾದುದರಿಂದ 'Vegetable philosophy' ಎಂಬ ಪ್ರಭೇದದಲ್ಲಿ ಇವರಿಗೆ ವಿದ್ಯಾರ್ಥಿ ವೇತನವೂ ದೊರೆಯಿತು. ಬಿ. ಎ. ಗೆ ಸೇರಿದ ಹೊಸತರಲ್ಲಿ 'ಜ್ಯೋತಿಷ ಸಂಥಾ ಸಾರ ಮಂಜರಿ' ಎಂಬ ಗ್ರಂಥವನ್ನು ಪ್ರಕಟಿಸಿದರು. ಆ ಶಾಸ್ತ್ರದ ಪ್ರಾಥಮಿಕ (ಸಂಸ್ಕೃತ) ಸೂತ್ರಗಳ ಅರ್ಥವನ್ನು ಒಂದು ಕಡೆ ಇಂಗ್ಲಿಷ್ ಮತ್ತೊಂದು ಕಡೆ ಕನ್ನಡದಲ್ಲಿ ಕೊಟ್ಟಿದ್ದಾರೆ. ೧೮೮೪ರಲ್ಲಿ ವಿಶ್ವವಿದ್ಯಾನಿಲಯಕ್ಕೆ ಮೊದಲಿಗರಾಗಿ ಬಿ. ಎ.ಯಲ್ಲಿ ಉತ್ತೀರ್ಣರಾದರು. ಅಷ್ಟರಲ್ಲಿ ವಿವಾಹಿತರಾಗಿದ್ದ ರಾಯರು ಈ ರೀತಿಯ ವಿದ್ಯಾಭ್ಯಾಸದ ನಂತರ ಆರು ತಿಂಗಳು ಹಾಸನದ ಹೈಸ್ಕೂಲಿನಲ್ಲಿ ಉಪಾಧ್ಯಾಯರಾಗಿದ್ದರು. ಕೋಪಿಷ್ಟ ವ್ಯಕ್ತಿಯಾದ ಇವರು ನೌಕರಿಯನ್ನು ಬಿಟ್ಟು ಮದರಾಸಿಗೆ ಹೋಗಿ, ಲಾ ಕಾಲೇಜನ್ನು ಸೇರಿದರು. ೧೮೮೬ರಲ್ಲಿ ಬಿ. ಎಲ್. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಓರ್ವ ಐರೋಪ್ಯನ ಸಹಭಾಗಿತ್ವದೊಡನೆ 'ಆರ್ಗಸ್' (Argus) ಎಂಬ ಕಾನೂನು ಶಾಸ್ತ್ರದ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಓದುಗರ ಕುತೂಹಲ ಕೆರಳಿಸುವಂತಹ ಕಾನೂನು ವಿಷಯಗಳನ್ನು ಇದರಲ್ಲಿ ತಿಳಿಸುತ್ತಿದ್ದರು. ಭಾರತದ ಪ್ರಪ್ರಥಮ ಕಾನೂನುಶಾಸ್ತ್ರ ಪತ್ರಿಕೆಯಾದ ಇದು ಕಾರಣಾಂತರಗಳಿಂದ ನಷ್ಟಹೊಂದಿದ್ದರಿಂದ, ಮೂರು ವರ್ಷಗಳ ನಂತರ ನಿಂತು ಹೋಯಿತು.

೧೮೯೦ರಲ್ಲಿ ಬಳ್ಳಾರಿ ಬಳಿ ಇರುವ ವಿರೂಪಾಕ್ಷ ಮಠದಲ್ಲಿ ಏಜೆಂಟರಾಗಿ ಸೇರಿದರು. ಕೆದರಿ ಚಿಲ್ಲನ ಅತಿರೇಕತೆ ಇತ್ಯಾದಿಗಳು ಒಡಿಸದೆ, ಸ್ವತಂತ್ರ ಜೀವನ ನಡೆಸಲು ನಿಶ್ಚಯಿಸಿ, ಬಳ್ಳಾರಿಯಲ್ಲಿ ವಕೀಲಿ ವೃತ್ತಿಯನ್ನು ಪ್ರಾರಂಭಿಸಿದರು. ಇವರು ಉತ್ತಮ ವಾಗ್ಮಿಗಳೂ ವಿಷಯ ಪ್ರತಿಪಾದಕರೂ ಆದುದರಿಂದ ಬಹಳ ಬೇಗ ಜನಪ್ರಿಯರಾದರು. ಆದರೆ ಜ್ಯೋತಿಷ ಶಾಸ್ತ್ರವನ್ನು ಇವರ ಒಳ ಮನಸ್ಸು ಬಯಸುತ್ತಿತ್ತು. 'ಸ್ವಯಂಜ್ಯೋತಿರ್ಬೋಧಿನಿ' ಎಂಬ ಗ್ರಂಥವನ್ನು ಕನ್ನಡ, ತೆಲುಗು, ಇಂಗ್ಲಿಷ್ ಭಾಷೆಗಳಲ್ಲಿ ಪ್ರಕಟಿಸಿದರು. ಇದರ ಪರಿಣಾಮವಾಗಿ ೧೮೯೪ರಲ್ಲಿ ಇವರಿಗೆ M. R. A. S. (ಮೆಂಬರ್ ಆಫ್ ರಾಯಲ್ ಏಷ್ಯಾಟಿಕ್ ಸೊಸೈಟಿಯ)] ಪ್ರಶಸ್ತಿ ದೊರೆಯಿತು. ಜ್ಯೋತಿಷ ಶಾಸ್ತ್ರವನ್ನು ಕುರಿತಾದ ಒಂದು ಪತ್ರಿಕೆಯನ್ನೇಕೆ ಪ್ರಾರಂಭಿಸಬಾರದು ಎಂಬ ಯೋಚನೆ ಬಂತು. ೧೮೯೫ರಲ್ಲಿ 'The Astrological Magazine' ಅನ್ನು ಪ್ರಾರಂಭಿಸಿದರು. ಈಗಲೂ ಇದು ಮಾಸಪತ್ರಿಕೆಯಾಗಿ ಮುಂದುವರೆದು ಜಗದ್ವಿಖ್ಯಾತವಾಗಿದೆ. ರಾಯರ ಮೊಮ್ಮಕ್ಕಳಾದ ಡಾ. ಬಿ. ವಿ. ರಾಮನ್‌ರವರು ಇದನ್ನು ನಡೆಸಿಕೊಂಡು ಬರುತ್ತಿದ್ದಾರೆ. ಈ ಪತ್ರಿಕೆ ಪ್ರಾರಂಭವಾದ ಹೊಸತರಲ್ಲಿ ಇವರಿಗೆ M. A. S B. (ಮೆಂಬರ್ ಆಫ್ ಏಷ್ಯಾಟಿಕ್ ಸೊಸೈಟಿ ಆಫ್ ಬೆಂಗಾಲ್) ಎಂಬ ಪ್ರಶಸ್ತಿಯೂ ಲಭಿಸಿತು.

ಯಾವುದೋ ಒಂದು ಮೊಕದ್ದಮೆಯ ಕಾರಣದಿಂದ ವಕೀಲಿ ವೃತ್ತಿ ಇವರಿಗೆ ಬೇಜಾರಾಗಿ, ಜ್ಯೋತಿಷ ಶಾಸ್ತ್ರದ ಆಧಾರದಿಂದ ಜೀವನ ನಡೆಸಬೇಕೆಂದು ತೀರ್ಮಾನಿಸಿ, ೧೯೦೦ ರಲ್ಲಿ ಮದರಾಸಿನಲ್ಲಿ ನೆಲೆಸಿದರು. ಇವರ ಮಿತ್ರರಾದ ಹಿಂದೂ ಪತ್ರಿಕಾ ಸಂಪಾದಕರು ಇವರ ಈ ತೀರ್ಮಾನವನ್ನು ಹಾಸ್ಯ ಮಾಡಿದರು. ಆದರೆ ರಾಯರು ತಮ್ಮ ಹಠವನ್ನು ಬಿಡಲಿಲ್ಲ. ನಿಖರ ನಿರ್ಣಯ, ಸೂಕ್ತ ತೀರ್ಪುಗಳು ಇವರನ್ನು ಜನಪ್ರಿಯರನ್ನಾಗಿ ಮಾಡಿತು.

ಹಣವಿದ್ದಾಗ ರಾಯರು ಕೊಡುಗೈ ದೊರೆ. 'ಜಾತಕ ಚಂದ್ರಿಕೆ', 'ಬೃಹತ್ ಜಾತಕ' (ದ್ವಿ: ಮು.), 'ಜೈಮಿನಿ ಸೂತ್ರ', 'ಚಪ್ಪನ್ನ ಶತ ಯೋಗ ಮಂಜರಿ', 'ಸ್ತ್ರೀ ಜಾತಕ', 'ಸರ್ವಾರ್ಥ ಚಿಂತಾಮಣಿ ಭಾಗ ೧, ೨, ೩', 'ಜಾತಕ ಕಲಾನಿಧಿ' ಇತ್ಯಾದಿ ಗ್ರಂಥಗಳನ್ನು

ಪ್ರಕಟಿಸಿದರು. ಇವುಗಳಲ್ಲಿ ಅನೇಕವು ಆಂಗ್ಲ ಭಾಷೆಯ ಗ್ರಂಥಗಳು. ಇವು ಮತ್ತು ಜ್ಯೋತಿಷ ಪತ್ರಿಕೆಯ ಮುಖಾಂತರ ಇವರ ಕೀರ್ತಿ ವಿದೇಶಗಳಿಗೂ ಹರಡಿತು.

ಬಳ್ಳಾರಿಯ ಜಿಲ್ಲಾ ಕಲೆಕ್ಟರ್‌ರವರಾಗಿದ್ದ ರಾಬರ್ಟ್ ಸ್ಯೂಯೆಲ್‌ರವರು 'Forgotten Empire' (ಮರೆತು ಹೋದ ಸಾಮ್ರಾಜ್ಯ) ಎನ್ನುವ ವಿಜಯನಗರವನ್ನು ಕುರಿತಾದ ಗ್ರಂಥವೊಂದನ್ನು ಬರೆದರು; ಆಗಿನ ಆನೆಗೊಂದಿ ರಾಜರಿಗೆ ಇದರಿಂದ ಅಸಮಾಧಾನವಾಯಿತು. ಅವರು ರಾಯರನ್ನು ಕಂಡು, ವಿಜಯನಗರದ ಬಗ್ಗೆ ಒಂದು ಗ್ರಂಥವನ್ನು ರಚಿಸುವಂತೆ ಬಿನ್ನವಿಸಿದರು. ಆಗ 'Never To Be Forgotten Empire' (ಎಂದೆಂದಿಗೂ ಮರೆಯದ ಸಾಮ್ರಾಜ್ಯ) ಎನ್ನುವ ಗ್ರಂಥವನ್ನು ರಚಿಸಿದರು. ಇದರಲ್ಲಿನ ಪ್ರೌಢಶೈಲಿ, ವಿಷಯ ವ್ಯಾಪ್ತಿ, ಗಹನ ಗಂಭೀರ ನಿರೂಪಣೆಗಳನ್ನು ಕಂಡು, ಎಂ. ಎ. (ಇತಿಹಾಸ) ಪರೀಕ್ಷೆಗೆ ಪಠ್ಯ ಪುಸ್ತಕವನ್ನಾಗಿ ನಿಯುಕ್ತಗೊಳಿಸಲು ಸರ್ಕಾರವು ತೀರ್ಮಾನಿಸಿತು. ಆದರೆ ಬ್ರಾಹ್ಮಣ ಉಡುಪಿನಲ್ಲಿದ್ದ ರಾಯರ ಫೋಟೋ ಅದರ ಪ್ರಾರಂಭದಲ್ಲಿದ್ದು, ಅದನ್ನು ತೆಗೆದು ಹಾಕಲು ಅವರು ನಿರಾಕರಿಸಿದ್ದರಿಂದ. ಆ ಗ್ರಂಥ ಪಠ್ಯ ಪುಸ್ತಕವಾಗಲಿಲ್ಲ.

ಈ ಘಟನೆಯು ರಾಯರಿಗೆ ಬೇಜಾರು ಹುಟ್ಟಿಸಿತು. ಭಾರತಾದ್ಯಂತ ಪ್ರವಾಸ ಮಾಡಿದರು. ಟಿಳಕ, ಮಾಲವೀಯಾ ಇತ್ಯಾದಿ ರಾಷ್ಟ್ರ ವ್ಯಕ್ತಿಗಳನ್ನು ಭೇಟಿ ಮಾಡಿದರು. ನಂತರ ಬರ್ಮಾ; ಸಯಾಂ ಇಂಡೋ ಚೈನಾ, ಪೂರ್ವ ಇಂಡ್ ದ್ವೀಪಗಳು, ಸಿಲೋನ್‌ಗಳಲ್ಲಿ ಸಂಚರಿಸಿದ ಹಿಂತಿರುಗಿದರು. ೧೯೧೦ ರಲ್ಲಿ ಕಾಲಡಿಯಲ್ಲಿನ 'ಜ್ಯೋತಿಷ ಸಮ್ಮೇಳನ'ಕ್ಕೆ ಇವರು ಕಾರ್ಯದರ್ಶಿಗಳಾಗಿದ್ದರು. ಶೃಂಗೇರಿ ಸ್ವಾಮಿಗಳು ಅಧ್ಯಕ್ಷ ಪೀಠವನ್ನು ಅಲಂಕರಿಸಿದ್ದರು. ವಿದೇಶೀಯರನ್ನು ಇಂತಹ ಸಭೆಗಳಿಗೆ ಆಹ್ವಾನಿಸಬೇಕೆ, ಬೇಡವೆ ಎಂಬುದರ ಚರ್ಚೆ ಬಂದಾಗ, ಅವರನ್ನು ಆಹ್ವಾನಿಸಲೇ ಬೇಕೆಂದು ಪಟ್ಟು ಹಿಡಿದು, ಸಾಧಿಸಿದರು.

ಇಷ್ಟರಲ್ಲಿ ಸ್ವಂತ ಊರಿನ ಚಪಲ ಹೆಚ್ಚಾಯಿತು. ೧೯೧೩ ರಲ್ಲಿ ಮದರಾಸಿನಿಂದ ಬೆಂಗಳೂರಿಗೆ ಬಂದರು. ಬೆಂಗಳೂರಿನ ಉತ್ತರದಲ್ಲಿ ೧೩ ಮೈಲ ದೂರದಲ್ಲಿನ ಹುಣಸಮಾರನ ಹಳ್ಳಿಯಲ್ಲಿ ಒಂದು ದೊಡ್ಡ ಬಂಗಲೆಯನ್ನು ಕಟ್ಟಿಸಿಕೊಂಡು, ತಮ್ಮ ಅಂತ್ಯ ಕಾಲದವರೆಗೂ ಅಲ್ಲಿಯೇ ಇದ್ದರು. ಆ ಬಂಗಲೆಯಲ್ಲಿ ಒಂದು ಕಡೆ ವೇದ ಪಾಠ ಶಾಲೆ. ಯಾಗ ಶಾಲೆ, ಗೋಶಾಲೆಗಳನ್ನು ನಿರ್ಮಿಸಿದ್ದರು.

ಇವರು ನುಡಿದ ಅನೇಕ ಭವಿಷ್ಯ ವಾಣಿಗಳು ನಿಜವಾಗಿದ್ದುವು. 'Royal Horoscopes' 'Illustrated Horoscopes' Life of Varahamihira', 'Life of Hyder Ali', 'pleaders of politics', 'Vikari and its prospectus' ಇತ್ಯಾದಿಯಾಗಿ ಇವರು ಒಟ್ಟು ೮೨ ಗ್ರಂಥಗಳನ್ನು ರಚಿಸಿದರು. ಅವುಗಳಲ್ಲಿ ೪೦ ಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿದರು. ವಿದೇಶಗಳಲ್ಲಿ ಇವರ ಬಗ್ಗೆ ಗೌರವವಿತ್ತು ಎನ್ನುವುದಕ್ಕೆ ತಮ್ಮ ಅಂತ್ಯದವರೆಗೂ ಇವರು ನ್ಯೂಯಾರ್ಕ್ ನಗರದ Medico Legal Society ಗೆ ಕರೆಸ್ಪಾಂಡಿಂಗ್ ಸದಸ್ಯರಾಗಿದ್ದುದೇ ಉದಾಹರಣೆ.

ಈ ರೀತಿ ಭಾರತೀಯ ಜ್ಯೋತಿಷ ಶಾಸ್ತ್ರಕ್ಕೆ ಒಂದು ಹೊಸ ರೂಪವನ್ನು ಕೊಟ್ಟು ಪ್ರಪಂಚದ ಎಲ್ಲ ವ್ಯಕ್ತಿಗಳೂ ಅದಕ್ಕೆ ಗೌರವ ಸಲ್ಲಿಸುವಂತೆ ಕೀ. ಶೇ|| ಬಿ. ಸೂರ್ಯನಾರಾಯಣ ರಾಯರು ಮಾಡಿದರು. ಭಾರತ ದೇಶದಲ್ಲಿ ಜರುಗಿದ ಅನೇಕ ಜ್ಯೋತಿಷ ಸಮ್ಮೇಳನಗಳಿಗೆ ಇವರು ಅಧ್ಯಕ್ಷರು ಆಗಿದ್ದರು. ಹೀಗೆ ತುಂಬು ಜೀವನ ನಡೆಸಿ, ಉಗ್ರರಥ ಶಾಂತಿ, ಕನಕಾಭಿಷೇಕ ಮತ್ತು ಸಹಸ್ರ ಚಂದ್ರದರ್ಶನ ಶಾಂತಿಯನ್ನು ಮಾಡಿಸಿಕೊಂಡು, ೧೨-೧೩-೧೯೩೭ ರಲ್ಲಿ ತಮ್ಮ ೮೨ ನೇ ವಯಸ್ಸಿನಲ್ಲಿ ದೈವಾಧೀನರಾದರು. ವಿಜಯನಗರ ಇತಿಹಾಸವು ಇಂದಿಗೂ ಇವರ ಹೆಸರನ್ನು ಚಿರಸ್ಥಾಯಿಯಾಗಿಸಿದೆ.

# ಜನುಮ ಜೀವ ಇದು ಜೀವನ

## ಸರಿದರೆ ಒತ್ತಪ್ಪ

ನಾನು ಒಂದು ವರ್ಷದ ಹಿಂದೆ ನನ್ನ ಚಿಕ್ಕಮ್ಮನ ಮಗಳ ಮದುವೆಗೆ ಬೆಂಗಳೂರಿಗೆ ಹೋಗಿದ್ದೆ. ಮದುವೆಯನ್ನು ನಮ್ಮ ತಂದೆಯವರು ಒಂದು ಛತ್ರದಲ್ಲಿ ಏರ್ಪಡಿಸಿದ್ದರು. ಮದುವೆ ಎಲ್ಲಾ ಮುಗಿದ ಮೇಲೆ ಛತ್ರವನ್ನು ತೆರವು ಮಾಡಲು ಶುರು ಮಾಡಿದೆವು. ತಂದೆಯವರು ತಾವು ಲೆಕ್ಕವನ್ನು ತೀರಿಸಿ ಬರುವುದಾಗಿ ಹೇಳಿ ನಮಗೆ ಸಾಮಾನುಗಳನ್ನು ಕಟ್ಟಿಡಲು ಹೇಳಿದರು. ಆದರೆ ಸುಮಾರು ಒಂದುವರೆ ಗಂಟೆಯಾದರೂ ಅವರು ತಿರುಗಿ ಬರಲಿಲ್ಲ. ನಾವು ಛತ್ರದ ಆಡಳಿತಾಧಿಕಾರಿಯ ಕಛೇರಿಗೆ ಹೋಗಿ ನೋಡಿದರೆ, ಅಲ್ಲಿ ತಂದೆಯವರಿಗೂ ಆಡಳಿತಾಧಿಕಾರಿಗೂ ಬಿರುಸಾದ ಮಾತುಕತೆ ನಡೆಯುತ್ತಿತ್ತು. ಜಗಳ ಅಡುಗೆ ಸಾಮಾನಿನ ಬಾಡಿಗೆಯ ಬಗ್ಗೆ ಆಗಿತ್ತು. ತಂದೆಯವರ ಹೇಳಿಕೆಯ ಪ್ರಕಾರ ಅವರು ಆಡಳಿತಾಧಿಕಾರಿಯ ಹತ್ತಿರ ಮೊದಲೇ ಮಾತನಾಡಿದ್ದದೇನೆಂದರೆ; ಛತ್ರಕ್ಕೆ ಪ್ರತಿ ದಿನವೂ ರೂ. ೧೦೦ ಬಾಡಿಗೆ, ಪಾತ್ರೆಗಳ ಉಪಯೋಗಕ್ಕೆ ರೂ. ೭೫ (ಒಟ್ಟು), ಮತ್ತು ಕುರ್ಚಿ ಸೋಫಾಗಳ ಉಪಯೋಗಕ್ಕೆ ರೂ. ೭೫-೦೦ ಬಾಡಿಗೆ (ದಿನ ಒಂದಕ್ಕೆ) ಆದರೆ ಈ ಮಾತುಕತೆಗೆ ಕರಾರು ಪತ್ರ ಇರಲಿಲ್ಲ. ಆಡಳಿತಾಧಿಕಾರಿಯು ಪಾತ್ರೆಗಳ ಉಪಯೋಗಕ್ಕೆ ರೂ. ೨೨೫ ನ್ನು (ಮೂರು ದಿನ ಛತ್ರವನ್ನು ಬಾಡಿಗೆಗೆ ತೆಗೆದುಕೊಂಡಿದ್ದೆವು) ಕೊಡಿ ಎಂದು! ತಂದೆಯವರು ಅದು ಹೇಗೆ ಸಾಧ್ಯ. ನಾವು ಮಾತನಾಡಿದ್ದುದು ಮೂರು ದಿನಕ್ಕೂ ಸೇರಿ ರೂ. ೭೫ ಎಂದು. ನಾನು ಮತ್ತು ಇತರರು ಮೇಲ್ವಿಚಾರಕನಿಗೆ ಏನೇನೋ ಹೇಳಿ ಒಪ್ಪಿಸಲು ಪ್ರಯತ್ನಪಟ್ಟೆವು. ಆದರೆ ಅವನು ಒಪ್ಪಲೇ ಇಲ್ಲ. ಕಡೆಗೆ ತಂದೆಯವರಿಗೆ ಕೋಪ ಬಂದು ರೂ. ೨೨೫ ನ್ನು ಅವನ ಮುಂದೆ ಬಿಸಾಡಿದರು.

ಈ ಮಾತುಕತೆಯ ಮಧ್ಯದಲ್ಲಿ ಛತ್ರವು ಯಾವುದೋ ಟ್ರಸ್ಟ್ (Trust) ಸೇರಿದುದೆಂದೂ ಮತ್ತು ಆಡಳಿತಾಧಿಕಾರಿಯು ಸುಮ್ಮನೆ ದಿನ ನಿತ್ಯದ ಆಡಳಿತವನ್ನು ನೋಡಿಕೊಳ್ಳಲು ಇರುವನೆಂದೂ ತಿಳಿದು ಬಂತು. ನಾನು ಕಡೆಗೆ ಆಡಳಿತಾಧಿಕಾರಿಗೆ ಆತನ ಹೆಸರು ಮತ್ತು ವಿಳಾಸವನ್ನು ತಿಳಿಸೆಂದು ಸ್ವಲ್ಪ ಗಡುಸಾಗಿಯೇ ಕೇಳಿದೆ. ಅವನು ಹೆಸರನ್ನು ತಿಳಿಸಲು ಹಿಂದು ಮುಂದು ನೋಡಿದ. ನಾನು 'ತಿಳಿಸದಿದ್ದರೆ ಬೇಡ, ನನಗೆ ಗೊತ್ತು ಹೇಗೆ ಗೊತ್ತುಪಡಿಸಿಕೊಳ್ಳುವುದೆಂದು' ಎಂದು ಹೇಳಿ ಮುಖ ತಿರುಗಿಸಿಕೊಂಡೆ. ನಾನು ಸಾಮಾನುಗಳಿಗೆ ಕಾವಲಾಗಿ ಅಲ್ಲಿಯೇ ಉಳಿದುಕೊಂಡೆ. ನಾನು ಒಬ್ಬನೇ ಇರುವುದನ್ನು ನೋಡಿ ಛತ್ರದ ಮೇಲ್ವಿಚಾರಕನು ನನ್ನ ಹತ್ತಿರ ಬಂದು "ಏನು ಸ್ವಾಮಿ, ನೀವು ನನ್ನ ಹತ್ತಿರ ಮೊದಲೇ ಹೇಳಬಾರದೆ? ನನಗೆ ಮೊದಲೇ ನೀವು Income tax officer ಅಂತಾ ಗೊತ್ತಿದ್ದರೆ ಇಷ್ಟೆಲ್ಲಾ ತಕರಾರಿಗೆ ಕಾರಣವೇ ಇರುತ್ತಿರಲಿಲ್ಲ. ಅಂತಾ ಹೇಳಿ ೭೫ರೂ. ವಾಪಸ್ಸು ಕೊಡಲು ಬಂದ. ಅದದ್ದೆಲ್ಲ ಮರೆತುಬಿಡಿ ಸ್ವಾಮಿ ಎಂದು ಹಲ್ಲು ಕಿರಿದ. ನಾನು ಸಿಟ್ಟಿನಿಂದ "ಕೊಟ್ಟರೆ ರೂ. ೧೫೦ ನ್ನು ವಾಪಸ್ಸು ಕೊಡು ಇಲ್ಲದಿದ್ದರೆ ನನಗೆ ಗೊತ್ತು ಹೇಗೆ ವಸೂಲು ಮಾಡುವುದೆಂದು" ಎಂದು ಜಂಬದಿಂದ ಹೇಳಿದೆ. ಅವನು ಅನುಮಾನಿಸಿ ಅನುಮಾನಿಸಿ ರೂ. ೧೫೦-೦೦ ನ್ನು ಹಿಂತಿರುಗಿಸಿ "ಏನು ಬರೀಲಿಕ್ ಹೋಗ್ಬೇಡಿ ಸ್ವಾಮಿ" ಎಂದು ನಕ್ಕ. ನನಗೆ ಒಳಗೊಳಗೆ ನಗು.

– ನಿವಾಸ ಅ, ಮಾಂಡ್ಯ

## ಜಡೆಯ ಅವಾಂತರ

ನಮ್ಮಕ್ಕನ ಮದುವೆ ಸಂಭ್ರಮದ ಘಟನೆ ಗಂಡಿನ ಕಡೆಯಲ್ಲಿ "ಶೋಭಾ" ಎಂಬ ಯುವತಿ ಇದ್ದಳು. ನೋಡಲು ಚೆನ್ನಾಗಿ

ದ್ದಳು. "ಅವಳ ಕೂದಲು ಬಹಳ ಉದ್ದವಾಗಿ, ದಪ್ಪವಾಗಿತ್ತು. ಅವಳಷ್ಟು ಉದ್ದವಾದ ಅಂದವಾದ ಕೂದಲನ್ನು ನಾನು ನೋಡೇ ಇರಲಿಲ್ಲ. ನಾವೆಲ್ಲ ಅತಿ ಆಸಕ್ತಿಯಿಂದ ಅವಳ ಕೂದಲನ್ನು ನೋಡುತ್ತಿದ್ದೆವು. ಗುಂಗುರು ಗುಂಗುರಾಗಿ ಮಾಟವಾಗಿ ಅವಳು ಜಡೆ ಹೆಣೆದುಕೊಳ್ಳುವ ರೀತಿ ಬಹಳ ಆಕರ್ಷಕವಾಗಿತ್ತು. ಅವಳು ಗಂಟು ಹಾಕಿಕೊಂಡಾಗ ನೋಡಬೇಕು "ಒಂದು ಬುಟ್ಟಿನೇ ಬೋರಲು ಹಾಕಿದಷ್ಟು ದೊಡ್ಡದಾಗುತ್ತಿತ್ತು.

ಅಷ್ಟು ಕೂದಲನ್ನು ಹೇಗೆ ಪೋಷಿಸುತ್ತೀಯಾ ಎಂದು ನಾವೆಲ್ಲ ಆಸಕ್ತಿಯಿಂದ ಕೇಳಿದಾಗ, ಅವಳು ಹೆಮ್ಮೆಯಿಂದ ಉತ್ತರ ಕೊಡುತ್ತಿದ್ದಳು. ಅವಳ ನೀಳವಾದ ಜಡೆಯನ್ನು ಮೋಹಿಸಿದ ನಮ್ಮಣ್ಣ ಹೇಗಾದರೂ ಮಾಡಿ ವಿವಾಹವಾಗಬೇಕೆಂದು ನಿಶ್ಚಯಿಸಿದ. ಆರತಕ್ಷತೆ ಎಲ್ಲಾ ಮುಗಿದು ರಾತ್ರಿ ೧೧ ಗಂಟೆಗೆ ನಾವೆಲ್ಲರೂ ಹರಟೆ ಹೊಡೀತಾ ನಿಂತಿದ್ದೆವು. ಶೋಭಾಳ ನೀಳವಾದ ಜಡೆ ಅರ್ಧದಷ್ಟು ಬಿಚ್ಚಿಕೊಂಡು ಬೆನ್ನ ಮೇಲೆ ಹರಡಿತ್ತು. ಹರಟೆಯ ರಭಸದಲ್ಲಿ ಅವಳದನ್ನು ಗಮನಿಸಿರಲಿಲ್ಲ. ಆಗ ಒಂದು ಅನಾಹುತ ನಡೆಯಿತು.

ಅಲ್ಲೇ ಇದ್ದ ಸೈಕಲ್ ಕ್ಯಾರಿಯರ್‌ಗೆ ಅವಳ ಕೂದಲು ಸಿಕ್ಕಿಕೊಂಡಿತ್ತು. ಅದನ್ನು ಅವಳು ಗಮನಿಸಲಿಲ್ಲ. ಅದನ್ನು ತಿಳಿಯದ ಸೈಕಲ್ ಯಜಮಾನ ಬಂದು ಸೈಕಲ್‌ನ್ನು ಜೋರಾಗಿ ಹೊರಡಿಸಿಕೊಂಡು ಹೊರಟನು. ಅವನು ಸೈಕಲ್ ಎಳೆದ ರಭಸಕ್ಕೆ ಸೈಕಲ್ ಕ್ಯಾರಿಯರ್‌ಗೆ ಸಿಕ್ಕಿಕೊಂಡಿದ್ದ ಜಡೆ ಕಿತ್ತು ಬಂದು ನೆಲದ ಮೇಲೆಲ್ಲಾ ಹರಡಿತು. ನಾವು ದಿಗ್ಭ್ರಾಂತರಾಗಿ ಅವಳ ತಲೆಯನ್ನು ನೋಡಿದೆವು. ಅಲ್ಲಿದ್ದುದು ಬರಿ ಮೋಟುಜಡೆ. ಅವಳು ನೋವಿನಿಂದಲೂ ನಾಚಿಕೆಯಿಂದಲೂ ತಲೆಯ ಮೇಲೆ ಸೆರಗನ್ನು ಹೊದ್ದು ಒಳಗೋಡಿದಳು. ಆ ಮೇಲೆ ಊರಿಗೆ ಹೋಗುವವರೆಗೂ ನಮಗೆ ಮುಖ ತೋರಿಸಲಿಲ್ಲ.

ಅವಳು ಯಾರೆದುರಿಗೂ ಜಡೆ ಹೆಣೆದುಕೊಳ್ಳದೇ ಇದ್ದುದು ಮತ್ತು ಸಾಧ್ಯವಾದಷ್ಟು ಯಾರೂ ತನ್ನ ಜಡೆಯನ್ನು ಮುಟ್ಟದೇ ಇರುವಂತೆ ನೋಡಿಕೊಳ್ಳುತ್ತಿದ್ದ ಕಾರಣ ಈಗ ನಮಗೆ ಆಗ ಅರ್ಥವಾಗಿತ್ತು.

ಎಂ. ಕೆ. ಪ್ರಭಾಮಣಿ

## ತೊಂಬತ್ತರ ಯುವಕ

೧೯೫೧ ರಲ್ಲಿ ಭಾರತ ಸರ್ಕಾರ ಗಂಗಾ ನದಿಗೆ ಒಂದು ಹೊಸ ಸೇತುವೆಯನ್ನು ಕಟ್ಟಬೇಕೆಂದು ನಿರ್ಧರಿಸಿತು. ಆದರೆ ಎಲ್ಲಿ ಕಟ್ಟಬೇಕು ಎಂಬ ಬಗ್ಗೆ ಇಂಜನಿಯರುಗಳಲ್ಲಿ ಏಕಾಭಿಪ್ರಾಯವಿರಲಿಲ್ಲವಾದ್ದರಿಂದ ಹಿರಿಯ ತಜ್ಞ 'ಖ್ಯಾತನಾಸ್ತು ಶಿಲ್ಪಿ ಮೋಕ್ಷಗುಂಡಂ ವಿಶ್ವೇಶ್ವರಯ್ಯ'ನವರ ಸಲಹೆ ಪಡೆಯಬೇಕೆಂದು ತೀರ್ಮಾನವಾಯಿತು. ಆಗ ವಿಶ್ವೇಶ್ವರಯ್ಯನವರು ತೊಂಬತ್ತು ವರ್ಷದ ಅಂಚಿನಲ್ಲಿದ್ದರು. ದೊಡ್ಡ ದೊಡ್ಡ ಬಂಡೆಗಳಿಂದ ಕೂಡಿದ ಕಡಿದಾದ ನದಿ ತೀರದಲ್ಲಿ ಸಂಚರಿಸುವುದು ಯುವಕರಿಗೂ ಕಷ್ಟದ ಕೆಲಸವೆಂದ ಮೇಲೆ ವೃದ್ಧರಿಗೆ ಹೇಗೆ ಸಾಧ್ಯ? ಆದ್ದರಿಂದ ವಿಶ್ವೇಶ್ವರಯ್ಯನವರನ್ನು ಕೊಂಡೊಯ್ಯಲು ಡೋಲಿಗಳು ಸಿದ್ಧವಾಗಿ ನಿಂತವು.

ವೇಳೆಗೆ ಸರಿಯಾಗಿ ವಿಶ್ವೇಶ್ವರಯ್ಯನವರು ನದಿ ತೀರಕ್ಕೆ ಬಂದು ನೆಲದಿಂದ ಗುಡ್ಡಕ್ಕೆ. ಗುಡ್ಡದಿಂದ ಬಂಡೆಗೆ. ಬಂಡೆಯಿಂದ ಮತ್ತೊಂದು ಬಂಡೆಗೆ ಉತ್ಸಾಹದ ಚಿಲುಮೆಯಂತೆ ಜಿಗಿಯುತ್ತ ಏರಿದರು. ಡೋಲಿ ಹೊರುವವರು ಸಹಾಯಕ್ಕೆ ಬಂದಾಗ "ಅದರ ಅವಶ್ಯಕತೆ ನನಗಿಲ್ಲ. ಏಕೆಂದರೆ ನನ್ನ ದೇಹವಿನ್ನೂ ಭದ್ರಾವತಿಯ ಉಕ್ಕಿನಷ್ಟೇ ಬಲವಾಗಿದೆ." ಎಂದು ಹೇಳಿ ಎಲ್ಲರನ್ನೂ ಹಿಂದೆ ಬಿಟ್ಟು ಸ್ಥಳವನ್ನೆಲ್ಲಾ ಪರಿಶೀಲಿಸಿದರು. ತರುಣ ಇಂಜಿನಿಯರುಗಳೆಲ್ಲಾ ಮೂಗಿನ ಮೇಲೆ ಬೆರಳಿಟ್ಟು ನಿಂತಿರುವಂತೆಯೇ ಕೆಲಸ ಮುಗಿಸಿ ಹಿಂದಿರುಗಿದರು.

–ಎಸ್. ಎ ಜಂಗೀವಿ

# ಕೆಲ ನೆನಪುಗಳು

ಕೆ. ವಾಸುದೇವಾಚಾರ್ಯ

**ಸುಪ್ರಸಿದ್ಧ ವಾಗ್ಗೇಯಕಾರ ಶ್ರೀ. ಕೆ. ವಾಸುದೇವಾಚಾರ್ಯರು ಶ್ರೀ ಮುಮ್ಮಡಿ ಕೃಷ್ಣರಾಜರ ಅನುಗ್ರಹ ಪಾತ್ರರು. ಸಂಗೀತದ ಅಧ್ಯಯನಕ್ಕೆ ಅವರಿಂದಲೇ ಪುರಸ್ಕಾರ ಪಡೆದವರು. ಶ್ರೀ. ವಾಸುದೇವಾಚಾರ್ಯರು ಅರಮನೆಯಲ್ಲಿಯ ಅನೇಕ ಸರಸ ಮನೋರಂಜಕ ಪ್ರಸಂಗಗಳನ್ನು ಪ್ರಕಟಿಸಿದ್ದಾರೆ. ಅರಮನೆಯ ಜೀವನದ ಮೇಲೆ ಬೆಳಕು ಚೆಲ್ಲುವ ಈ ನೆನಹುಗಳು ಸದಭಿರುಚಿ ಪೂರ್ಣವಾಗಿ ಮನೋರಂಜಕವಾಗಿವೆ.**

ಶೃಂಗೇರಿ ಮಠದ ಜಗದ್ಗುರು ನರಸಿಂಹ ಭಾರತಿಗಳು ಒಮ್ಮೆ ಮೈಸೂರಿಗೆ ಬಂದು ಪಶ್ಚಿಮ ವಾಹಿನಿಯಲ್ಲಿ ಬಿಡಾರ ಮಾಡಿದ್ದರು. ಮುಮ್ಮಡಿ ಕೃಷ್ಣರಾಜ ಒಡೆಯರು ಸ್ವಾಮಿಗಳ ಸನ್ನಿಧಿಗೆ ದರ್ಶನಾಕಾಂಕ್ಷಿಗಳಾಗಿ ಬಂದರು. ಸ್ವಾಮಿಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಕೈಜೋಡಿಸಿ ನಿಂತಾಗ 'ಅಯ್ಯ! ನೀನು ನಮಗೊಂದು ವಾಗ್ದಾನ ಮಾಡಬೇಕು' ಎಂದರು ಸ್ವಾಮಿಗಳು. 'ಅಪ್ಪಣೆಯಾಗಬೇಕು' ಎಂದರು ದೊರೆಗಳು. 'ಕುಣಿಗಲ್ ರಾಮ ಶಾಸ್ತ್ರಿಗಳ ದ್ವಿತೀಯ ಪುತ್ರ ಶಿವಸ್ವಾಮಿಯನ್ನು ನಮ್ಮ ಸಂಸ್ಥಾನಕ್ಕೆ ದತ್ತು ಕೊಡಿಸಬೇಕು' ಎಂದರಂತೆ ನರಸಿಂಹ ಭಾರತಿಗಳು. ನಡೆಸಿಕೊಡುತ್ತೇನೆಂದು ದೊರೆಗಳು ಕಾವೇರಿ ಜಲದಿಂದ ಸಂಕಲ್ಪ ಮಾಡಿ ಮಾತು ಕೊಟ್ಟು ಮೈಸೂರಿಗೆ ಹಿಂದಿರುಗಿದರು.

'ಅಯ್ಯಾ! ಕುಣಿಗಲ್ ರಾಮಶಾಸ್ತ್ರಿಗಳನ್ನು ನೋಡಿ ತುಂಬ ದಿವಸಗಳಾದವು. ಮಹಾತರ್ಕ ವಿದ್ವಾಂಸರು ಅವರು. ಅವರನ್ನು ಅರಮನೆಗೆ ಕರೆದು ತನ್ನಿ' ಎಂದು ಹತ್ತಿರವಿದ್ದವರಿಗೆ ಅಪ್ಪಣೆ ಮಾಡಿದರು. ಶಾಸ್ತ್ರಿಗಳಿಗೆ ಹತ್ತು ಹನ್ನೆರಡು ಸಾವಿರ ರೂಪಾಯಿ ಸಾಲವಿದ್ದ ಸಂಗತಿ ಪ್ರಭುಗಳಿಗೆ ತಿಳಿದಿತ್ತು. ಅವರು ಅರಮನೆಗೆ ದಯಮಾಡಿಸಿದೊಡನೆ ಲೋಕಾಭಿರಾಮವಾಗಿ ಮಾತನಾಡುತ್ತ ಪ್ರಸ್ತಾಪತ್ವೇನ ಅವರ ಸಾಲದ ವಿಷಯವನ್ನು ಪ್ರಭುಗಳೇ ಎತ್ತಿದರು. 'ತಾವೇನೂ ಯೋಚಿಸಬೇಕಾದ್ದಿಲ್ಲ. ಶಾಸ್ತ್ರಿಗಳೇ! ದೇವರು ನಿಮ್ಮ ಸಂಕಟಗಳನ್ನೆಲ್ಲ ಬಗೆಹರಿಸುತ್ತಾನೆ.' ಎಂದು ಅಭಯವಿತ್ತರು. ಶಾಸ್ತ್ರಿಗಳ ಸಾಲವನ್ನೆಲ್ಲ ಅರಮನೆಯಿಂದ ತೀರಿಸಲಾಯಿತು.

ಇದಾದ ಸ್ವಲ್ಪ ದಿನಗಳ ಬಳಿಕ ಸಂಸ್ಥಾನದ ಅಶೇಷ ವೈದಿಕ ಮಹಾಶಯರನ್ನೂ ಆಹ್ವಾನಿಸಿ ಅಂಬಾ ವಿಲಾಸದಲ್ಲಿ ಒಂದು ವಿದ್ವಜ್ಜನ ಸಭೆಯನ್ನು ದೊರೆಗಳು ಏರ್ಪಡಿಸಿದರು. ರಾಮಶಾಸ್ತ್ರಿಗಳಿಗೂ ಶಿವಸ್ವಾಮಿಗೂ ವಿಶೇಷ ಆಹ್ವಾನವನ್ನು ಕಳುಹಿಸಿದ್ದರು. ಇಬ್ಬರೂ ಸಭೆಗೆ ದಯಮಾಡಿಸಿದ್ದರು. ಕೃಷ್ಣರಾಜ ಒಡೆಯರು ಕುಮಾರ ಶಿವಸ್ವಾಮಿಯವರನ್ನು ಹತ್ತಿರ ಕರೆದು 'ಏನಾದರೊಂದನ್ನು ಅಪ್ಪಣೆ ಕೊಡಿಸಬೇಕು' ಎಂದರಂತೆ. 'ದಿಶಸ್ತು ಕಕುಭಃ ಕಾಷ್ಠಾ...' ಎಂದು ಅಮರದ ಒಂದು ಶ್ಲೋಕವನ್ನು ಶಿವಸ್ವಾಮಿ ಪ್ರಾರಂಭ ಮಾಡಿದರಂತೆ. 'ಸಾಕು ಸಾಕು. ದಿಗ್ವಿಜಯ ಮಾಡುವುದಕ್ಕಾಗಿಯೇ

ತಾವು ಅವತಾರ ಮಾಡಿರುವುದು. ಮುಂದೆ ಶೃಂಗೇರಿ ಜಗದ್ಗುರುಗಳಾಗತಕ್ಕವರು ತಾವು ಎಂದು ಹೇಳಿ ತುಂಬಿದ ಸಭೆಯಲ್ಲಿ ನಡುಕಟ್ಟಿ ಶಿವಸ್ವಾಮಿಗೆ ಸಾಷ್ಟಾಂಗವೆರಗಿದರಂತೆ ಮುಮ್ಮಡಿ ಕೃಷ್ಣರಾಜ ಒಡೆಯರು. ಕುಣಿಗಲ್ ರಾಮಶಾಸ್ತ್ರಿಗಳಿಗೆ ಏನೊಂದೂ ಅರ್ಥವಾಗ ಲಿಲ್ಲ. ಆಗ ಪ್ರಭುಗಳು ಶಾಸ್ತ್ರಿಗಳನ್ನು ಕುರಿತು 'ಕ್ಷಮಿಸಬೇಕು. ತಮ್ಮ ಅನುಮತಿಯಿಲ್ಲದೆಯೇ ನಾನು ತಮ್ಮ ಕುಮಾರರನ್ನು ಶ್ರೀಗಳವರ ಆಜ್ಞಾನುಸಾರ ಮಠಕ್ಕೆ ಧಾರೆಯೆರೆದು ಕೊಟ್ಟಿದ್ದೇನೆ. ಲೋಕ ಕಲ್ಯಾಣಕ್ಕಾಗಿ ಮಾಡಿದ ಈ ಕೆಲಸವನ್ನು ತಾವು ದೊಡ್ಡ ಮನಸ್ಸು ಮಾಡಿ ನೆರವೇರಿಸಿಕೊಡಬೇಕು' ಎಂದು ಪ್ರಾರ್ಥಿಸಿಕೊಂಡರಂತೆ. ಶಾಸ್ತ್ರಿಗಳು ಮಾಡುವು ದಾದರೂ ಏನನ್ನು? ಜಗದ್ಗುರುಗಳಿಗೆ ವಾಗ್ದಾನ ಮಾಡಿಯಾಗಿದೆ. ತುಂಬಿದ ಸಭೆ ಯಲ್ಲಿ ಕುಮಾರನನ್ನು ಮುಂದಿನ ಜಗದ್ಗುರು ಗಳು ಎಂದು ಸಾರಿ ದೊರೆಗಳೇ ಸಾಷ್ಟಾಂಗ ಮಾಡಿದ್ದಾರೆ! 'ದೇವರ ಚಿತ್ತ' ಎಂದರು ರಾಮಶಾಸ್ತ್ರಿಗಳು. ಕುಮಾರ ಶಿವಸ್ವಾಮಿ ಮುಂದೆ ಜಗದ್ಗುರು ಅಭಿನವ ನರಸಿಂಹಭಾರತಿ ಗಳಾದರು!

*

ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಒಂದು ಬಾರಿ ಗ್ರಹಗತಿಗಳು ಬಹಳ ಕ್ರೂರವಾಗಿದ್ದುದ ರಿಂದ ಸುವರ್ಣ ಗೋದಾನ ಮಾಡಬೇಕೆಂದು ಗೊತ್ತಾಯಿತು. ಆದರೆ ದಾನವನ್ನು ಸ್ವೀಕರಿಸಿ ಪಾಪ ನಿವೃತ್ತಿ ಮಾಡಿಕೊಳ್ಳುವ ಧೈರ್ಯ ಯಾರಿಗೂ ಬರಲಿಲ್ಲ. ದಾನವನ್ನು ತೆಗೆದು ಕೊಳ್ಳಲು ಯಾರೂ ಮುಂದೆ ಬರಲಿಲ್ಲ. ದಾನ ವನ್ನು ಯಾರಿಗೆ ಕೊಡಬೇಕು ಎಂದು ದೊರೆಗಳು ಯೋಚಿಸುತ್ತಿರುವಾಗ 'ಮಹಾಸ್ವಾಮಿ! ಎಡ ತೊರೆಯಲ್ಲಿ ಒಬ್ಬ ಸೋಮಯಾಜಿಗಳಿದ್ದಾರೆ. ಮಹಾ ತೇಜಸ್ವಿಗಳು, ಆಹ್ನಿಕಪರರು, ಸೂರ್ಯಾ ರಾಧಕರು. ಈ ದಾನವನ್ನು ತೆಗೆದುಕೊಳ್ಳು ವುದಕ್ಕೆ ಅವರನ್ನು ಬಿಟ್ಟರೆ ಬೇರೆ ಯಾರೂ ಯೋಗ್ಯರಲ್ಲ' ಎಂದು ಹತ್ತಿರವಿದ್ದವರು ಅರಿಕೆ ಮಾಡಿದರಂತೆ. ಸರಿ, ಸೋಮಯಾಜಿಗಳನ್ನು ಅರಮನೆಗೆ ಕರೆಸಿಕೊಂಡು 'ದಾನವನ್ನು ಪರಿಗ್ರ ಹಿಸಬೇಕು' ಎಂದು ದೊರೆಗಳು ಪ್ರಾರ್ಥಿಸಿ ಕೊಂಡರಂತೆ. 'ಆಗಬಹುದು' ಎಂದು ಸೋಮ ಯಾಜಿಗಳು ಎಡಗೈಯನ್ನು ಮುಂದು ಮಾಡಿದ ರಂತೆ. 'ಹಾ!ಹಾ! ಏನನ್ಯಾಯ! ದೊರೆಗಳು ನೀಡುವ ದಾನವನ್ನು ತೆಗೆದುಕೊಳ್ಳಲು ವಾಮ ಹಸ್ತವನ್ನು ಒಡ್ಡೋಣವೆಂದರೇನು? ಏನು ಗರ್ವ ಈ ಬ್ರಾಹ್ಮಣನಿಗೆ? ಎಂದು ಮುಂತಾಗಿ ಪರಿವಾರದ ಜನ ಗುಂಜು ಗೇಜು ಮಾಡಿದರು. ಪ್ರಭುಗಳಿಗೂ ಕಣ್ಣು ಕೆಂಪಾಯಿತು! 'ಮಹಾ ಪ್ರಭು! ಬಲಗೈಯಲ್ಲಿ ದಾನಪ್ರತಿಗ್ರಹ ಮಾಡಿ ದರೆ ತಮಗೆ ಶ್ರೇಯಸ್ಸಲ್ಲ. ಆದ್ದರಿಂದ ಎಡ ಗೈಯನ್ನು ಹಿಡಿದಿದ್ದೇನೆ. ತಾವು ಅನ್ಯಥಾ ಭಾವಿಸಬಾರದು' ಎಂದರು ಸೋಮಯಾಜಿ ಗಳು. 'ಬಲಗೈಯಲ್ಲಿ ಸ್ವೀಕರಿಸಿದರೆ ಆಗುವ ನಷ್ಟವೇನೋ?' ಎಂದು ವ್ಯಂಗ್ಯ ಮಾತು ಗಳನ್ನಾಡಿ 'ಸೋಮಯಾಜಿಗಳು ಬಲಗೈಯಲ್ಲೇ ದಾನವನ್ನು ತೆಗೆದುಕೊಳ್ಳುವಂತೆ ಅಪ್ಪಣೆ ಯಾಗಬೇಕು ಪ್ರಭು' ಎಂದರು ಪರಿವಾರ ದವರು. 'ಸರಿ! ಸೂರ್ಯದೇವನ ಚಿತ್ತ' ಎಂದು ಸೋಮಯಾಜಿಗಳು ದಕ್ಷಿಣ ಹಸ್ತದಿಂದಲೇ ದಾನವನ್ನು ಪರಿಗ್ರಹಿಸಿದರು.

ಸೋಮಯಾಜಿಗಳು ಬಲಗೈಯಲ್ಲಿ ದಾನ ತೆಗೆದುಕೊಳ್ಳುವುದಿಲ್ಲ ಎಂದು ಹೇಳಿದುದೇಕೆ ಎಂಬ ಕುತೂಹಲ ಕೆರಳಿತು ದೊರೆಗಳಿಗೆ. ಸೋಮಯಾಜಿಗಳನ್ನೇ ಕೇಳಿದರಂತೆ ಪ್ರಭು ಗಳು. ಆಗ ಸೋಮಯಾಜಿಗಳು 'ಪ್ರಭು! ಆಗಬೇಕಾದುದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ. ಒಳ್ಳೆಯದು, ಬೆರಣಿಯ ಚೂರನ್ನು ತರಿಸಿಕೊಡೋಣವಾಗಲಿ. ಬಲಗೈಯನ್ನು ಏಕೆ ಹಿಡಿಯಲಿಲ್ಲ ಎಂಬುದಕ್ಕೆ ಕಾರಣವನ್ನು ತೋರಿ ಸುತ್ತೇನೆ' ಎಂದರು. ಬೆರಣಿಯ ಚೂರನ್ನು ತರಿಸಲಾಯಿತು. ಸೋಮಯಾಜಿಗಳು ತಮ್ಮ ಬಲಗೈಯ ಮೇಲೆ ಒಂದು ಚೂರು ಬೆರಣಿ ಯನ್ನು ಪುಡಿಮಾಡಿ ಉದುರಿಸಿಕೊಂಡರಂತೆ. 'ಭಗ್' ಎಂದು ಬೆಂಕಿ ಕಾಣಿಸಿಕೊಂಡಿತಂತೆ! ದೊರೆಗಳ ಸಮೀಪದಲ್ಲಿದ್ದವರೆಲ್ಲರೂ ಆಶ್ಚರ್ಯ ಚಕಿತರಾಗಿ ಮೂಕರಾದರು. ದೊರೆಗಳ ಮುಖ

ಬಾಡಿತು. ಜ್ಯೋತಿಷ್ಯದಲ್ಲಿ ಸ್ವಯಂ ಪಂಡಿತರಾದ ಪ್ರಭುಗಳಿಗೆ ಭವಿಷ್ಯದ ಚಿತ್ರ ಕಣ್ಣಿನ ಮುಂದೆ ಸುಳಿದು ಸರಿಯಿತು. 'ಈಶ್ವರ ಸಂಕಲ್ಪ' ಎಂದು ಸುಮ್ಮನಾದರು. 'ಕ್ಷಮಿಸಬೇಕು ಪ್ರಭು' ಎಂದರು ಸೋಮಯಾಜಿಗಳು. ಉಳಿದವರಿಗೆ ಏನೊಂದೂ ಅರ್ಥವಾಗಲಿಲ್ಲ- ಗ್ರಹಗತಿಗಳು ತಮ್ಮ ಆಟವನ್ನು ಮುಗಿಸಿಯೇ ಮುಗಿಸಿದವು! ರಾಜ್ಯ ಬ್ರಿಟಿಷ್ ಕಂಪನಿಯ ವಶವಾಯಿತು!

*

ಉತ್ತರ ದೇಶದಿಂದ ಜ್ಯೋತಿಷ್ಯರೊಬ್ಬರು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಮೈಸೂರಿಗೆ ಬಂದಿದ್ದರಂತೆ. ಅವರ ಹೆಸರು ಏನು ಎಂದು ಯಾರಿಗೂ ತಿಳಿಯದು. ಎಲ್ಲರೂ ಅವರನ್ನು 'ಮಹಾಪುರುಷರು' ಎಂದು ಕರೆಯುತ್ತಿದ್ದರು. ಜ್ಯೋತಿಷದಲ್ಲಿ ಅವರಿಗಿದ್ದ ಅಸಾಧಾರಣ ಪಾಂಡಿತ್ಯದ ವಿಷಯ ಕಿವಿಯಿಂದ ಕಿವಿಗೆ ಹರಡಿ ದೊರೆಗಳಿಗೂ ತಿಳಿಯಿತು. ಮುಮ್ಮಡಿ ಕೃಷ್ಣರಾಜ ಒಡೆಯರೇ ಸ್ವಯಂ ದೊಡ್ಡ ವಿದ್ವಾಂಸರು ಜ್ಯೋತಿಷದಲ್ಲಿ. ಮಹಾಪುರುಷರ ಜ್ಞಾನದ ಆಳವನ್ನು ತಿಳಿಯಬೇಕೆಂಬ ಅಪೇಕ್ಷೆಯಾಯಿತಂತೆ ಮಹಾರಾಜರಿಗೆ. ಕರಿಕಂಬಳಿಯೊಂದನ್ನು ಹೊದೆದುಕೊಂಡು ತಾವು ಮಹಾರಾಜರು ಎಂಬ ಸುಳಿವು ಸಹ ಕೊಡದಂತೆ ವೇಷ ಬದಲಾಯಿಸಿ ಕೊಂಡು ಆ ಜ್ಯೋತಿಷ್ಯರ ಬಳಿಗೆ ಹೋಗಿ 'ಸ್ವಲ್ಪ ಈ ಕೈ ನೋಡಿ ಬುದ್ಧಿ' ಎಂದು ತಮ್ಮ ಬಲಗೈಯನ್ನು ಮುಂದೆ ಮಾಡಿದರಂತೆ ಪ್ರಭುಗಳು. ಅರೆಕ್ಷಣ ಹಸ್ತರೇಖೆಗಳನ್ನು ನೋಡಿ 'ಇದು ಕಟ್ಟಿಗೆ ಮಾರಿ ಜೀವಿಸುವ ಕೈ' ಎಂದರು ಅವರು. 'ಓಹೋ! ಹಾಗೋ! ಸರಿ!' ಎಂದು ದೊರೆಗಳು ಅರಮನೆಗೆ ತೆರಳಿದರು. 'ನೋಡಿದಿರಾ! ಮಹಾಸ್ವಾಮಿ! ಎಲ್ಲ ಬರಿಯ ಬೂಟಾಟಿಕೆ!' ಎಂದರು ದೊರೆಗಳ ಪರಿವಾರದವರು. ಮಾರನೆಯ ದಿವ ದೊರೆಗಳು ತಮ್ಮ ಪೋಷಾಕನ್ನು ಧರಿಸಿಕೊಂಡು ಭದ್ರಾಸನದಲ್ಲಿ ಕುಳಿತು ಆ ಜ್ಯೋತಿಷ್ಯರಿಗೆ ಅರಮನೆಗೆ ಬರುವಂತೆ ಹೇಳಿಕಳುಹಿಸಿದರು. 'ಈ ಹಸ್ತವನ್ನು ಸ್ವಲ್ಪ ನೋಡೋಣವಾಗಲಿ' ಎಂದು ಪ್ರಭುಗಳು ಮತ್ತೆ ಅಂಗೈಯನ್ನು ಮುಂದೆ ಮಾಡಿದರು. ನೋಡುವುದೇ ತಡ 'ಈ ಹಸ್ತವನ್ನು ನಿನ್ನೆಯೇ ನೋಡಿ ಹೇಳಿದ್ದೇನಲ್ಲ! ಇದು ಕಟ್ಟಿಗೆ ಮಾರಿ ಜೀವಿಸುವ ಕೈ' ಎಂದರಂತೆ! ದೊರೆಗಳ ಪರಿವಾರದವರು ಅಟ್ಟಹಾಸದ ನಗುಮುಖದಿಂದ 'ಮಹಾಪುರುಷರೇ ಇವರು ಯಾರು ಎಂಬುದು ತಮಗೆ ತಿಳಿದಿದೆಯೋ!' ಎಂದು ಕೇಳಿದರು. 'ಇವರು ಯಾರು ಎಂದು ತಿಳಿಸಬೇಕೆ? ಹಾಗಾದರೆ ಸ್ವಲ್ಪ ಜೇನು ಮೇಣವನ್ನೂ ಒಂದು ಕೆಂಡವನ್ನೂ ತರಿಸಿಕೊಡಿ' ಎಂದರು ಅವರು. ಮರುಕ್ಷಣದಲ್ಲಿ ಎಲ್ಲವೂ ಸಿದ್ಧವಾಯಿತು. ಮೇಣವನ್ನು ಕೆಂಡದ ಮೇಲಿಟ್ಟು ಕಾಯಿಸಿ ಅದರಿಂದ ಎರಡು ಬಿಲ್ಲೆಗಳನ್ನು ಮಾಡಿ 'ಮಹಾರಾಜರು ಸ್ವಲ್ಪ ಬಾಯಿ ತೆರೆಯಬೇಕು' ಎಂದರು. ಮಹಾರಾಜರ ಎರಡು ದವಡೆಯೊಳಗೂ ಆ ಮೇಣದ ಬಿಲ್ಲೆಗಳನ್ನು ಒತ್ತಿ ಹೊರಗೆ ತೆಗೆದರು. ಒಂದೊಂದರ ಮೇಲೂ ಒಂದೊಂದು ವಿಷ್ಣು-ಚಕ್ರದ ಗುರುತಿದ್ದಿತು. 'ಇಲ್ಲಿ ಪರಾಂಬರಿಸಬೇಕು, ಪ್ರಭುಗಳು. ತಮ್ಮನ್ನು ಸಿಂಹಾಸನಾಧೀಶ್ವರರನ್ನಾಗಿ ಮಾಡಿರುವುದು ಈ ವಿಷ್ಣುಚಕ್ರಗಳು! ಹಸ್ತರೇಖೆಯಲ್ಲ' ಎಂದರು. ಎಲ್ಲರೂ ಬೆರಗಾದರು. 'ಮಹಾಪುರುಷರ ದರ್ಶನಲಾಭದಿಂದ ಪುನೀತನಾದೆ' ಎಂದು ಪ್ರಣಾಮಮಾಡಿದರು ಕೃಷ್ಣರಾಜ ಒಡೆಯರು.

*

ವೀಣೆ ಸಾಂಬಯ್ಯನವರು ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದ ಹಿರಿಯ ವಿದ್ವಾಂಸರು. ದೊರೆಗಳು ಬಿಚ್ಚಿದ್ದಂತೆಯೇ ಸಾಂಬಯ್ಯನವರೂ ಗಿರಲು ವೀಣೆಯನ್ನು ಬೆಳೆಸಿದ್ದರು. ಅಭ್ಯಾಸ ಬಲದ ಮೇಲೆ ದೊರೆಗಳ ಸನ್ನಿಧಿಯಲ್ಲಿದ್ದಾಗಲೂ ಸಾಂಬಯ್ಯನವರು ವೀಣೆಯನ್ನು ಹುರಿಮಾಡಿಕೊಳ್ಳುತ್ತಿದ್ದರಂತೆ. 'ನನ್ನೆದುರಿನಲ್ಲೇ ಸಾಂಬಯ್ಯ ವೀಣೆಯನ್ನು ತಿರುವುತ್ತಾರಲ್ಲ ಏನು ಮಾಡುವುದು?' ಎಂದು ಕೃಷ್ಣರಾಜ ಒಡೆಯರು ಪೇಚಾಡುತ್ತಿದ್ದರಂತೆ. 'ಹೇಗಾದರೂ ಮಾಡಿ ಸಾಂಬಯ್ಯನವರು ಒಂದು ಯಾಗವನ್ನು ಮಾಡುವಂತೆ

ಮಾಡಿದರೆ ಯಾಗದೀಕ್ಷೆಯನ್ನು ಕೊಡುವ ಸಂದರ್ಭದಲ್ಲಿ ಅವರ ಗಡ್ಡ ಮೀಸೆಗಳನ್ನು ತೆಗೆದೇ ತೆಗೆಯುತ್ತಾರೆ. ತಮ್ಮ ಮುಂದೆ ಅವರು ಮೀಸೆ ಹುರಿ ಮಾಡುವುದು ತಾನಾಗಿಯೇ ತಪ್ಪುತ್ತದೆ' ಎಂದು ಹತ್ತಿರವಿದ್ದವರು ಪ್ರಭುಗಳಿಗೆ ಸೂಚಿಸಿದರಂತೆ. 'ಸೊಗಸಾದ ಉಪಾಯ' ಎಂದರು ಪ್ರಭುಗಳು 'ಆದರೆ ಸಾಂಬಯ್ಯನವರನ್ನು ಈ ವಿಷಯದಲ್ಲಿ ಒಪ್ಪಿಸುವುದು ಹೇಗೆ?' ಎಂಬುದು ಮುಂದಿನ ತೊಡಕಾಯಿತು. ಅದಕ್ಕೂ ಉಪಾಯವನ್ನೂ ಹೇಳಿಕೊಟ್ಟರು, ದೊರೆಗಳ ಆಪ್ತರು. 'ಸಾಂಬಯ್ಯನವರಿಗೆ ಸ್ವಲ್ಪ ಸಾಲಸೋಲವಿದೆ. ಅದನ್ನು ತೀರಿಸಿ ಸಾಂಬಯ್ಯನವರನ್ನು ಸ್ವಲ್ಪ ಹೊಗಳಿಬಿಟ್ಟರೆ ಯಾವ ಕೆಲಸವನ್ನು ಬೇಕಾದರೂ ಅವರಿಂದ ಸುಲಭವಾಗಿ ಮಾಡಿಸಿಬಿಡಬಹುದು' ಎಂದು ದೊರೆಗಳಿಗೆ ಸಲಹೆ ಮಾಡಿದರು.

ಮಾರನೆಯ ದಿನ ಸಾಂಬಯ್ಯನವರೊಡನೆ ಮಾತುಕತೆಯಾಡುತ್ತಿರುವ ಸಮಯದಲ್ಲಿ ದೊರೆಗಳು 'ಏನು ಸಾಂಬಯ್ಯನವರೇ ನಿಮಗೆ ಸ್ವಲ್ಪ ಸಾಲವಿದೆ ಅಂತ ಕೇಳಿದೆ ನಿಜವೇ' ಎಂದರು. 'ಹೌದು ಪ್ರಭು! ಅಲ್ಲಿ ಇಲ್ಲಿ ಸ್ವಲ್ಪ ಸಾಲ ಮಾಡಿದ್ದೀನಿ. ಏನೋ ಸಂಸಾರ ತಾಪತ್ರಯ' ಎಂದರು ಸಾಂಬಯ್ಯ, 'ಛೇ! ಎಲ್ಲಾದರೂ ಉಂಟೆ? ತಮ್ಮಂತಹ ಘನ ವಿದ್ವಾಂಸರಿಗೆ, ಸಾತ್ವಿಕ ಶಿರೋಮಣಿಗಳಿಗೆ ಸಾಲವೆಂದರೇನು? ಅದರಲ್ಲೂ ನಮ್ಮ ಆಸ್ಥಾನದಲ್ಲಿದ್ದುಕೊಂಡು?' ಎಂದು ಪ್ರಭುಗಳು ಸಾಂಬಯ್ಯನವರಲ್ಲಿ ಬಹಳ ಅನುತಾಪ ತೋರಿದರು. ಹಿಗ್ಗಿ ಹಿರೇಕಾಯಾದರು ಸಾಂಬಯ್ಯ. ಸಾಂಬಯ್ಯನವರಿಂದ ಸಾಲದ ವಿವರಗಳನ್ನು ತಿಳಿದು ದೊರೆಗಳು ಸಾಂಬಯ್ಯನವರ ಸಾಲವನ್ನೆಲ್ಲ ಅರಮನೆಯಿಂದ ತೀರಿಸುವಂತೆ ಸಂಬಂಧಪಟ್ಟ ಅಧಿಕಾರಿಗಳಿಗೆ ಅಪ್ಪಣೆ ಮಾಡಿದರು. ಇದರ ಗುಟ್ಟನ್ನು ತಿಳಿಯದ ಸಾಂಬಯ್ಯ ಧರ್ಮಪ್ರಭುವಿನ ಉದಾರ ಹೃದಯವನ್ನು ಮನಸಾರೆ ಕೊಂಡಾಡಿದರು.

ಇದಾದ ನಾಲ್ಕಾರು ದಿನಗಳ ಮೇಲೆ ಪ್ರಭುಗಳು ಸಾಂಬಯ್ಯನವರನ್ನು ಬರಮಾಡಿಕೊಂಡು ಯಾಗದ ವಿಷಯವನ್ನು ಪ್ರಸ್ತಾಪಿಸಿದರು. 'ತಾವು ಬಹಳ ಆಚಾರಪರರು, ನೇಮಿಷ್ಠರು, ತಮ್ಮಿಂದಲೇ ಈ ಯಾಗ ನಡೆಯಬೇಕೆಂದು ನಮ್ಮ ಅಭಿಲಾಷೆ. ಅದಕ್ಕೆ ಆಗುವ ವೆಚ್ಚವೆಲ್ಲವನ್ನೂ ನಾವು ವಹಿಸಿಕೊಳ್ಳುತ್ತೇವೆ. ಬೇಕಾದ ಏರ್ಪಾಡುಗಳೆಲ್ಲವನ್ನೂ ಅರಮನೆಯಿಂದಲೇ ಮಾಡಿಸಿಕೊಡುತ್ತೇವೆ, ತಾವು ದೊಡ್ಡ ಮನಸ್ಸು ಮಾಡಿ ಈ ಮಹತ್ಕಾರ್ಯವನ್ನು ಆಗಮಾಡಿಸಬೇಕು' ಎಂದರು ದೊರೆಗಳು. 'ಇದಕ್ಕಿಂತ ಪುಣ್ಯ ಕೆಲಸವುಂಟೆ ಪ್ರಭು? ಅಗತ್ಯವಾಗಿ ಆಗಲಿ' ಎಂದರು ಸಾಂಬಯ್ಯನವರು. ಸರಿ, ಸಕಲ ಸಿದ್ಧತೆಗಳೂ ನಡೆದವು. ಯಾಗ ಪ್ರಾರಂಭವಾಗುವ ಸುದಿನವೂ ಪ್ರಾಪ್ತವಾಯಿತು. ಯಾಗಶಾಲೆಗೆ ಸಾಂಬಯ್ಯನವರನ್ನು ಗೌರವದಿಂದ ಕರೆದುತಂದರು. ದೀಕ್ಷೆ ತೆಗೆದುಕೊಳ್ಳುವ ಮೊದಲು ಆಯುಷ್ಕರ್ಮವಾಗಬೇಕೆಂದು ಋತ್ವಿಕರು ತಿಳಿಸಿದರು. ಆಗಲೇ ಮೀಸೆಯ ವಿಷಯದಲ್ಲಿ ಸಾಂಬಯ್ಯನವರಿಗೆ ಯೋಚನೆಗೆ ಮೊದಲಾಯಿತು. ತಲೆ ಗಡ್ಡಗಳನ್ನು ಬೋಳಿಸಿ ಕ್ಷೌರಿಕ ಮೀಸೆಗೆ ಸಾಬೂನನ್ನು ಹಚ್ಚಿದ. 'ಮೀಸೆಯನ್ನೂ ತೆಗೆಯಬೇಕೇ?' ಎಂದು ಸಾಂಬಯ್ಯ ಹಂಬಲಿಸಿದರು. 'ಅಲ್ಲವೇ ಮತ್ತೆ?' ಎಂದರು ಋತ್ವಿಕರು. ತಮ್ಮ ಪ್ರಾಣವನ್ನೇ ಬಲಿ ಕೊಟ್ಟಷ್ಟು ಸಂಕಟವಾಯಿತು ಸಾಂಬಯ್ಯನವರಿಗೆ. ಏಕಾದರೂ ಈ ಯಾಗ ಮಾಡಲು ಒಪ್ಪಿಕೊಂಡೆನೋ ಎಂದು ತಮ್ಮನ್ನು ತಾವೇ ಶಪಿಸಿಕೊಂಡರು. 'ಇದೆಲ್ಲ ಕೃಷ್ಣರಾಜ ಒಡೆಯರ ಸನ್ನಾಹವೇ ಇರಬೇಕೆಂದು' ಒಳಗೊಳಗೆ ಗೊಣಗಿಕೊಂಡರು. ಏನಾದರೇನು? ಮೀಸೆ ಮಾಯವಾಯಿತು. ಯಾಗ ಪೂರ್ಣವಾಯಿತು. ದೊರೆಗಳ ಇಚ್ಛೆ ಪೂರೈಸಿತು.

*

ಪಗಡೆ ಇಸ್ಪೀಟು ಚದುರಂಗ ಗಂಜೀಫ ಇವೇ ಆಗಿನ ಆಟಪಾಟಗಳು. ಬಕ್ಷಿ ಚಾಮಪ್ಪಾಜಿ, ಕಾಂತರಾಜೇ ಅರಸಿನವರು, ಷಹ ನಂಜಪ್ಪನವರು, ನಂಜುಂಡಶಾಸ್ತ್ರಿಗಳು, (ಪೋಕಿ)

ಶ್ರೀಕಂಠಯ್ಯ, ಗೋವಿಂದ ಶ್ರೀನಿವಾಸಾಚಾರ್ಯರ್, ಕರವಟ್ಟಿ ಶಿಂಗನ್ನಾಚಾರ್ಯರು, ಇವರೇ ಮೊದಲಾದವರು ಚದುರಂಗದ ಆಟದಲ್ಲಿ ನಿಸ್ಸೀಮರು. ಬಕ್ಷಿ ಚಾಮಪ್ಪಾಜಿಯವರ ಕುಮಾರಿ ಇವರೆಲ್ಲರನ್ನೂ ಮೀರಿಸಿದ್ದರು.

ಕ್ಲೋಸ್‌ಪೇಟೆ ಅಂದರೆ ಈಗಿನ ರಾಮನಗರದಲ್ಲಿ ಆಗ್ಗೆ ಒಂದು ಮಿಲಿಟರಿ ಕ್ಯಾಂಪಿದ್ದಿತು. ಕಾಬೂಲ್ ದೇಶದಿಂದ ಕುದುರೆಗಳನ್ನು ಮಾರುವವನೊಬ್ಬ ಕುದುರೆಗಳನ್ನು ವಿಕ್ರಯಮಾಡುವ ಸಲುವಾಗಿ ಕ್ಲೋಸ್‌ಪೇಟೆಗೆ ಬಂದ. ಆತನೂ ಚದುರಂಗದಲ್ಲಿ ಒಲುಗಟ್ಟಿಗ, ಕ್ಯಾಂಪಿನಲ್ಲಿದ್ದ ಸೈನಿಕರಲ್ಲೊಬ್ಬಾತ ಬಹಳ ಚೆನ್ನಾಗಿ ಚದುರಂಗವನ್ನಾಡುತ್ತಾನೆ ಎಂಬ ಸುದ್ದಿ ಕಾಬೂಲಿನ ಕುದುರೆಯ ವ್ಯಾಪಾರಗಾರನಿಗೆ ತಿಳಿಯಿತು. ಹೇಗೋ ಅವನೊಡನೆ ಆಟವಾಡಲು ಅವಕಾಶ ಕಲ್ಪಿಸಿಕೊಂಡ. ಇಬ್ಬರು ಆಟಗಾರರ ನಡುವೆ ಪಂದ್ಯಗಳು ನಡೆದವು, ಸೈನಿಕನ ಕೈಚಳಕವನ್ನು ಕಂಡು ಬೆರಗಾದ ವ್ಯಾಪಾರಗಾರ 'ಅದ್ಭುತ, ನಿನ್ನ ಆಟ' ಎಂದು ಕೊಂಡಾಡಿದ. 'ಅಯ್ಯೋ ಹುಚ್ಚ! ನನ್ನ ಆಟಕ್ಕೇ ನೀನು ಇಷ್ಟು ಮರುಳಾದೆಯಲ್ಲ! ನಿನಗೆ ನಿಜವಾಗಿಯೂ ಚದುರಂಗದಲ್ಲಿ ಆಸಕ್ತಿಯಿದ್ದು ಅದ್ಭುತವಾದ ಆಟವನ್ನು ನೋಡಬೇಕೆಂಬ ಆಸೆಯಿದ್ದರೆ ಮೈಸೂರಿಗೆ ಹೋಗಿ ಬಕ್ಷಿ ಚಾಮಪ್ಪಾಜಿಯವರ ಮಗಳ ಆಟವನ್ನು ನೋಡಬೇಕು. ಆದರೆ ಆಕೆಗೆ ಘೋಷಾ; ಆದ್ದರಿಂದ ಆಕೆಯೊಡನೆ ಆಟವಾಡುವುದು ಸಾಧ್ಯವಾಗಲಾರದು! ನೋಡು ಪ್ರಯತ್ನಮಾಡು, ಒಂದುವೇಳೆ ನಿನ್ನ ಪ್ರಯತ್ನವೇನಾದರೂ ಕೈಗೂಡಿದರೆ ನಿನ್ನ ಜನ್ಮದಲ್ಲೇ ನೀನು ನೋಡರಿಯದ ಚದುರಂಗವನ್ನು ನೋಡಿ ಆನಂದಿಸುವೆ.' ಎಂದ ಆ ಸೈನಿಕ.

ವ್ಯಾಪಾರಗಾರನಿಗೆ ಕುತೂಹಲ ಕೆರಳಿತು. ಹೇಗಾದರೂ ಮಾಡಿ ಅರಸುಮಗಳ ಆಟವನ್ನು ನೋಡಬೇಕೆಂಬ ಹೆಬ್ಬಯಕೆಯಾಯಿತು. ಮೈಸೂರಿಗೆ ಬಂದ. ಪ್ರತಿದಿನ ಬೆಳಿಗ್ಗೆ ಬಸಪ್ಪಾಜಿಯವರ ಬಂಗಲೆಯ ಮುಂದೆ ನಿಂತು ಬಸಪ್ಪಾಜಿಯವರು ಬಂಗಲೆಯಿಂದ ಹೊರಗಡೆ ಹೊರಡುವಾಗ ಅವರಿಗೆ ಕೈಮುಗಿದು ಹಿಂತಿರುಗುತ್ತಿದ್ದ. ಹೀಗೆ ನಾಲ್ಕಾರು ದಿನಗಳು ಕಳೆದ ಮೇಲೆ ಬಸಪ್ಪಾಜಿಯವರು ವ್ಯಾಪಾರಗಾರರನ್ನು 'ಅಯ್ಯಾ! ಯಾರು ನೀನು? ಏನಾಗಬೇಕು? ಹೀಗೇಕೆ ಪ್ರತಿದಿನ ಕೈಮುಗಿದ ಹೋಗುತ್ತಿದ್ದೀಯೆ?' ಎಂದು ಕೇಳಿದರು. ತನ್ನ ಹೆಬ್ಬಯಕೆಯನ್ನು ಆತ ಚಾಮಪ್ಪಾಜಿಯವರಲ್ಲಿ ವಿಜ್ಞಾಪಿಸಿಕೊಂಡ. 'ನಮ್ಮಗಳಲ್ಲಿ ಘೋಷಾ ಪದ್ಧತಿಯಿರುವುದರಿಂದ ಎಷ್ಟರ ಮಟ್ಟಿಗೆ ನಿನ್ನ ಕೋರಿಕೆಯನ್ನು ನಡೆಸುವುದಕ್ಕಾಗುತ್ತದೆಯೋ ಹೇಳಲಾರೆ. ಆದರೂ ನನ್ನ ಮಗಳಲ್ಲಿ ಈ ವಿಷಯವನ್ನು ಪ್ರಸ್ತಾಪ ಮಾಡುತ್ತೇನೆ. ನಾಳೆ ಬೆಳಿಗ್ಗೆ ಬಂದರೆ ಆಕೆಯ ಅಭಿಪ್ರಾಯವನ್ನು ತಿಳಿಸುತ್ತೇನೆ' ಎಂದು ಹೇಳಿ ಚಾಮಪ್ಪಾಜಿ ಆತನನ್ನು ಕಳುಹಿಸಿಕೊಟ್ಟರು. ಒಳಗೆ ಬಂದು ನಡೆದ ಸಂಗತಿಯೆಲ್ಲವನ್ನೂ ಮಗಳಿಗೆ ತಿಳಿಸಿದರು. 'ಅಗತ್ಯವಾಗಿ ಆಗಲಿ, ಅಪ್ಪಾಜಿ, ನಾಳೆಯ ಮಧ್ಯಾಹ್ನವೇ ಪಂದ್ಯವನ್ನು ಆಡಲು ನಾನು ಸಿದ್ಧ. ನಮ್ಮಿಬ್ಬರ ಮಧ್ಯೆ ಒಂದು ಪರದೆಯನ್ನು ಹಾಕಿಸಿ ಕೊಡಿ. ಪರದೆಯ ಮಧ್ಯೆ ಒಂದು ಸಣ್ಣ ಕಿಂಡಿಯಿರಲಿ. ಅದರ ಮೂಲಕ ನಾನು ಕಾಯಿಗಳನ್ನು ನೋಡಿಕೊಂಡು ಯಾವ ಕಾಯಿಯನ್ನು ನಡೆಸಬೇಕೆಂದು ತಿಳಿಸುತ್ತೇನೆ. ನನ್ನ ಪರವಾಗಿ ನೀವೇ ಕಾಯಿಗಳನ್ನು ನಡೆಸಿದರೆ ಆಯಿತು' ಎಂದಳು ಆಕೆ. ಮರುದಿನ ಬೆಳಿಗ್ಗೆ ವ್ಯಾಪಾರಗಾರ ಹಾಜರಾದ. 'ಮಧ್ಯಾಹ್ನ ಪಂದ್ಯವನ್ನಾಡಲು ನನ್ನ ಮಗಳು ಸಿದ್ಧ' ಎಂದರು ಚಾಮಪ್ಪಾಜಿ. ಆತನ ಸಂತೋಷಕ್ಕೆ ಪಾರವೇ ಇಲ್ಲ.

ಮಧ್ಯಾಹ್ನ ಗೊತ್ತಾದ ವೇಳೆಗೆ ಸರಿಯಾಗಿ ಹಾಜರಾದ. ಪಂದ್ಯಕ್ಕೆ ಎಲ್ಲ ಸಿದ್ಧತೆಗಳೂ ನಡೆದಿದ್ದವು. ಆತ ಅರಸುಕುಮಾರಿಗೆ ಕೈಮುಗಿದು ಆಟಕ್ಕೆ ಕುಳಿತ. ಆಟ ಮೊದಲಾಗುವ ಮೊದಲೇ 'ಯಾವ ಪ್ಯಾದೆಯಿಂದ ಅವರ ಅರಸನನ್ನು ಹಿಡಿಸಬೇಕು ಕೇಳಿ ಅವರನ್ನು' ಎಂದು ಅಪ್ಪಾಜಿಗೆ ಕೇಳಿದರು ಆಕೆ. ಅದನ್ನು ಕೇಳಿಯೇ ಅರ್ಧ ಜೀವ ಹಾರಿಹೋಯಿತು

ಮಹಾರಾಟಗಾರನಿಗೆ. ಯಾವುದೋ ಒಂದು ಪ್ಯಾದೆಯನ್ನು ತೋರಿಸಿದ. 'ಒಳ್ಳೆಯದು' ಎಂದರು ಅರಸು ಮಗಳೇ. ಕೇವಲ ನಾಲ್ಕೈದು ಕಾಯಿಗಳನ್ನು ನಡೆಸುವಷ್ಟರಲ್ಲೇ, ಆತ ತೋರಿಸಿದ್ದ ಪ್ಯಾದೆಯನ್ನು ಮುಂದೆಮಾಡಿ ಕೊಡು 'ಸಿಕ್ಕಿಬಿದ್ದ ನಿಮ್ಮ ರಾಜ' ಎಂದಳು ಆಕೆ. ಬೆರಗಾದ ಆ ಮಹಾರಾಟಗಾರ. 'ನನ್ನ ಜನ್ಮದಲ್ಲೇ ಇಂಥ ಸೋಲನ್ನು ನಾನು ಅನುಭವಿಸಿಲ್ಲ. ಎಂತಹ ಚಮತ್ಕಾರ' ಎಂದು ಹೇಳುತ್ತ ಆಕೆಗೆ ಕೈಮುಗಿದು ಮೇಲೆದ್ದ!

*

ಒಂದು ಪಟದ ಹಬ್ಬವೇ ಬರಲಿ, ಗಣೇಶನ ಹಬ್ಬವೇ ಬರಲಿ, ಕಾಮನ ಹಬ್ಬವೇ ಬರಲಿ, ಅದೇ ನೆಪ ಮಾಡಿಕೊಂಡು ನೂರಾರು ಜನಕ್ಕೆ ಸಮಾರಾಧನೆ ಸಂತರ್ಪಣೆಗಳು ದಾನ ಧರ್ಮಗಳು ನಡೆಯುತ್ತಿದ್ದವು. ಗಣಪತಿ ಹಬ್ಬ ಬಂದರೆ ಪ್ರತಿಯೊಬ್ಬ ಅರಸು ಮನೆಯಲ್ಲೂ ಕೊಠಡಿಯ ತುಂಬ ಗೌರಿ ಗಣೇಶಗಳು, ಗಣೇಶನ ಮಂಟಪಗಳು, ಮೊರದ ಬಾಗಿನಗಳು, ಕಾಯಿ ಬೆಲ್ಲ! ಮನೆಗೆ ಬಂದ ಬ್ರಾಹ್ಮಣರಿಗೆ ಮುತ್ತೈದೆಯರಿಗೆ ಗೌರಿ ಸೀರೆ ಕುಪ್ಪಸ ಗಣೇಶ ಮಂಟಪ ತೆಂಗಿನಕಾಯಿ ಬೆಲ್ಲ ಐದು ಹತ್ತು ರೂಪಾಯಿ ದಕ್ಷಿಣೆಯನ್ನು ಕೊಟ್ಟು ಕಳುಹಿಸುತ್ತಿದ್ದರು. ಪಟದ ಹಬ್ಬ ಬಂದರೂ ಹಾಗೆಯೇ. ತರಹಾವರಿ ಪಟಗಳು ದಾರದ ಉಂಡೆಗಳು ಪ್ರತಿಯೊಬ್ಬ ಅರಸುಗಳ ಮನೆಯಲ್ಲೂ ತುಂಬಿರುತ್ತಿದ್ದವು. ತಮಗೆ ಬೇಕಾದ ಬ್ರಾಹ್ಮಣರ ಮನೆಗಳಿಗೆ ಪಟ ದಾರದ ಉಂಡೆ ದಕ್ಷಿಣೆಯನ್ನು ಕೊಟ್ಟು ಕಳುಹಿಸುತ್ತಿದ್ದರು. ಕಾಲ ಎಷ್ಟು ಸಮೃದ್ಧಿಯಾಗಿತ್ತು, ಅರಸುಗಳ ಮನೆಯಲ್ಲಿ ಐಶ್ವರ್ಯ ಹೇಗೆ ತುಂಬಿ ತುಳುಕಾಡುತ್ತಿತ್ತು–ಎನ್ನುವುದಕ್ಕೆ ಒಂದು ಉದಾಹರಣೆ ಇದು. ಪಟದ ಹಬ್ಬದ ದಿನ ಬುಟ್ಟಿ ಬುಟ್ಟಿ ತಿಂಡಿ ತೀರ್ಥಗಳನ್ನು ಮಾಡಿಕೊಂಡು ಅರಸುಗಳು ಮಕ್ಕಳು ಮರಿ ಆಳು ಕಾಳುಗಳೊಂದಿಗೆ ಪಟ ಆಡಿಸಲು ಬಯಲಿಗೆ ಹೋಗುತ್ತಿದ್ದರು. ಪಟ ಆಡಿಸುವುದರಲ್ಲೂ ಒಂದು ಗುಂಪಿಗೂ ಇನ್ನೊಂದು ಗುಂಪಿಗೂ ಪೈಪೋಟಿ. ಗಾಜನ್ನು ನುಣ್ಣಗೆ ಪುಡಿಮಾಡಿ ಕೋಳಿ ಮೊಟ್ಟೆಯ ರಸದಲ್ಲಿ ಬೆರಸಿ ಪಟ ಆಡಿಸುವ ದಾರಕ್ಕೆ ಸವರಿ 'ಮಾಂಜಿ' ದಾರವನ್ನು ತಯಾರು ಮಾಡುತ್ತಿದ್ದರು. ಹತ್ತು ಹದಿನೈದು ಗಜ ಇಂತಹ ಮಾಂಜಿ ದಾರವನ್ನು ಪಟಕ್ಕೆ ಕಟ್ಟಿ ಮಾಂಜಿ ದಾರದಿಂದೀಚೆಗೆ ಸಪ್ಪೆ ದಾರವನ್ನು ಕಟ್ಟುತ್ತಿದ್ದರು. ಒಂದು ಪಟದ ಮಾಂಜಿ ದಾರವನ್ನು ಇನ್ನೊಂದು ಪಟದ ಸಪ್ಪೆ ದಾರದ ಮೇಲೆ ಬೀಳುವಂತೆ ಮಾಡಿ ಪಟಗಳನ್ನು ಕಡಿದು ಹಾಕಿ ಎದುರಾಳಿಗಳನ್ನು ಸೋಲಿಸುವುದೇ ಆಟದ ಗುರಿ. ಒಮ್ಮೆ ದೇವಪಾರ್ಥಿವರ ಮನೆಗೂ ಶಿವರಾಂಬಹಾದ್ದೂರರ ಮನೆಯವರಿಗೂ ಬಲವಾದ ಪೈಪೋಟಿ ನಡೆದಿತ್ತು. ದೇವಪಾರ್ಥಿವರ ಪಟಗಳೆಲ್ಲವನ್ನೂ ಕಡಿದು ಹಾಕಿದ್ದರು ಶಿವರಾಂಬಹದ್ದೂರರ ಮನೆಯವರು. ದೇವಪಾರ್ಥಿವರಿಗೆ ಆಕಾಶವೇ




"ನೀನೆಲ್ಲ ಈ ವಿಚಿತ್ರವಾದ ನಡಿಗೆ ಸ್ಟೈಲ್ ಕಲಿತೆ ಅಂಥ ನನಗರ್ಥವಾಗ್ತಾ ಇಲ್ಲ..."

ತಲೆಯ ಮೇಲೆ ಬಿದ್ದಂತಾಗಿತ್ತು. ಸಂಜೆ ಮನೆಗೆ ಬಂದ ಮೇಲೆ ತಮ್ಮ ಕಡೆ ಪಟಗಳನ್ನಾಡಿಸುತ್ತಿದ್ದ ಪುಟ್ಟಮಲ್ಲನನ್ನು ಕರೆದು ತಮ್ಮ ದುಃಖವನ್ನು ತೋಡಿಕೊಂಡರು.

"ಲೋ ಪುಟ್ಟಮಲ್ಲು !"

"ಬುದ್ಧಿ !"

"ಏನೋ ಹಿಂಗಾಗೋಯ್ತಲ್ಲೋ ಇವತ್ತು! ತಲೆ ಎತ್ತೋಕೆ ಇಲ್ದಂಗಾಯ್ತಲ್ಲೋ ಅವರ ಮುಂದೆ !"

"ಏನು ಯೋಚನೆ ಮಾಡಬೇಡಿ ಬುದ್ಧಿ. ನಾನು ಒಂದು ಉಪಾಯ ಯೋಚಿಸಿವ್ನಿ. ಅಂಗೆ ಮಾಡಿದರೆ..."

"ಏನೋ ಅದು ಉಪಾಯ ? ಹೇಳೋ ಬೇಗ. ಬೇಕಾದ್ದಾಗಲೀ ಅದರಿಂದ ಮಾಡೇ ಬಿಡೋಣ."

"ಬುದ್ಧಿ ! ಸಪ್ಪೆದಾರಾನ ಕುಯ್ಯೋದು ಯಾವುದು ಬುದ್ಧಿ ?"

"ಮಾಂಜಿ ದಾರ !"

"ಮಾಂಜಿ ದಾರಕ್ಕೆ ಏನು ಹಾಕಿರ್ತಾರೆ ಬುದ್ಧಿ ?

"ಗಾಜಿನ ಪುಡಿ !"

"ಗಾಜನ್ನ ಕುಯ್ಯೋದು ಯಾವುದು ಬುದ್ಧಿ ?"

"ವಜ್ರ !"

"ಹಾಂ ! ಒಂದು ಹಿಡಿ ವಜ್ರ ಅಪ್ಪಣೆಯಾಗಲಿ ಒಡೆಯ ! ನೋಡೋರಂತೆ ನಾಳೆ ಆಟಾನಾದ್ರೂನು ! ಒಂದು ಪಟ ಅವರ ಕಡೇದು ಉಳಿದ್ರೆ ನನ್ನ ಹೆಸರು ಪುಟ್ಟಮಲ್ಲ ಅಲ್ಲ ಬುದ್ಧಿ !"

ಪುಟ್ಟಮಲ್ಲನ ಕುಶಾಗ್ರಬುದ್ಧಿಯನ್ನು ಕಂಡು ದೇವಪಾರ್ಥಿವರು ತಲೆ ತೂಗಿದರು. ಒಳಗೆ ಹೋಗಿ ಅಂಗೈ ತುಂಬ ವಜ್ರ ತಂದು ಸುರಿದರು ಪುಟ್ಟ ಮಲ್ಲನಿಗೆ ! ಪುಟ್ಟಮಲ್ಲ ವಜ್ರಗಳನ್ನು ವಸ್ತ್ರದಲ್ಲಿ ಭದ್ರವಾಗಿ ಗಂಟು ಕಟ್ಟಿಕೊಂಡು ಬುದ್ಧಿಯವರ ಅಪ್ಪಣೆ ಪಡೆದು ಹೊರಟ, ನೇರವಾಗಿ ಶಿವರಾಂಬಹದ್ದೂರರ ಕಡೆ ಪಟ ಆಡಿಸಿದವನ ಬಳಿಗೆ ಬಂದ. 'ಲೋ ! ಇವತ್ತು ನಮ್ಮ ಬುದ್ಧಿಯವರಿಗೆ ಮನಸ್ಸು ಬಹಳ ಚಿಕ್ಕದಾಗೈತಿ. ಒಂದೂ ಪಟ ಉಳೀಗೊಡಿಸದೆ ಎಲ್ಲ ಪಟಗಳನ್ನೂ ಕಡಿದುಹಾಕಿ ಬಿಟ್ಟರಲ್ಲ ಅಂತ ! ಲೋ ಹಿಡಿ ಈ ಐದು ರೂಪಾಯ್ನಾ. ನಾಳೆ ದಿನ ನೀನು ಒಂದು ಉಪಕಾರ ಮಾಡಿಕೊಡಬೇಕು. ನಿಮ್ಮ ಪಟಗಳಿಗೆ ಮಾಂಜಿದಾರ ಕಟ್ಟಬೇಡ. ಬರಿ ಸಪ್ಪೆ ದಾರ ಮಾತ್ರ ಕಟ್ಟು ತಿಳೀತಾ ?' ಎಂದು ಪುಸಲಾಯಿಸಿದ. ಐದು ರೂಪಾಯಿ ಕೈಗೆ ಬಿದ್ದ ಮೇಲೆ ಹೂ ಅನ್ನದೆ ಅವನಿನ್ನೇನು ಮಾಡುತ್ತಾನೆ ? ಸರಿ ಮಾರನೆಯ ದಿನ ಸಂಜೆ ಶಿವರಾಂಬಹದ್ದೂರರ ಕಡೆಯ ಪಟಗಳೆಲ್ಲ ಧೂಳೀಪಟವಾದವು. ದೇವಪಾರ್ಥಿವರಿಗೆ ಸಂತೋಷದಿಂದ ಮೈಯುಬ್ಬಿತು ! 'ಭಲೇ ! ಪುಟ್ಟಮಲ್ಲ !' ಎಂದು ಮೀಸೆ ತಿರುವಿದರು. 'ಬುದ್ಧಿ ! ಇನಾಮು ?' ಎಂದ. ಸಂತೋಷದಿಂದ ಹತ್ತು ರೂಪಾಯಿ ಇನಾಮನ್ನು ಅರ್ಥಾತ್ ಗಡ್ಡಕ್ಕೆ ಬೇರೆ ಸೀಗೆಕಾಯಿಯನ್ನು ಬುದ್ಧಿಯವರು ಪುಟ್ಟಮಲ್ಲನಿಗೆ ದಯಪಾಲಿಸಿದರು. ✡

(ಕಾವ್ಯಾಲಯ ಪ್ರಕಟಿತ ಕೆ. ವಾಸುದೇವಾಚಾರ್ಯರ 'ನೆನಪುಗಳು' ಪುಸ್ತಕದಿಂದ ಪುನರ್ಮುದ್ರಿತ)



ಕುಟ್ಟಣದಲ್ಲಿ ಬತ್ತದ ಕಾಳುಗಳು ಒನಕೆಯ ಪೆಟ್ಟಿನಿಂದ ನೋಯುತ್ತವೆ. ಆದರೆ ಒಮ್ಮೆ ಈ ಕಠಿಣ ಪರೀಕ್ಷೆಯನ್ನು ಮುಗಿಸಿದರೆ ಅವುಗಳ ಬಿಳುಪು ಎಷ್ಟೊಂದು ಸೊಗಸಾಗಿರುತ್ತದೆ. ಇದೇ ರೀತಿ ಜಗತ್ತಿನ ಇತರರೊಡನೆ ನಮ್ಮ ಜೀವನ. ಒಂದು ಜೀವ ಮನುಷ್ಯನಾಗಿ ಬದುಕಲು ದುರದೃಷ್ಟವೆಂಬ ಉಳಿಯ ಪೆಟ್ಟಿನಲ್ಲಿ ನೋಯಲೇ ಬೇಕು.

—ಹೋಚಿಮಿನ್

ಗೋವಿಂದಮೂರ್ತಿ ದೇಸಾಯಿ

ಸರಕಾರ
ನಡೆಸುವ
ಧೀರರು

# ಇವರು... ಅಧಿಕಾರಿಗಳಲ್ಲ.... ಹೊಣೆಗಾರರು!

ನಮ್ಮವರದೇ ಆದ ರಾಜ್ಯವು ಬಂದ ಮೇಲೆ ಕೆಂಪು ಪಟ್ಟಿಯು (ವಿಲಂಬೀಕರಣ) ಪ್ರಭಾವವು ಎಷ್ಟು ಪ್ರಬಲವಾಗಿದೆಯೆಂದರೆ, ಹಗಲಿನಲ್ಲಿ ಕಣ್ಣು ಕಾಣದೇ ಮೂಲೆಯಿಂದ ಮೂಲೆಗೆ ಹಾಯುವ ಮೂಗನ್ನು ನೋಯಿಸಿಕೊಳ್ಳುವ ತೊಗಲು ಬಾವಲಿಯಂತೆ; ಸರಕಾರಿ ಕಾಗದ ಪತ್ರಗಳು ಕಾರಕೂನರ ಮೇಜಿನಿಂದ ವಿಭಾಗಾಧಿಕಾರಿಯ ಮೇಜು, ಅಲ್ಲಿಂದ ಉಪಕಾರ್ಯದರ್ಶಿ, ಉಪಕಾರ್ಯದರ್ಶಿಯಿಂದ ಕಾರ್ಯದರ್ಶಿ, ಕಾರ್ಯದರ್ಶಿಯಿಂದ ಪ್ರಧಾನ ಕಾರ್ಯದರ್ಶಿ, ಪ್ರಧಾನ ಕಾರ್ಯದರ್ಶಿಯಿಂದ ಸಂಬಂಧಿಸಿದ ಸಚಿವರು, ಸಚಿವರಿಂದ ಮುಖ್ಯಮಂತ್ರಿಗಳವರೆಗೆ ಹೋಗಿ ಅಜಿಗಿಜಿಯಾದರೂ ಜೋಲಾಡುವ ಸ್ಥಿತಿಯಲ್ಲಿಯೇ ಇರುವದನ್ನು ನೋಡಿದರೆ, ಅಧಿಕಾರಿಗಳು ಕೆಲಸಗಳ್ಳರಾಗುತ್ತ ಹೋಗುತ್ತಿರುವರೇನೋ ಎಂದೆನಿಸುತ್ತದೆ. ಈ ಕೆಲಸಗಳ್ಳತನ ಅಥವಾ ಹೊಣೆ ಜಾರಿಸುವ ಪ್ರವೃತ್ತಿಯನ್ನು ಕಳ್ಳ ಸಂತೆ ಅಥವಾ ಕಳ್ಳಸಾಗಣೆಯ ಕಕ್ಷೆಯಲ್ಲಿ ತಂದು ಹೊಣೆಗಳ್ಳ ಅಧಿಕಾರಿಗಳನ್ನು ಸರಕಾರವೇಕೆ ದಂಡಿಸಬಾರದು ? ವಿಲಂಬವನ್ನೂ ಸರ್ಕಾರವು ಕಾನೂನಿನ ಕಕ್ಷೆಯಲ್ಲಿ ತಂದರೆ ಕಚೇರಿಗಳಲ್ಲಿ ಪ್ರಾಯಶಃ ಎಲ್ಲರಿಗೂ ಗಲ್ಲಿನ ಶಿಕ್ಷೆಯನ್ನೇ ಕೊಡಬೇಕಾಗುವದೇನೋ !

ಈ ಹೊಣೆ ಜಾರಿಸುವ ಕ್ಯಾನ್ಸರ ವ್ಯಾಧಿಗೆ, ಪ್ರಪಂಚದ ಯಾವ ಸರ್ಕಾರವೂ ಸಿದ್ಧೌಷಧಿಯನ್ನು ಇನ್ನೂ ಕಂಡು ಹಿಡಿದಂತೆ ಕಾಣುವದಿಲ್ಲ. ಆದರೆ ಯಾವುದಕ್ಕೆ ಇಂಗ್ಲೀಷಿನಲ್ಲಿ 'Passing the buck' ಅರ್ಥಾತ್ ತಮ್ಮ ತಲೆಯ ಮೇಲಿನ ಹೊಣೆಯನ್ನು ಬೇರೆಯವರ ಮೇಲೆ ಜಾರಿಸುವ ಪ್ರವೃತ್ತಿಯೆನ್ನುತ್ತಾರೋ ಅದನ್ನು ಮಾತ್ರ ಅಮೇರಿಕೆಯ ಅಧ್ಯಕ್ಷರು ಪೂರ್ಣವಾಗಿ ನಿರ್ಮೂಲ ಮಾಡಿದ್ದಾರೆ. ಅಂತಲೇ ತಮ್ಮ ಮೇಜಿನ ಮೇಲೆ "The Buck Stops Here" ಎಂಬ ಮಾತಿನಂತಹ ಮಾತನ್ನು ಬರೆಸಿ ಹಾಕಿಸಿಕೊಂಡು ಹೊಣೆ ಜಾರಿಸುವ ಪ್ರವೃತ್ತಿಗೆ ಕೊಡಲಿಯ ಪೆಟ್ಟನ್ನು ಹಾಕಿದ್ದಾರೆ. ಕಾರಕೂನರಾಗಲಿ ಅಥವಾ ಕುಂಟಣಿಗರಂತಹ ಮಧ್ಯದ ಅಧಿಕಾರಿಗಳಾಗಲಿ ಎಷ್ಟೇ ಹೊಣೆಗಳ್ಳರಾದರೂ ಅಧ್ಯಕ್ಷರು ಮಾತ್ರ ತಾವು ಅದೆಂದೂ ಹೊಣೆಗಳ್ಳರಾಗುವದಿಲ್ಲವೆಂದು ಹೇಳುವ ಮಾತನ್ನು ಕೇಳಿದರೆ ಅವರನ್ನು ನಾವು ಹೊಣೆಗಳ್ಳ ಸಿಬ್ಬಂದಿಯವರ ಶತ್ರುಗಳೆಂದು ಕರೆಯ

ಬೇಕೋ ಅಥವಾ ಶ್ರೀಸಾಮಾನ್ಯರ ಕೈಮಾರಿಯೆಂದು ಕರೆಯಬೇಕೋ ತಿಳಿಯದು. ಕಾರಕೂನರ ಕತ್ತಿಯು ಅಲಗಿನ ಮೇಲೆ ಉರುಳುತ್ತಿರುವ ಪ್ರಜಾಪ್ರಭುತ್ವದ ಆಡಳಿತೆಯಲ್ಲಿ ಗಂಡರ ಗಂಡ, ಕಾರಕೂನರ ಗಂಡರೆನಿಸಿಕೊಳ್ಳುವ ಅಮೇರಿಕೆಯ ಅಧ್ಯಕ್ಷರಂತಹ ಒಬ್ಬ ಮಹಾನುಭಾವರಾದರೂ ಇರುವರಲ್ಲ ಎಂದು ಶ್ರೀಸಾಮಾನ್ಯರಿಗೆ ಅಷ್ಟೇ ಸಮಾಧಾನ.

ಅಧಿಕಾರಿಗಳು ಕೆಲಸಗಳ್ಳರಾದರೂ ತಾವು ಮಾತ್ರ ಕೆಲಸಗಳ್ಳರಾಗಲು ಸಿದ್ಧವಿರದ ಅಮೇರಿಕೆಯ ಅಧ್ಯಕ್ಷರಂತಹ ಒಬ್ಬ ಮಹಾನುಭಾವರು ನಮ್ಮ ದೇಶದಲ್ಲಿ ಹುಟ್ಟಿದರೆ ಶ್ರೀಸಾಮಾನ್ಯರಿಗೆ ಅದೆಷ್ಟು ಆನಂದವಾಗುವದೆಂದರೆ, ಅವರು ಮುಂಬರುವ ಚುನಾವಣೆಯಲ್ಲಿ ಯಾರ ಚಿತಾವಣಿಗೂ ಬಾಯಿ ಬಿಡದೇ ತಾವೇ ಸ್ವಯಂಪ್ರೇರಣೆಯಿಂದ ಮತಗಟ್ಟೆಗೆ ಹೋಗಿ ತಮ್ಮ ಮತವನ್ನು ಚಲಾಯಿಸಿ ಬರುತ್ತಾರೆ.

ಸರ್ಕಾರೀ ಫೈಲುಗಳ ಕಥೆಯೆಂದರೆ ಎಂದೆಂದಿಗೂ ಮುಗಿಯದ ಕಥೆ. ಭರತಪುರ ಸಂಸ್ಥಾನಿಕರಾಗಿದ್ದ ಹಿಜ ಹಾಯನೆಸ್ ಮಹಾರಾಜ ಕೃಷ್ಣಸಿಂಗರು ಫೈಲುಗಳನ್ನು ವಿಲೇವಾರ ಮಾಡುತ್ತಿದ್ದುದೇ ಒಂದು ಮೋಜು. ಮಹಾರಾಜರು ತಮ್ಮ ಕಾರ್ಯದರ್ಶಿ ಕನವರ ಭರತಸಿಂಗರನ್ನು ಕರೆದು ರವಿವಾರ ಮುಂಜಾನೆ ತಮ್ಮ ಅಂತಃಪುರದ ಸಭಾಗೃಹದಲ್ಲಿದ್ದ ವಿಶಾಲ ಮೇಜಿನ ಮೇಲೆ ಸರಕಾರದ ಎಲ್ಲ ಫೈಲುಗಳನ್ನು ತಂದಿರಿಸಲು ಹೇಳುತ್ತಿದ್ದರು. ಆ ಫಾಯಿಲುಗಳಲ್ಲಿ ಲಕ್ಷೋಪಲಕ್ಷ ರೂಪಾಯಿಗಳ ಸಾಲಗಳಿದ್ದ ದಿವಾಣಿ ಖಟ್ಲೆಗಳು, ಖೂನೀ ಮೊಕದ್ದಮೆಗಳು ಸಂಸ್ಥಾನದ ಉನ್ನತಾಧಿಕಾರಿಯ ನೇಮಣೂಕಿ ಅಥವಾ ಕತ್ತಿ ಹಾಕುವ ಆಜ್ಞೆಗಳನ್ನೊಳಗೊಂಡ ಕಡತಗಳು ಇರುತ್ತಿದ್ದುವು. ಮುಂಜಾನೆಯಿಂದ ರಾಶಿರಾಶಿಯಾಗಿ ಬಿದ್ದ ಫೈಲುಗಳು ಸಂಜೆಯವರೆಗೆ ಹಾಗೆಯೇ ಬೀಳುತ್ತಿದ್ದುವು.

ಸಂಜೆಯ ಮುಂದೆ ಮಹಾರಾಜ ಕೃಷ್ಣಸಿಂಗರು ಮಹಾರಾಣಿಯರು ಮತ್ತು ಅಂತಃಪುರದ ಹಲವಾರು ಸ್ವರೂಪರಾಣಿಯರೊಂದಿಗೆ ಸಭಾಗೃಹಕ್ಕೆ ಬರುತ್ತಿದ್ದರು. ಬಂದೊಡನೆ ಅವರಿಗೆ ಅಲ್ಲಿ ಮಾದಕ ಪೇಯಗಳನ್ನು ಕೊಡಲಾಗುತ್ತಿತ್ತು. ಮಾದಕ-ಪೇಯದೊಂದಿಗೆ ಮಹಾರಾಜರು ಗಂಟೆಗಟ್ಟಲೇ ಹೆಂಗಳೆಯರೊಂದಿಗೆ ಆಮೋದ ಮಾಡುತ್ತಿದ್ದರು. ರಾತ್ರಿಯ ಭೋಜನವಾದ ಮೇಲೆ ಮಹಾರಾಜರು ತಮ್ಮ ಪ್ರೀತಿಯ ರಾಣಿಯರನ್ನು ಕರೆದು, ರಾಶಿರಾಶಿಯಾಗಿ ಬಿದ್ದ ಫೈಲುಗಳನ್ನು ಎರಡು ಗುಂಪುಗಳನ್ನಾಗಿ ವಿಂಗಡಿಸಲು ಹೇಳುತ್ತಿದ್ದರು. ಆಗ ಮಹಾರಾಜರು ಒಂದು ಗುಂಪಿನ ಫೈಲುಗಳತ್ತ ಬೆರಳು ಮಾಡಿ "ಈ ಫೈಲುಗಳಿಗೆ ನನ್ನಾಜ್ಞೆಯಾಗಿದೆ" ಎಂದು ಹೇಳುತ್ತ ಇನ್ನೊಂದು ಗುಂಪಿನ ಫೈಲುಗಳತ್ತ ಬೆರಳು ತೋರಿಸಿ "ಇವುಗಳನ್ನು ನಾನು ನಿರಾಕರಿಸಿದ್ದೇನೆ" ಎಂದು, ಫೈಲುಗಳಲ್ಲಿ ಏನಿದೆ ಎಂಬುದನ್ನು ನೋಡದೇ, ವಿಲೇವಾರಿ ಮಾಡುತ್ತಿದ್ದರು. ಮಹಾರಾಜರಿಗೆ ಫೈಲುಗಳನ್ನು ನೋಡುವ ಮನಸ್ಸಾಗಲಿ ಅಥವಾ ಸಮಯವಾಗಲಿ ಇರುತ್ತಿರಲಿಲ್ಲ. ಕನವರ ಭರತಸಿಂಗನು ಮಹಾರಾಜರ ಮೌಖಿಕ ಆಜ್ಞೆಯ ಮೇರೆಗೆ ಆ ಫೈಲುಗಳ ಮೇಲೆ ಮಹಾರಾಜರು "ಪುರಸ್ಕರಿಸಿದ್ದಾರೆ" ಅಥವಾ "ನಿರಾಕರಿಸಿದ್ದಾರೆ" ಎಂಬ ಶರಾ ಬರೆದು ಸಂಬಂಧಿಸಿದ ಇಲಾಖೆಗಳಿಗೆ ಕಳಿಸಿಬಿಡುತ್ತಿದ್ದರು. ಇದರಿಂದ ನೂರಾರು ನಿರಪರಾಧಿಗಳು ದಂಡಿಸಲ್ಪಟ್ಟರೆ, ಕೊಲೆಪಾತಕಿಗಳು ಮುಕ್ತರಾಗಿ ಓಡುತ್ತಿದ್ದರು. ಸಾಲವನ್ನು ಮರಳಿ ಪಡೆಯಲು ದಾವೇ ಮಾಡಿದ ಸಾಹುಕಾರರು ಬರಿಗೈಯಿಂದ ಮನೆಗೆ ಹೋಗಬೇಕಾಗುತ್ತಿತ್ತು. ಹಲವಾರು ನಿರಪರಾಧಿ ಸರಕಾರೀ ಅಧಿಕಾರಿಗಳು ಮನೆಗೆ ಹೋಗಬೇಕಾಗುತ್ತಿತ್ತು! ಹೀಗಾಗಿ ಸಂಸ್ಥಾನದಲ್ಲಿ ಒಂದು ಕೋಲಾಹಲವೇ ಎದ್ದಿತು. ವ್ಹಾಯಿಸರಾಯರ ಕಿವಿಯವರೆಗೂ ಸಂಸ್ಥಾನಿಕರ ನ್ಯಾಯದಾನದ ಕಥೆ ಮುಟ್ಟಿತು ಆಗ ವ್ಹಾಯಿಸರಾಯರು ಫೈಲುಗಳನ್ನು ಸರಿಯಾಗಿ ಓದಿನೋಡಿ ಆಜ್ಞೆಯನ್ನೀಯಲು ಒಬ್ಬ ದಿವಾಣನನ್ನು ನಿಯಮಿಸಿದರು.

ಈ ರೀತಿಯು ಅನ್ಯಾಯವಾಗುತ್ತಿದ್ದ ಕಾಲವೇ ಬೇರೆಯಾದರೂ ಫೈಲುಗಳನ್ನು ಓದದೇ ಅಧಿಕಾರಿಗಳು ಈಗಲೂ ನಿರ್ಣಯವನ್ನು ತೆಗೆದುಕೊಳ್ಳುತ್ತಾರೆ ಎಂದರೆ ನಿಮಗೆ ಆಶ್ಚರ್ಯವಾಗಬಹುದು. ಗೋಪುರದ ಅಥವಾ ಅಡಕಲು ಗಡಿಗೆಯು ಮಾದರಿಯು ಈ ಪ್ರಜಾಪ್ರಭುತ್ವದ ಕಾರಕೂನಶಾಹೀ ಆಡಳಿತೆಯಲ್ಲಿ ಪ್ರತಿಯೊಬ್ಬ ಅಧಿಕಾರಿಯೂ ಇನ್ನೊಬ ಅಧಿಕಾರಿಯ ಮೇಲೆಯೇ ಅವಲಂಬಿಸಿರುವದರಿಂದ ಯಾರೂ ಪೂರ್ಣಫೈಲನ್ನು ಓದಿನೋಡುವ ಗೋಜಿಗೆ ಹೋಗುವದಿಲ್ಲ. ಕನಿಷ್ಠ ಕಾರಕೂನನು ಮೇಲಿನ ಸಾಹೇಬರು ತನಗಿಂತಲೂ ಹೆಚ್ಚು ಬುದ್ಧಿವಂತರಿರುವದರಿಂದ ತಾನು ಬರೆದದ್ದನ್ನು ಅವರು ಹೇಗೂ ಬದಲಾಯಿಸುವರೆಂದು ಭಾವಿಸಿ ತನಗೆ ತೋಚಿದ್ದನ್ನು ಗೀಚಿ ಮುಂದಿನ ಮೇಜಿಗೆ ಸಾಗುಹಾಗುತ್ತಾನೆ. ಮೇಜಿನಿಂದ ಮೇಜಿಗೆ ಅಲೆದಾಡಿ ಮೇಲಿನ ಸಾಹೇಬರ ಬಳಿ ಹೋದಾಗ ತಮ್ಮ ಕೆಳಗಿನ ಅಧಿಕಾರಿಗಳೆಲ್ಲಾ ನೋಡಿದ ಮೇಲೆ ತಾವೇಕೆ ಮತ್ತೆ ನೋಡಬೇಕೆಂದು ಸಮಯದ ಅಪವ್ಯಯ ಮಾಡದೇ ತಮ್ಮ ಸಹಿಯನ್ನು ಹಾಕಿಬಿಡುತ್ತಾರೆ. ಹೀಗಾಗಿ ಯಾರೂ ಫೈಲನ್ನು ಪೂರ್ಣ ಓದಿರುವದಿಲ್ಲ !

ಆಧುನಿಕ ಆಡಳಿತೆಯ ಬ್ರಹ್ಮಜ್ಞಾನಿ ಎನಿಸುವ ಪಾರ್ಕಿನ್‌ಸನ್‌ನು ಸರಕಾರದಲ್ಲಿ ಅಥವಾ ಅರೆಸರಕಾರಿ ಅಥವಾ ಖಾಸಗೀ ರಂಗಗಳಲ್ಲಿ ಫೈಲನ್ನು ಮೇಜಿನಿಂದ ಮೇಜಿಗೆ ಸರಿಸಿ ಅಧಿಕಾರಿಗಳು ಹೇಗೆ ಹೊಣೆಗಳ್ಳರಾಗುತ್ತ ಹೋಗುವರೆಂಬುದನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾನೆ. ಈ ವಿಲೇವಾರಿ ಪದ್ಧತಿಯಲ್ಲಿ ಅವನ ಅಭಿಪ್ರಾಯದಂತೆ ಮೂರು ವಿಧಗಳಿವೆಯಂತೆ. ೧) ಅಧೋ ಪಾತಳಿ ೨) ಸಮಾನ ಪಾತಳಿ ೩) ಊರ್ಧ್ವ ಪಾತಳಿ ಎಂಬ ಮೂರು ವಿಧಾನಗಳಂತೆ. ಹೊಣೆಗಳ್ಳ ಅಧಿಕಾರಿ ಈ ಮೂರೂ ವಿಧದಲ್ಲಿ ಫೈಲುಗಳನ್ನು ದೂರವಾಣಿಯ ಮೇಲೆಯೇ ಜಾರಿಸುವ ವಿಧಾನವನ್ನು ನೋಡಿರಿ.

೧) "ಓ !......ನೀವೇ....ಕನಿಷ್ಠಕುಮಾರರೇನು ?...ನಾನು...ಕೆಲಸಗಳ್ಳ. ಏನ್ರಪಾ... ಆ ಉಪದ್ರವ ಯೋಜನೆಯ ಫೈಲನ್ನು ನನ್ನ ಬಳಿ ಕಳಿಸುವದೆ ? ನೀವು ಅದನ್ನು ನೋಡಿ ನಿಮ್ಮ ಅಭಿಪ್ರಾಯವನ್ನು ಬರೆಯಬಾರ



ದೇನ್ರಪಾ? ನೋಡ್ರಿ...ಸಿ. ಎಮ್...ಮೊನ್ನೆ ನನ್ನ ಕರೆದು ಹೇಳ್ಯಾರ, ಸರಕಾರದ ಎಲ್ಲ ಅಧಿಕಾರಿಗಳೂ ಯೋಜನೆಯ ಬಗ್ಗೆ ಪೂರ್ಣ ಅರಿತಿರಬೇಕೆಂದು. ಅದನ್ನೀಗ ಬೋರಯ್ಯನ ಕಡೆಯಿಂದ ನಿಮ್ಮ ಕಡೆ ಕಳಿಸುತ್ತೇನೆ. ಅದನ್ನೋದಿ ನಿಮ್ಮ ಶರಾ ಬರೆಯಿರಿ."

೨) "ಹೋ...ಹೋ...ನೀವು...ವಿಲಂಬರಾಯರೇನು ?...ನಾನು...ಸ್ವಾಮಿ...ಹೊಣೆ ಹಾರಕ...ಆ ಉಪದ್ರವ ಯೋಜನೆಯ ಫೈಲು ನಿಮ್ಮ ಬಳಿಗೆ ಹೋಗುವದು ತಪ್ಪಿ ನನ್ನ ಕಡೆ ಬಂದಿದೆ. ಅದನ್ನು ಓದಿ ನೋಡಿದ ಮೇಲೆ ನಿಮಗೇ ಖಾತ್ರಿ ಆಗುವದಲ್ಲ ಅದು ನಮ್ಮ ಇಲಾಖೆಗೆ ಸಂಬಂಧಿಸಿದ ಫೈಲಲ್ಲವೆಂದು. ಅದರಲ್ಲಿ ಎತ್ತಿರುವ ಅಂಶಗಳು ಆರ್ಥಿಕ ಅಥವಾ ಕಾನೂನಿಗೆ ಸಂಬಂಧಿಸಿದವುಗಳೇ ವಿನಾ ಆಡಳಿತೆಗೆ ಸಂಬಂಧಿಸಿದವುಗಳಲ್ಲ. ಅದನ್ನು ನೀವಷ್ಟು ಓದಿ ಸಂಬಂಧಿಸಿದ ಖಾತೆಗೆ ಕಳಿಸಿಬಿಡಿರಿ."

೩) "...ನಮಸ್ಕಾರ...ಮಿಸ್ ತಲೆದಿಂಬ... ನಿಮ್ಮನ್ನು ಕಾಣದೇ ಎಷ್ಟೋ ದಿವಸಗಳಾದವು. ಎಲ್ಲಾ......ಕ್ಷೇಮ ತಾನೇ...ಅಂದಹಾಗೆ... ಮ್ಯಾಡಮ್...ಆ ಉಪದ್ರವ ಯೋಜನೆಯ ಫೈಲು ನನ್ನ ಕಡೆ ಬಂದಿದೆ. ಮೇಡಮ್ ಅಂತಹ ಮಹತ್ವದ ಫೈಲನ್ನು ತಾವು ನೋಡಿ ಮಾರ್ಗ ದರ್ಶನ ಮಾಡಬೇಕು. ವಿಷಯ ಬಹು ಮುಖ್ಯ ವಿರುವದರಿಂದ, ನಾಳೆ ರಾಜಕೀಯ ಪ್ರಶ್ನೆಗಳು ತಲೆಎತ್ತಬಹುದು. ಅದಕ್ಕೆ ತಾವೇ ಮುಖ್ಯ ಕಾರ್ಯದರ್ಶಿಯವರ ಜೊತೆ ಚರ್ಚಿಸಿ ಒಂದು ನಿರ್ಣಯಕ್ಕೆ ಬಂದರೆ ಒಳಿತು ಅದನ್ನು ನಾನೇ ತಂದು ನಿಮಗೆ ಕೊಡುವೆ ಮ್ಯಾಡಮ್..."

ವಿಧವಿಧದ ನೆವಗಳನ್ನೊಡ್ಡಿ ತಮ್ಮ ಬಳಿ ಬಂದ ಫೈಲುಗಳನ್ನು ಬೇರೊಬ್ಬರ ತಲೆಗೆ ಕಟ್ಟುವ ಹೊಣೆಜಾರರು ಮಾಡುವ ಕಾರ್ಯದ ವಿಧಾನವಿದು! ಈ ಅಡಕಲು ಗಡಿಗೆ ಮಾದರಿಯ ಆಡಳಿತೆಯಲ್ಲಿ ಕಾಗದಪತ್ರಗಳು ತೂಗು ತೊಟ್ಟಿಲದಂತೆ ಆಚೀಚೆ ಹೋಗಿಬಂದು ಅಲ್ಲಿಯೇ ನಿದ್ರೆಯನ್ನು ಮಾಡುತ್ತಿರುವಾಗ ಕಾಲವು ಜಾರಿದ್ದನ್ನು ಯಾರೂ ಗಣನೆಗೆ ತೆಗೆದು ಕೊಳ್ಳುವಂತೆ—ಕಾಣುವದಿಲ್ಲ. ಇಪ್ಪತ್ತು ಇಪ್ಪತ್ತೈದು ವರುಷಗಳ ಕಾಲ ನ್ಯಾಯಾಲಯದಲ್ಲಿ ದಾವೇ ನಡೆಯುವದು ಹೊಸಮಾತೇನು ಆಗದಿದ್ದರೂ ಸರಕಾರದಲ್ಲಿ ಕೂಡ ವರ್ಷಗಟ್ಲೇ ಪ್ರಕರಣಗಳು ಕೊಳೆಯುತ್ತ ಬಿದ್ದಿರುತ್ತವೆ.

ಕನಿಷ್ಠ ದರ್ಜೆಯ ಕಾರಕೂನನು ತನ್ನ ಬಳಿಗೆ ಮೊದಲು ಬರುವ ಕಾಗದಗಳನ್ನು ಓದಿ ತಾನೇ ನಿರಾಕರಿಸಿಬಿಡುತ್ತಾನೆ. ಕಾರಣ, ಅದನ್ನು ಪುರಸ್ಕರಿಸಿದರೆ ಮೊದಲಿನವರು ಏಕೆ ? ಹೇಗೆ ? ಎಂಬ ನೂರಾರು ಪ್ರಶ್ನೆಗಳನ್ನು ಕೇಳಬಹುದೆಂದು ಮೊದಲೇ ನಕಾರಾತ್ಮವಾಗಿ ಶರಾ ಹಾಕಿಬಿಡುತ್ತಾನೆ. ಈ ರೀತಿಯ ಹೊಣೆ ಜಾರಿಕೆಯ ಸಾಂಕ್ರಾಮಿಕ ರೋಗ ಸರಕಾರದ ಕನಿಷ್ಠ ದರ್ಜೆಯ ಕಾರಕೂನನಿಂದಲೇ ಹಬ್ಬುತ್ತದೆ. ಮೇಲೆ ಹೋದಂತೆ ಈ ರೋಗವು ಬಲಿಯುತ್ತ ಹೋಗುತ್ತದೆ.

ಈ ಹೊಣೆಜಾರತ್ವವು ಕಚೇರಿಯಲ್ಲೇಕೆ ಮನೆಯಲ್ಲಿಯೂ ಇರುತ್ತದೆ. ಬೆಳಿಗ್ಗೆ ಎದ್ದೊಡನೆ ಹೆಂಡತಿ ಗಂಡನಿಗೆ ನೀರೊಲೆಗೆ ಉರಿಹಾಕಲು ಹೇಳುವುದು, ತಮ್ಮನು ಅಕ್ಕನಿಗೆ ಶಾಲೆಯ ಪಾಠವನ್ನು ಬರೆದುಕೊಡಲು ಅಂಗಲಾಚುವದು, ಅಕ್ಕ ತಮ್ಮನಿಗೆ ತನ್ನ ಸಾಯಿಕಲ್ಲಿನ ಗಾಲಿಗೆ ಹವಾ ಹಾಕಿಕೊಡೆಂದು ಕೇಳುವದು ನಿತ್ಯವೂ ನಡೆಯುವ ಮಾತುಗಳು. ಈ ಹೊಣೆಗಾರಿಕೆ ವಿಕೇಂದ್ರಿಕೃತವಾಗಬೇಕು. ವಿಕೇಂದ್ರೀಕೃತವಾದರೆ ಪ್ರತಿಯೊಬ್ಬರೂ ತಮ್ಮ ಹೊಣೆಯನ್ನು ನಿರ್ವಹಿಸುವಂತಾಗಬೇಕು. ಈ ಹೊಣೆಜಾರತ್ವದ ರೋಗವನ್ನು ಮುಂದಿನ ಪೀಳಿಗೆಯಾವರಾದರೂ ನಿಲ್ಲಿಸಲು ಪ್ರಯತ್ನಿಸಿದರೆ, ದೇಶಕ್ಕೆ ಅವರು ಸಲ್ಲಿಸುವ ಒಂದು ದೊಡ್ಡ ಸೇವೆಯಾದೀತೆಂದು ನನ್ನ ಅಭಿಪ್ರಾಯ. ✡



# ಇರುವೆ

ಭಾವ: ಶ್ರೀ ದತ್ತಾ ಬಾಳ
ಶಬ್ದ: ಪ್ರೊ. ಡಿ. ಜಿ. ಉಪ್ಪಾರ

ಮೂವತ್ತು ಸಾವಿರ ವರುಷಗಳ ನಂತರದ ಮಾತು. ಆಗ...

ಮಾನವನು ಉತ್ಕ್ರಾಂತಿಯ ಪರಮೋಚ್ಚ ಸೀಮೆಯನ್ನು ಮುಟ್ಟಿದ್ದನು, ಮಾನವನಲ್ಲಿಯ ಬುದ್ಧಿಯು ಪೂರ್ಣ ಜಾಗೃತವಾಗಿ ಆತನ ವಿಜಯವಾಗಿತ್ತು. ಆತನು ತನ್ನ ಬುದ್ಧಿಯ ವೈಭವದಿಂದ ಜೀವನದಲ್ಲಿ ವಿವಿಧ ಪ್ರಕಾರದ ಸಮೃದ್ಧಿಯು ಮಳೆಗರೆಯುವದನ್ನೇ ನಡೆಸಿದ್ದನು. ನಭಾಂಗಣದಲ್ಲಿ ಮಿನುಗುವ ತಾರೆಗಳ ವೈಭವದ ಅಪೂರ್ವತೆ ಆತನ ಕಣ್ಣು ಕುಕ್ಕಿಸುತ್ತಿರಲಿಲ್ಲ. ಯಾಕೆಂದರೆ ಈಗಾಗಲೇ ಆತನ ಹೆಜ್ಜೆಗಳು ಎಷ್ಟೋ ತಾರೆಗಳ ಮೇಲೆ ಮೂಡಿದ್ದವು. ಇಷ್ಟೇ ಅಲ್ಲದೇ ಅನಂತ ಆಕಾಶವು ಆತನ ದೃಷ್ಟಿಯಲ್ಲಿ ಹೊರ ಅಂಗಳವಾಗಿ ಪರಿಣಮಿಸಿತ್ತು. ಎಷ್ಟೋ ಗ್ರಹಗಳ ಮೇಲೆ ಆತನ ಮುಕ್ತ ಸಂಚಾರವು ಸಹಜ ರೀತಿಯಿಂದ ನಡೆದಿತ್ತು;

ವೈಜ್ಞಾನಿಕ ಶೋಧದಲ್ಲಿ ಮಾನವನು ಅತ್ಯುಚ್ಚ ಪದವನ್ನು ಮುಟ್ಟಿದ್ದನು. ಶಸ್ತ್ರಕ್ರಿಯೆಯ ಪದ್ಧತಿಯು ಕಾಲಬಾಹ್ಯವಾಗಿ ಪರಿಣಮಿಸಿತ್ತು. ಲೋಹಚುಂಬಕದಲ್ಲಿ ವಿದ್ಯುತ್ ಪ್ರವಾಹವನ್ನು ಹಾಯಿಸಿದಾಗ ಅದರಿಂದ ಪ್ರಕ್ಷೇಪಿಸಲ್ಪಟ್ಟ ಕಿರಣಗಳಿಂದ ಮಾನವ ಶರೀರದ ಜೀವಕಣಗಳಿಗೆ ನವ ಜೀವನ ಪ್ರಾಪ್ತವಾಗುವದೆಂದು ಆತನಿಗೆ ತಿಳಿದಿತ್ತು. ಅದರಂತೆಯೇ ಶರೀರದ ಯಾವದೇ ಭಾಗದಲ್ಲಿ ನೋವಾದಾಗ ಇಂತಹ ಕಿರಣಗಳ ಅಸಮತೆಯನ್ನು ಆತನು ನಿವಾರಿಸುತ್ತಿದ್ದನು. ಆದ-ಕಾರಣ ಮನುಷ್ಯನು ಅಮರತ್ವದ ಸಾನ್ನಿಧ್ಯವನ್ನು ಮುಟ್ಟಿದಂತಿತ್ತು. ಶರೀರ ಸಂವ-ರ್ಧನೆಗಾಗಿ ಆತನು ಜೀವನ ಸತ್ವಗಳ ಗುಳಿಗೆಗಳನ್ನು ಬೇಕಾದಂತೆ ತಿಂದು ನಿದ್ರೆ ಬಂದರೆ ಇಲೆಕ್ಟ್ರೋಡ್ಸನ್ನು ಉಪಯೋಗಿಸುತ್ತಿದ್ದನು. ಆದಕಾರಣ ಆತನಿಗೆ ಸ್ವಪ್ನಗಳೂ ಸಹ ಬೀಳುತ್ತಿರಲಿಲ್ಲ.

ಉಳಿದ ವೇಳೆಯನ್ನು ಹೇಗೆ ಕಳೆಯಬೇಕೆಂಬ ಕಠಿಣ ಪ್ರಶ್ನೆಯು ಆತನನ್ನು ಕಾಡುತ್ತಿತ್ತು. ಮತ್ತು ಅದಕ್ಕೂ ಆತನು ಉಪಾಯವನ್ನು ಶೋಧಿಸಿದ್ದನು. ಪ್ರತಿಯೊಬ್ಬರ ಸಲುವಾಗಿ ಯಂತ್ರಪುರುಷನು ಹೊಸ ಹೊಸ ಸಮಸ್ಯೆಗಳನ್ನು ತಯಾರಿಸುತ್ತಿದ್ದನು. ಅವುಗಳನ್ನು ಬಿಡಿಸಲು ಮನುಷ್ಯರು ತೊಡಗುತ್ತಿದ್ದರು, ಅವರ ಜೀವನವು ಯಂತ್ರಮಯವಾಗಿತ್ತು. ಅವರಿಗೆ ಬೇಕಾದ ಎಲ್ಲ ರೀತಿಯ ನಿರ್ಣಯಗಳನ್ನೂ ಸಹ ಗಣಕಯಂತ್ರವು ತೆಗೆದುಕೊಳ್ಳುತ್ತಿತ್ತು. ತಂದೆ-ತಾಯಿಗಳಿಗೆ ಮಕ್ಕಳ ಸಂಗೋಪನೆಯ ತ್ರಾಸವೂ ಇರಲಿಲ್ಲ, ಮಕ್ಕಳು ಹುಟ್ಟಿದ ಕೂಡಲೇ ಶಾಸ್ತ್ರಜ್ಞರ ಸರಕಾರವು ಅವರನ್ನು

ವಶಪಡಿಸಿಕೊಳ್ಳುತ್ತಿತ್ತು. ಆ ಕಾಲಕ್ಕೆ ಶಾಸ್ತ್ರಜ್ಞರ ಸರಕಾರವಿತ್ತು. ಮಕ್ಕಳನ್ನು ಪ್ರಯೋಗಶಾಲೆಗಳಿಗೆ ಕಳಿಸುತ್ತಿದ್ದರು. ಮತ್ತು ಅವರನ್ನು ಅಲ್ಲಿಯೇ ಬೆಳೆಸುತ್ತಿದ್ದರು. ತಂದೆ, ತಾಯಿ ಮತ್ತು ಮಕ್ಕಳೆಂಬ ಸಂಬಂಧವೇ ನಷ್ಟವಾಗಿ ಹೋಗಿತ್ತು. ಇಷ್ಟೇ ಅಲ್ಲದೇ ಪತಿ-ಪತ್ನಿ, ಅಣ್ಣ ತಂಗಿ, ಅಕ್ಕ-ತಮ್ಮರೆಂಬ ಸಂಬಂಧವು ಇತಿಹಾಸದಲ್ಲಿ ಲೀನವಾಗಿ ಹೋಗಿತ್ತು. ಆದಕಾರಣ ಎಲ್ಲವೂ ಸಿಕ್ಕಿದ್ದರೂ ಸಹೃದಯತೆ ಎಂಬ ಮಾತಿಗೆ ಆತ ದೂರವಾಗಿದ್ದನು. ಅದಲ್ಲದೇ ಅದರ ಬಗ್ಗೆ ಯಾವುದೇ ತರದ ಚಿಂತೆಯೂ ಆತನಿಗೆ ಇದ್ದಿರಲಿಲ್ಲ. ಆತನು ತನ್ನದೇ ಆದ ಅಹಂಕಾರದ ಒಂದು ಗುಂಗಿನಲ್ಲಿ ತಿರುಗಾಡುತ್ತಿದ್ದನು. ಧರ್ಮದ ಮಾತೇಕೆ ಪ್ರತ್ಯಕ್ಷ ಈಶ್ವರನ ಹಿರಿತನದ ಪರಿವೆಯೂ ಆತನಿಗಿರಲಿಲ್ಲ.

ಆತನಿಗಿದ್ದುದು ಒಂದೇ ಒಂದು ಚಿಂತೆ. ಅದೆಂದರೆ ಈ ಪೃಥ್ವಿಯ ಮೇಲೆ ಮಾನವನ ಅಧಿಪತ್ಯವನ್ನು ಸಂಪೂರ್ಣವಾಗಿ ಸ್ಥಾಪಿಸುವದು. ಇದೇ ವಿಚಾರದಲ್ಲಿ ಆತನು ಯಾವಾಗಲೂ ಮಗ್ನನಾಗಿರುತ್ತಿದ್ದನು. ಆದಕಾರಣ ಪ್ರಾಣಿ ಜಾತಿ, ಕೀಟಕ ಜಾತಿ ಮತ್ತು ಪಕ್ಷಿ ಜಾತಿಗಳ ನಿರ್ಮೂಲನ ಮಾಡುವದರಲ್ಲಿ ಶಾಸ್ತ್ರಜ್ಞರ ಪೈಪೋಟಿ ಸುರುವಿದ್ದಿತು. ಆಗ ಪ್ರತಿಯೊಬ್ಬ ಮನುಷ್ಯನು ಶಾಸ್ತ್ರಜ್ಞನಿದ್ದು ಪ್ರತಿಯೊಂದು ಮನೆಯೂ ಪ್ರಯೋಗಶಾಲೆಯಾಗಿ ಪರಿಣಮಿಸಿತ್ತು. ಗ್ಯಾಮಾ ಮತ್ತು ಲೇಸರ್ ಕಿರಣಗಳನ್ನು ಉಪಯೋಗಿಸಿ ನೀರು, ಆಕಾಶ, ಮತ್ತು ಪೃಥ್ವಿಯ ಮೇಲೆ ತನ್ನ ವರ್ಚಸ್ಸನ್ನು ಸ್ಥಿರಪಡಿಸುವ ಅಟ್ಟಹಾಸ ನಡೆದಿತ್ತು. ಪೃಥ್ವಿಯ ಮೇಲಿನ ಕೀಟಕಗಳನ್ನು ನಾಶಪಡಿಸಿ ಅಲ್ಲಿ ಜಾಗತಿಕ ಕ್ರಿಡಾಂಗಣವನ್ನು ಸಿದ್ಧಪಡಿಸಬೇಕು. ಮತ್ತು ಸಮುದ್ರದಲ್ಲಿ ಸ್ವಲ್ಪೇ ಉಳಿದ ಕಾರಣ ಮೀನಗಳನ್ನು ನಾಶಪಡಿಸಿ ಅಲ್ಲಿ ಸುಂದರ ಮತ್ತು ಸುವ್ಯವಸ್ಥಿತ ಹಾಟೇಲುಗಳನ್ನು ಕಟ್ಟಬೇಕೆಂದು ಆತನು ಬಯಸು ಸುತ್ತಿದ್ದನು.

ಮಾನವನು ಈ ಪ್ರಕಾರ ಮನಸ್ಸಿನಲ್ಲಿ ಎಣಿಕೆ ಮಾಡುತ್ತಿದ್ದಾಗ ಪೃಥ್ವಿಯ ತೀರ ಅಂತರ್ಭಾಗದಲ್ಲಿ ಪ್ರಕಾಶದ, ಪ್ರಜ್ವಲಿಸುವ ಒಂದು ಕೇಂದ್ರವು ಮಾನವನ ಬಗ್ಗೆ ವಿಚಾರ ಮಾಡುತ್ತಿತ್ತು. ಈ ಮಾನವನಿಗೆ ನಾನೇ ಜನ್ಮ ಕೊಟ್ಟೆನು; ಆತನಲ್ಲಿ ಮೂಲಪ್ರೇರಣೆಯಿಂದ ಬುದ್ಧಿಯ ವಿಕಾಸವನ್ನು ತಂದೆನು; ಆತನು ಬುದ್ಧಿಯ ಮಟ್ಟದಿಂದ ಅಂತಃಪ್ರೇರಣೆಯ ಮಟ್ಟದ ವರೆಗೆ ಪ್ರವಾಸ ಮಾಡುವನೆಂಬ ಭರವಸೆ ಮಾಡಿದ್ದೆನು. ಆದರೆ ಇತ್ತ ಬುದ್ಧಿಯೂ ಇಲ್ಲ. ಅತ್ತ ಅಂತಃಪ್ರೇರಣೆಯೂ ಇಲ್ಲದಂತಹ ದುರ್ಬುದ್ಧಿಯಿಂದ ಆತನು ಮೈಮರೆತಿದ್ದಾನೆ. ಪಶುಪಕ್ಷಿಗಳನ್ನು ನಾಶಪಡಿಸಿ ಆತನು ತನ್ನ ಜೀವನದ ವಸಂತ ಋತುವನ್ನೇ ನಷ್ಟಪಡಿಸಿದ್ದಾನೆ. ನಿಜವಾಗಿ ನೋಡಿದರೆ ನಿಸರ್ಗದಲ್ಲಿಯ ಸುರಚನೆ, ಸುಸಂಬದ್ಧತೆಯನ್ನು ನೋಡಿ ಆತನು "ವಿಶ್ವದ ಬುದ್ಧಿಮತ್ತೆ"ಯ ಬಗೆಗೆ ವಿಶ್ವಾಸ ತೋರಬೇಕಾಗಿತ್ತು. ಆದಾಗದೇ ಮಾನವನ ರೋಮರೋಮಗಳಲ್ಲಿ ಅಹಂಕಾರವು ತುಂಬಿ ತುಳುಕಹತ್ತಿದೆ.

ಏನು ಮಾಡಿ ಈ ಮತ್ತ ಮಾನವನನ್ನು ದಾರಿಗೆ ತರಬೇಕೆಂದು ಪೃಥ್ವಿ ಕೇಂದ್ರವು ವಿಚಾರ ಮಾಡತೊಡಗಿತು. ಹೀಗೆ ವಿಚಾರ ಮಾಡುತ್ತ ಪೃಥ್ವಿ ಕೇಂದ್ರವು ಅಂತರ್ಮುಖವಾಗಲು ಆ ಕೇಂದ್ರದಿಂದ ಸಜೀವ ಕಿರಣಗಳು ಪ್ರಕ್ಷೇಪಿಸಲ್ಪಟ್ಟವು. "ಎಲೈ ಮಾನವಾ, ಪೃಥ್ವಿ ಪುತ್ರಾ ನೀನು ನಡೆದುದೆಲ್ಲಿಗೆ! ಎಂಬುದರ ವಿಚಾರ ಮಾಡು." ಎಂದು ತನ್ನ ಪ್ರಬಲ ವಿಚಾರ ಪ್ರಕ್ಷೇಪಣೆಯಿಂದ ಮಾನವ ಜಾತಿಯನ್ನು ವಿಚಾರಿಸಬೇಕೆಂದು ಅಂತರ್ಮುಖ ಪ್ರಕಾಶಮಯ ಕೇಂದ್ರಕ್ಕೆ ಅನಿಸತೊಡಗಿತು.

ಪೃಥ್ವಿಯ ವಿಚಾರದ ಈ ಪ್ರಬಲ ಪ್ರಭಾವವು ಪೃಥ ಕೇಂದ್ರದಿಂದ ಪೃಥ್ವಿಯ ಅಣುರೇಣುಗಳೊಳಗಿಂದ ಹೊರಬಿದ್ದಿತು. ಇಲೆಕ್ಟ್ರೋಡನ್ನು ತಲೆಗೆ ಕಟ್ಟಿಕೊಂಡು ಮಲಗಿದ್ದ ಮನುಷ್ಯನು ಗಡಿಬಿಡಿಸಿ ಎದ್ದನು. ಇಲೆಕ್ಟ್ರೋಡ್ಸ ಅಂದರೆ ಯಂತ್ರ ಪುರುಷನೂ ಕೆಲಸ ನಿಲ್ಲಿಸಿದನು.

"ಮಾನವಾ ಪೃಥ್ವಿ ಪುತ್ರಾ! ನೀನು ಹೊರಟಿರುವುದೆಲ್ಲಿಗೆ ಎಂಬುದರ ವಿಚಾರ ಮಾಡು." ಎಂಬ ಆಹ್ವಾನವನ್ನು ಪ್ರತ್ಯೇಕ ಮನುಷ್ಯನ ಅಂತರ್ಮನವು ವಿಚಾರಿಸತೊಡಗಿತು. ಅಂದರೆ ಅಂತರ್ಮನದಲ್ಲಿ ಧ್ವನಿಯು ಕೇಳಿಸತೊಡಗಿತು.

ಈ ಅಂತರ್ಮನದ ಧ್ವನಿಯಿಂದ ಮನುಷ್ಯನು ಅಸ್ವಸ್ಥನಾದನು. ಯಾಕೆಂದರೆ ಆ ಒಳ ಧ್ವನಿಯು ಎಲ್ಲಿಂದ ಬರುವುದೆಂಬುದು ಆತನಿಗೆ ತಿಳಿಯಲಿಲ್ಲ. ಆತನಿಗೆ ಏನೂ ತಿಳಿಯದಾಯಿತು. ಕೊನೆಗೆ ಜಗತ್ತಿನಲ್ಲಿಯ ಅತ್ಯುತ್ತಮ ಮತ್ತು ವೃದ್ಧ ಗಣಕ ಯಂತ್ರಕ್ಕೆ ಈ ಪ್ರಶ್ನೆಯನ್ನು ವಿಚಾರಿಸಲಾಯಿತು. ಆದರೆ ಆ ಗಣಕ ಯಂತ್ರವು "ನಿಮಗೆ ಬಂದ ಸಂದೇಶವು ಎಲ್ಲಿಂದ ಬರುವುದೆಂಬುದು ನಮಗೂ ಸಮಸ್ಯೆಯಾಗಿದೆ; ಈ ಸಮಸ್ಯೆಯನ್ನು ಬಿಡಿಸಲು ನಾವು ವಿಶ್ವ ಪ್ರಯತ್ನವನ್ನು ಮಾಡಿದೆವು; ಆದರೆ ಎಲ್ಲವೂ ವ್ಯರ್ಥವಾಗಿದೆ. ನಾವು ಗ್ಯಾಮಾ ಕಿರಣಗಳಿಂದ ಧಾತುವಿನ ಮೇಲೆ ಪ್ರಯೋಗ ಮಾಡಿದೆವು; ರಡಾರ ಯಂತ್ರದ ಮೂಲಕ ಆಕಾಶದಲ್ಲಿ ಶೋಧ ಮಾಡಿದೆವು; ಆದರೆ ಈ ಸಂದೇಶದ ಮೂಲವು ಎಲ್ಲಿಯೂ ಸಿಗಲಿಲ್ಲ. ಈ ಸಂದೇಶವು ನಮ್ಮ ವಿಚಾರ ಕಕ್ಷೆಯಲ್ಲಿ ಇಲ್ಲ" ಎಂದು ಗಣಕ ಯಂತ್ರಗಳೂ ಕೈ ಊರಿದವು.

ಕೊನೆಗೆ ಇದೇ ಪ್ರಶ್ನೆಯನ್ನು ಮಾನಸಶಾಸ್ತ್ರಜ್ಞರ ಮುಂದೆ ಇಡಲಾಯಿತು. ಇದು ಸಾಮೂಹಿಕ ಭ್ರಮೆಯ ಪ್ರಕಾರವಿದೆ ಎಂದು ಎಲ್ಲ ಶಾಸ್ತ್ರಜ್ಞರು ಒಮ್ಮುಖದಿಂದ ಹೇಳಿದರು. ಹೀಗೆ ವಿಚಿತ್ರವಾಗಿ ಈ ಪ್ರಶ್ನೆಯನ್ನು ಬಿಡಿಸಲಾಯಿತು. ಮತ್ತು ಈ ಪ್ರಕರಣದ ಮೇಲೆ ಮುಸುಕೆಳೆಯಲಾಯಿತು.

ಪೃಥ್ವಿ ಕೇಂದ್ರದ ಮುಂದೆ ಮತ್ತೊಮ್ಮೆ ಇದೇ ಪ್ರಶ್ನೆ ಉದ್ಭವಿಸಿತು. "ಎಲೈ ಮಾನವನೇ ನೀನು ಹಿಡಿದಿರುವ ಈ ಮಾರ್ಗವು ತಪ್ಪಿದೆ." ಎಂದು ಆತನಿಗೆ ತಿಳಿಸಿ ಹೇಳುವುದೆಂತೆಂದು.

ಅಷ್ಟರಲ್ಲಿಯೇ ಅದರ ಪ್ರಜ್ಞಾ ದೃಷ್ಟಿಯು ಮುಂದೆ ಇರುವೆಗಳ ಸಾಲೊಂದು ಕಾಣಿಸಿತು. ಪೃಥ್ವಿಯ ಉದರದಲ್ಲಿ, ಅಂಧಃಕಾರದಲ್ಲಿ ಮಾರ್ಗ ಹುಡುಕುತ್ತ ಆ ಸಾಲು ನಡೆದಿತ್ತು. ಒಂದರ ಹಿಂದೆ ಮತ್ತೊಂದು, ಮಗದೊಂದು, ಹೀಗೆ ಶಿಸ್ತಿನಿಂದ ಆ ಇರುವೆಗಳು ನಡೆದಿದ್ದವು.



ಮಳೆಗಾಲ ಸಮೀಪಿಸಿತು. ಅದರ ಸಲುವಾಗಿ ಧಾನ್ಯಕಣಗಳ ಸಂಗ್ರಹವನ್ನು ಅವು ಮಾಡುತ್ತಿದ್ದವು. ಪೃಥ್ವಿ ಕೇಂದ್ರವು ವಿಚಾರ ಮಾಡತೊಡಗಿತು. ಈ ಇರುವೆಗಳು ಬುದ್ಧಿಯ ಪ್ರೇರಣೆ ಇಲ್ಲದೆ ಕೇವಲ ಮೂಲಭೂತ ಪ್ರೇರಣೆಯಿಂದ (Instinct) ಮಾರ್ಗ ಕ್ರಮಿಸುತ್ತಿರುವವು. ಆದ ರಿಂದ ಬುದ್ಧಿಯಿಂದ ಪ್ರೇರೇಪಿಸಲ್ಪಟ್ಟ ಮಾನವನಂತೆ ಅವು ಕೆಡಲಿಕ್ಕಿಲ್ಲ.

ಈ ಮೂಲಭೂತ ಪ್ರೇರಣೆಯಿಂದ ಮತ್ತೊಮ್ಮೆ ನವ ಮಾನವನನ್ನು ನಿರ್ಮಾಣ ಮಾಡಲು ಬರುವದೆಂದು ಪೃಥ್ವಿ ಕೇಂದ್ರಕ್ಕೆ ತನ್ನ ಸಮಗ್ರ ಜ್ಞಾನದಿಂದ (Global Knowledge) ತಿಳಿಯಿತು.

ಆಗ ಪ್ರಕಾಶ ಕಿರಣದ ಒಂದು ತೆರೆಯು ಹೊರಬಿದ್ದಿತು. ಒಂದೊಂದು ಇರುವೆಯಿಂದಲೂ ಅದು ಪಾರಾಗಿ ಹೋಯಿತು. ಈ ಪ್ರಕಾಶ ಕಿರಣದ ತೆರೆಯು ಸಚೇತನ ಇದ್ದುದರಿಂದ ಇರುವೆಗಳು ಪ್ರಕಾಶಿಸಲ್ಪಟ್ಟವು. ಪ್ರಕಾಶ ಕಿರಣವು ಇರುವೆಗಳ ಮರ್ಯಾದಿತ ಜ್ಞಾನ ಕಕ್ಷೆಯಲ್ಲಿ ಪ್ರವೇಶಿಸಿತು. ಅದರೊಡನೆ ಆ ಅಮೂರ್ತ ಪ್ರಕಾಶ ತೆರೆಯು ಒಂದು ದೊಡ್ಡ ಭವ್ಯ ಇರುವೆಯ ಸ್ವರೂಪದಲ್ಲಿ ರೂಪಿಸಲ್ಪಟ್ಟಿತು.

ಒಂದು ಇರುವೆಯು ಮತ್ತೊಂದಕ್ಕೆ ಹೇಳತೊಡಗಿತು. "ನೋಡಿಲ್ಲಿ, ನಮ್ಮ ರಾಣಿ ಇರುವೆಗಿಂತ ದೊಡ್ಡದಾದ ಇರುವೆಯನ್ನು ನಾವು ನೋಡಿದೆವು."

ಆಗ ಎಲ್ಲ ಇರುವೆಗಳಿಗೆ ಒಮ್ಮೆಲೇ ಒಂದು ಧ್ವನಿಯು ಕೇಳಿಸಿತು "ನೀವೆಲ್ಲರೂ ಕೂಡಿಕೊಂಡು ನನ್ನೆಡೆಗೆ ಬನ್ನಿರಿ." ಎಂದು.

ಇರುವೆಗಳು ಆ ಆದೇಶವನ್ನು ಒಪ್ಪಿಕೊಂಡವು. ಲಕ್ಷಾವಧಿ, ಕೋಟ್ಯವಧಿ ಇರುವೆಗಳು ಆ ವಿಶಾಲ ಪ್ರಕಾಶ ಕೇಂದ್ರದೆಡೆಗೆ ನಡೆದವು. ಇರುವೆಗಳಿಗೆ ಆ ಅಮೂರ್ತ ಪ್ರಕಾಶವು ಕಾಣಿಸಲಿಲ್ಲ. ಆದರ ಸ್ಥಳದಲ್ಲಿ ಅವಕ್ಕೆ ಒಂದು ದೊಡ್ಡ ಇರುವೆಯು ಕಾಣಿಸಿತು.

"ನೀನಾರು" ಎಂದು ಇರುವೆಗಳು ಕೇಳಿದವು. ಪ್ರಕಾಶವು ನಕ್ಕು ಹೀಗೆ ಹೇಳಿತು. "ನನ್ನ ನಿಜ ಸ್ವರೂಪವು ನಿಮ್ಮ ಆಕಾರಾತ್ಮಕ ಮರ್ಯಾದೆಯಿಂದ ತಿಳಿಯದು. ನಾನು ನಿಮ್ಮ ದೇವನಿರುವೆನೆಂದಿಷ್ಟೇ ತಿಳಿಯಿರಿ."

ಇರುವೆಗಳು ನಮ್ರತೆಯಿಂದ ತಲೆ ಬಾಗಿದವು. "ನಮ್ಮನ್ನು ಕರೆದುದೇತಕೆ?" ಎಂದು ಕೇಳಿದವು.

ಪ್ರಕಾಶ ಕೇಂದ್ರವು ಇರುವೆಗಳ ಭಾಷೆಯಲ್ಲಿ ಹೇಳಿತು. ಪೃಥ್ವಿಯು ಮೇಲೆ ದೊಡ್ಡ ಸಂಕಟ ಬಂದೊದಗಿದೆ.

"ಆದರೆ ಸಂಕಟವೆಂದರೇನು?" ಎಂದು ಒಂದು ಇರುವೆಯು ಎರಡು ಕಾಲುಗಳ ಮೇಲೆ ನಿಂತು ಶಂಕಿಸಿತು.

"ಮಳೆಗಾಲ ಬಂದಿದೆ. ನಿತ್ಯದಂತೆ ನೀವು ಅನ್ನವನ್ನು ಕೂಡಿಸಿಡದಿದ್ದರೆ ನಿಮ್ಮ ಮೇಲೆ ಯಾವ ಪರಿಸ್ಥಿತಿ ಒದಗುವದೋ ಆ ಸ್ಥಿತಿಯೇ ಸಂಕಟ" ಪ್ರಕಾಶ ಕೇಂದ್ರವು ತಿಳಿಸಿ ಹೇಳಿತು.

ಕೆಲ ಇರುವೆಗಳಿಗೆ ಇದು ತಿಳಿಯಿತು. ಅವು ತಲೆ ಅಲುಗಾಡಿಸಿ ಹೂಂಗೊಟ್ಟವು.

"ನೀವು ಮಾನವ ಜಾತಿಗೆ ಸಹಾಯ ಮಾಡುವಿರೇನು?" ಪೃಥ್ವಿ ಕೇಂದ್ರವು ಇರುವೆಗಳಿಗೆ ಕೇಳಿತು.

"ಆದರೆ ಸಹಾಯವೆಂದರೇನು?" ಮತ್ತೊಂದು ಇರುವೆಯು ಕೇಳಿತು.

ಆಗ ಪೃಥ್ವಿಕೇಂದ್ರವೆಂದಿತು: "ಒಮ್ಮೆ ನೀವು ಧಾನ್ಯದ ಕಣವನ್ನು ಒಯ್ಯತೊಡಗಿರುವಿರಿ. ಆಗ ಒಂದು ಇರುವೆಯು ಮತ್ತೊಂದು ಇರುವೆಗೆ ಸಹಕಾರ್ಯ ಮಾಡುತ್ತದೆ. ಇದಕ್ಕೆ ಸಹಾಯವೆನ್ನುವರು."

ಇರುವೆಗಳಿಗೆ ಎಲ್ಲವೂ ತಿಳಿಯಿತು. ಅವೆಲ್ಲವೂ ಒಂದು ನವ ತೇಜಸ್ಸಿನಿಂದ ಮಿನುಗಿದವು. ಪೃಥ್ವಿ ಕೇಂದ್ರವು ಹೇಳಿದಂತೆ ಮಾಡಲು ಅವು ಸಿದ್ಧವಾದವು. ಆಗ ಆ ಕೇಂದ್ರವೆಂದಿತು. ದಿನಾಲೂ ಮಲಗುವಾಗ ನನ್ನ ಚಿಂತನೆ ಮಾಡಿರಿ. ಅಂದರೆ ನಿಮಗೆ ಮುಂದಿನ ಕಾರ್ಯವು ತಾನಾಗಿಯೇ ತಿಳಿಯುವದು."

ಎಲ್ಲ ಇರುವೆಗಳು ಒಳ್ಳೆಯ ಸಮಾಧಾನದಿಂದ ತಮ್ಮ ತಮ್ಮ ಹುತ್ತಿನೆಡೆಗೆ ತೆರಳಿದವು. ಆ ದಿವಸದಿಂದ ಸಹಾಯ ಮತ್ತು ಸಹಕಾರ್ಯ

ಇವೆರಡು ಶಬ್ದಗಳಿಂದ ಅವುಗಳ ಜೀವನದಲ್ಲಿ ಪ್ರಚಂಡ ಕ್ರಾಂತಿಯಾಯಿತು. ಒಂದು ಕವಿ ಇರುವೆಯು ಹಾಡತೊಡಗಿತು.

"ನಾನೊಂದು ಚಿಕ್ಕ ಇರುವೆ,
ನಾನೊಂದು ನಮ್ರ ಇರುವೆ,
ಕಾಳು ಕೂಡಿಸುವಾಗ
ಮತ್ತೊಂದು ಇರುವೆಗೆ ಸಹಾಯ ಮಾಡು
ವೆನು."

ಸಾವಿರಾರು ವರುಷಗಳಲ್ಲಿ ಆಗದ್ದು ದೇವ ಇರುವೆಯು ಎರಡು ಶಬ್ದಗಳಿಂದ ಆಯಿತು. ಇದೆಂಥ ಅದ್ಭುತವೆಂದು ಒಂದು ವೃದ್ಧ ಇರುವೆಯು ವಿಚಾರ ಮಾಡಿ ಮಾಡಿ ದಣಿಯಿತು. ಅದರ ಆಶ್ಚರ್ಯಕ್ಕೆ ಸೀಮೆಯೇ ಉಳಿಯಲಿಲ್ಲ.

ಇತ್ತ ಪೃಥ್ವಿಯ ಮೇಲೆ 'ಬೀಟಾ' ಜಾತಿಯ ಗುಂಪು 'ಗಾಮಾ' ಜಾತಿಯ ಗುಂಪಿನೊಡನೆ ಜಗಳ (ಕದನ) ಮಾಡತೊಡಗಿದವು. ಕಾರಣ–ವಿಷ್ಟೇ. ಪೃಥ್ವಿಯ ಅಂತರ್ಗತ ಕೀಟಕಗಳನ್ನು 'ಲೇಸರ್' ಕಿರಣಗಳಿಂದ ಕೊಲ್ಲುವುದೋ ಅಥವಾ ಕೋಬಾಲ್ಟ ಕಿರಣಗಳಿಂದ ಕೊಲ್ಲು-ವದೋ, ಎಂದು ಅವುಗಳ ಕದನವು ವಿಕೋಪಕ್ಕೆ ಹೋಯಿತು, ಮತ್ತು ಎರಡು ಬಣಗಳು ಯುದ್ಧಕ್ಕೆ ಸಿದ್ಧವಾದವು. ಪರಸ್ಪರರ ಮೇಲೆ ಲೇಸರ್ ಮತ್ತು ಕೋಬಾಲ್ಟ ಕಿರಣಗಳನ್ನು ಅವರು ಪ್ರಯೋಗಿಸಿದರು, ಕ್ಷಣಾರ್ಧದಲ್ಲಿಯೇ ಎಲ್ಲ ಮಾನವ ಜಾತಿಯು ನಷ್ಟವಾಯಿತು.

ಅದೇ ದಿವಸ ಪೃಥ್ವಿ ಕೇಂದ್ರವು ಸಂದೇಶವ-ನ್ನಿತ್ತಿತು. ಕೂಡಲೇ ಸಾವಿರಾರು, ಲಕ್ಷಾವಧೀ, ಕೋಟ್ಯವಧೀ ಇರುವೆಗಳ ತಂಡವು ಹೊರ ಬಿದ್ದಿತು. ಜಲಚರಪ್ರಾಣಿಗಳ, ಪಶು, ಮತ್ತು ಕೀಟಕಗಳ ಶತ್ರುಗಳನ್ನು ಪೃಥ್ವಿಯ ಅಂತ-ರ್ಭಾಗದಿಂದ ಪೃಷ್ಠಭಾಗಕ್ಕೆ ತರುವ ಪ್ರಚಂಡ ಕಾರ್ಯವನ್ನು ಅವು ನಡೆಸಿದವು ಮತ್ತು ಕೆಲ ಹೊತ್ತಿನಲ್ಲಿಯೇ ಅದನ್ನು ಮಾಡಿ ಮುಗಿಸಿದವು.

ಒಂದು ಪ್ರಯೋಗ ಶಾಲೆಯಲ್ಲಿಯ, ಒಡೆದ ಎರಡು ಪರೀಕ್ಷಾ ನಳಿಕೆಗಳಲ್ಲಿಯ ದ್ರವವು ಒಂದೆಡೆಗೆ ಹರಿದು ಬಂದಿತು. ಅದರಲ್ಲಿ ಪುರುಷನ ಶುಕ್ರಾಣು ಮತ್ತು ಸ್ತ್ರೀಯ ಬೀಜಾಣುಗಳಿದ್ದವು.

ಅರುಣೋದಯವಾಯಿತು. ಬಾಲರವಿಯ ಬಂಗಾರದ ಕಿರಣಗಳು ಪೃಥ್ವಿಯ ಮೇಲೆ ಪಸರಿಸಿದವು. ಈ ಕಿರಣಗಳಿಂದ ಹೊರಟ ಕಾವಿನಿಂದ ಒಂದು ತತ್ತಿಯೊಡೆಯಿತು. "ಡರಾಂವ "ಡರಾಂವ" ಎಂದೆನ್ನುತ್ತ ಅದರಲ್ಲಿಂದ ಕಪ್ಪೆ-ಯೊಂದು ಹೊರಬಿದ್ದಿತು. ಜಿಗಿಯುತ್ತ, ಜಿಗಿಯುತ್ತ, ಅದು ಒಂದು ಗಣಕಯಂತ್ರದ ಮೇಲೆ ಕುಳಿತಿತು. ಮತ್ತು ಮುಂದಿದ್ದ ಮುರಿದ ಯಂತ್ರ ಪುರುಷನ ಕಣ್ಣಿನೊಳಗಿಂದ ನೋಡ ತೊಡಗಿತು. ಯಂತ್ರಪುರುಷನ ನಾಡಿಯು ಬಂದಾಗಿತ್ತು. ಇಷ್ಟರಲ್ಲಿಯೇ ಮತ್ತೊಂದು ತತ್ತಿ ಒಡೆಯಿತು. ಅದರೊಳಗಿಂದ ಒಂದು ಮೀನವು ಹೊರಬಿದ್ದಿತು. ಮತ್ತು ನೀರಿನಲ್ಲಿ ಜಿಗಿಯಿತು. ಮನುಷ್ಯನು ಸಮುದ್ರದ ತಳದಲ್ಲಿ ಕಟ್ಟಿದ ಬಣ್ಣಬಣ್ಣದ ಮನೆಗಳ ಖೋಲಿಗಳೊಳಗಿಂದ ಅದು ಈಜತೊಡಗಿತು.

ಪಶು, ಪಕ್ಷಿ, ಮತ್ತು ಕೀಟಗಳ ಜನ್ಮವು ಹೀಗೆಯೇ ಆಯಿತು. ಪೃಥ್ವಿಯ ಮೇಲೆ ಮತ್ತೊಮ್ಮೆ ಹೊಸ ತೇಜವು ಪಸರಿಸಿತು. ಇಷ್ಟರಲ್ಲಿಯೇ ಆ ಪರೀಕ್ಷಾ ನಳಿಕೆಗಳ ದ್ರವಗಳ ಮಿಶ್ರಣದಿಂದ ಒಂದು ಸುಂದರ ಬಾಲಕನ ಜನ್ಮವಾಯಿತು. ಆತ ತನ್ನ ಕಣ್ಣಾರಳಿಸಿ ಸುತ್ತಲೂ ನೋಡತೊಡಗಿದ, ಅದೇ ವೇಳೆಗೆ ಅದರ ಹೃದಯದಲ್ಲಿಂದ ಒಂದು ಧ್ವನಿಯು ಹೊರಬಿದ್ದಿತು. ಒಂದು ಪ್ರಾರ್ಥನೆ ಕೇಳಿಸಿತು.

"ನಾನೊಬ್ಬ ಪೃಥ್ವಿಯ ಮಗನಿರುವೆನು. ನಾವೆಲ್ಲರೂ ಪೃಥ್ವಿಯ ಮಕ್ಕಳಿದ್ದೇವೆ. ಸಹ-ಕಾರ್ಯದಿಂದ ಜೀವಿಸುವ, ಪ್ರೇಮದಿಂದ ಉತ್ಕ್ರಾಂತಿ ಹೊಂದುವ. ನಾವೆಲ್ಲರೂ ಅನಂತ-ದೆಡೆಗೆ ಸಾಗುವ ಪಥಿಕರಿರುವೆವು." ✿




ಕೆ. ಎಲ್. ದತ್ತ

ಅಪಘಾತಗಳ ವಾರ್ಡಿನಲ್ಲಿ ಒಂದು ಹಾಸಿಗೆಯನ್ನು ಕೂಡಲೆ ಸಿದ್ಧಪಡಿಸಬೇಕು, ಸ್ಕೂಟರ ಅಪಘಾತಕ್ಕೆ ಈಡಾದವನೊಬ್ಬ ಬರುತ್ತಿದ್ದಾನೆ ಎಂದು ಒಂದು ರಾತ್ರಿ ಆಸ್ಪತ್ರೆಗೆ ಸಂದೇಶ ಬಂದಿತು. ಮುಂದೆ ಕೆಲ ನಿಮಿಷಗಳಲ್ಲಿಯೇ ಲಿಫ್ಟಿನ ಬಾಗಿಲ ತೆರೆದುಕೊಂಡಿತು; ಟ್ರಾಲಿ ಹೊರಕ್ಕೆ ಬಂದಿತು;

ಅಪಘಾತಕ್ಕೀಡಾದ ದುರ್ದೈವಿಯ ಮೈಮೇಲೆ ಇನ್ನೂ ಆತನ ಉಡುಪೇ ಇತ್ತು. ಬೂಟ್ಸುಗಳನ್ನೂ ಬಿಚ್ಚಿರಲಿಲ್ಲ. ಹಣೆಯ ಮೇಲಿನ ಹತ್ತಿ ಪಟ್ಟಿಯನ್ನು ನರ್ಸ್ ಒಬ್ಬಳು ಮೃದುವಾಗಿ ಹಿಡಿದುಕೊಂಡಿದ್ದಳು, ಅದೇ ಆತನಿಗೆ ಅಪಘಾತವಾದ ಬಗ್ಗೆ ಗುರುತು. ಆ ಪಟ್ಟಿಯನ್ನೂ ತೋಯಿಸಿ ನೆತ್ತರ ಹೊರಕಾಣುತ್ತಿತ್ತು.

ಅಪಘಾತದ ವಾರ್ಡಿನ ಅಧಿಕಾರಿ ಡಾಕ್ಟರ ತನ್ನ ರೋಗಿಯೊಡನೆ ಬಂದ. ರೋಗಿಯ ತಲೆ ಬುರುಡೆಗೆ ವಿಪರೀತ ಪೆಟ್ಟು ಹತ್ತಿರುವದರಿಂದ. ಆತ ಇನ್ನೇನು ಬಹಳವಾದರೆ ಒಂದರ್ಧಗಂಟೆ ಬದುಕಬಹುದು ಆದ್ದರಿಂದ ಆತನ ಪರೀಕ್ಷೆಯನ್ನೂ ಮಾಡಿಲ್ಲ ಎಂದು ಆ ಡಾಕ್ಟರ ಹೇಳಿದ.

ರೋಗಿಯನ್ನು ಮೆತ್ತಗೆ ಹಾಸಿಗೆಯ ಮೇಲೆ ಮಲಗಿಸಿ, ಮಂಚದ ಸುತ್ತಲೂ ತೆರೆಗಳನ್ನು ನಿಲ್ಲಿಸಲಾಯಿತು. ಈ ದುರ್ದೈವಿ ಬಾಲಕನ ತಂದೆ 'ಓಪಿಡಿ'ಯಲ್ಲಿದ್ದಾನೆ. ಆತನಿಗೆ ಈ ಸುದ್ದಿ ಕೇಳಿ ಆಘಾತವಾಗಿರುವದರಿಂದ ಉಪಚರಿಸುತ್ತಲಿದ್ದಾರೆ ಎಂದು ನರ್ಸ ಹೇಳಿದಳಲ್ಲದೆ, ಈ ಬಾಲಕನ ತಾಯಿಗೂ ಹೇಳಿಕಳಿಸಲಾಗಿದೆಂದು ತಿಳಿಸಿದಳು.

"ಈತನಿಗೆ ಕಾಲು ಗ್ರೇನ್ ಮಾರ್ಫಿಯಾ ಇಂಜೆಕ್ಶನ್ ಕೊಡಲಾಗಿದೆ. ಇದಕ್ಕೂ ಹೆಚ್ಚಿಗೇನೂ ಮಾಡಲು ಸಾಧ್ಯವಿಲ್ಲ ಎಂದೆನಿಸುತ್ತದೆ. ತಂದೆ ಎಚ್ಚತ್ತ ಕೂಡಲೆ ಇಲ್ಲಿಗೆ ಕಳಿಸುತ್ತೇನೆ" ಎನ್ನುತ್ತ ಆ ನರ್ಸ್ ಹೊರಟು ಹೋದಳು.

ಹಣೆಯ ಮೇಲಿನ ಪಟ್ಟಿಯನ್ನು ಸರಿಸಿ ನೋಡಿದೆ. ಹಣೆಗೆ ಆಳವಾದ ತೂತು ಬಿದ್ದಿತ್ತಲ್ಲದೆ ಒಳಗಿನ ಎಲುಬು-ಮಿದುಳಿನ ತುಸು

ಭಾಗ ಕಾಣುತ್ತಿತ್ತು. ಹೆದರಿ ಹೋದೆ. ನಾಡಿ ಹಿಡಿದು ನೋಡಿದೆ. ಕೈಗೆ ಹತ್ತಿಯೂ ಹತ್ತದಷ್ಟು ಮಂದವಾಗಿತ್ತು. ಕೇವಲ ಹತ್ತೊಂಬತ್ತು ವರ್ಷದ ತರುಣ. ಆತನನ್ನು ಉದಕಿಸಲೇ ಬೇಕು ! ಎಂದುಕೊಂಡೆ.

ತಂದೆಯನ್ನು ಮಗನ ಬಳಿಗೆ ಕರೆತರಲಾಯಿತು. ಪಾಪ ! ಆತನನ್ನು ನೋಡಿ ಬಹಳೇ ವಿಷಾದವೆನಿಸಿತು. ಮಗನ ಸ್ಕೂಟರಿನ ಹಿಂದಿನ ಸೀಟಿನಲ್ಲಿ ಆತನೂ ಕುಳಿತಿದ್ದ. ಅಪಘಾತ ವಾದಾಗ, ಎದುರಿನಿಂದ ವೇಗದಿಂದ ಬರುತ್ತಿದ್ದ ಕಾರಿಗೆ ಈತನ ಸ್ಕೂಟರ ಡಿಕ್ಕಿ ಹೊಡೆದದ್ದರಿಂದ ಈತ ನೆಗೆದು ಕಾರಿನ ಬಾನೆಟ್ಟಿಗೇ ಕುಪ್ಪಳಿಸಿದ್ದ. ಅಂತೇ ಆತನ ಹಣೆ ಒಡೆದುಹೋಗಿತ್ತು. ಹಿಂದೆ ಕುಳಿತಿದ್ದ ತಂದೆ ರಸ್ತೆಗೆ ಕುಪ್ಪಳಿಸಿದ್ದ. ಭುಜಗಳಿಗೆ ತರಚಿದ ಗಾಯವಾಗಿತ್ತು; ಆದರೆ ಅಪಘಾತದ ಆಘಾತದಿಂದ ಆತನು ಕಂಗೆಟ್ಟಿದ್ದ. ಹಾಸಿಗೆಯ ಮೇಲಿದ್ದ ಮಗನನ್ನೇ ನಿರುಕಿಸುತ್ತ ಕುಳಿತಿದ್ದ. ಆತನನ್ನೂ ಹಾಸಿಗೆಯ ಮೇಲೆ ಮಲಗಿಸಿ ಶಾಮಕ ಇಂಜೆಕ್ಷನ್ ಕೊಡಬೇಕೆಂದೆವು. ಆತನು ಒಪ್ಪಲಿಲ್ಲ.

"ಥ್ಯಾಂಕ್ಸ ನರ್ಸ್, ನಾನಿಲ್ಲಿಯೆ ಕುಳಿತಿರುತ್ತೇನೆ" ಎಂದು ತಂದೆ.

ಅಷ್ಟೊತ್ತಿಗೆ ಆ ಬಾಲಕನ ತಾಯಿ ಆಗಮಿಸಿದಳು. ಆಕೆಯನ್ನು ಒಳಗೆ ಕರೆದೊಯ್ದು ಮೊದಲು ಒಂದು ಕಪ್ಪು ಚಹ ಕೊಟ್ಟೆವು. ನಂತರ ಆಕೆಗೆ ಆಕೆಯ ಮಗ ಮರಣಶಯ್ಯೆಯಲ್ಲಿದ್ದಾನೆಂದು ಅಂಜುತ್ತ ಅಂಜುತ್ತ ತಿಳಿಸಿದೆವು.

ಆಕೆ ಕಣ್ಣೀರು ಸುರಿಸಬಹುದು, ಮಗನನ್ನು ಕಾಣಲು ತವಕಿಸಬಹುದು. ಗಂಡನ ವಿಚಾರ ಕೇಳಬಹುದು ಎಂದುಕೊಂಡಿದ್ದೆವು. ಆಕೆಯು ಹಾಗೇನೂ ಉದ್ರೇಕ ತೋರಿಸದೆ ಸಾವಧಾನದಿಂದ ಹೀಗೆಂದಳು—

"ಇದೆಲ್ಲ ಅವರ ತಪ್ಪು ! ಸ್ಕೂಟರ ಬೇಕು ಎಂದು ಮಗ ಆಗ್ರಹಪಡಿಸುತ್ತಲೇ ಇದ್ದ; ತಂದೆ ತೆಗೆಸಿಕೊಟ್ಟರು. ಅಷ್ಟೊಂದು ಕಕ್ಕುಲಾತಿ ಮಗನ ಮೇಲೆ. ಮುದುಕರಾಗಿ ಇವರಿಗೆ ತಿಳಿಯಬೇಡವೆ ಅವನ ಕಾಳಕ್ಕೆ ಕಣಿಯುಲಿಕ್ಕೆ? ಎತ್ತ ಹೊರಟಿದ್ದರೂ ಅವರಿಗೇ ತಿಳಿದಿರಲಿಲ್ಲ ಅಂತ ಕಾಣುತ್ತದೆ. ಒಂದಿನ ಹೀಗಾಗುವದೆಂದು ನಾನು ಎಚ್ಚರಿಸುತ್ತಲೇ ಇದ್ದೆ. ಯಾರು ಕೇಳುವರು ನನ್ನ ಮಾತು ?"

ಈಗ ನನಗೇ ಆಘಾತವಾದಂತೆನಿಸಿತು. ತಾಯಿಯಾದವಳು ಇಷ್ಟೊಂದು ನಿರ್ದಯಿ. ಕಠೋರ ಇರಲು ಸಾಧ್ಯವೆ? ನಿಮ್ಮ ಮಗನನ್ನು ನೋಡುವಿರಾ ಎಂದು ನಾವೇ ಕೇಳಿದೆವು. 'ಹೂಂ' ಎಂದು ಆಕೆ ನಮ್ಮೊಡನೆ ವಾರ್ಡಿನಲ್ಲಿ ಬಂದಳು. ತೆರೆಯನ್ನು ಸಾವಕಾಶವಾಗಿ ಸರಿಸಿದೆ. ಮಗನ ಕೈಯನ್ನು ತನ್ನ ಕೈಯಲ್ಲಿಟ್ಟುಕೊಂಡು ತಂದೆ ಅಲ್ಲಿಯೇ ಕುಳಿತಿದ್ದ. ನರ್ಸ್ ಒಬ್ಬಳು ನಿಂತಿದ್ದಳು.

ಮಂಚದ ಮೇಲೆ ಮಗ ಕಣ್ಮುಚ್ಚಿ ಮಲಗಿದ್ದ, ಮಂದವಾಗಿ ಶ್ವಾಸೋಚ್ಛ್ವಾಸ ನಡೆದಿತ್ತು.

ಕ್ಷಣಕಾಲ ಮಗನನ್ನು ದಿಟ್ಟಿಸಿ ನೋಡಿದ ಆಕೆ ತನ್ನ ಗಂಡನ ಕಡೆಗೆ ಹೊರಳಿ, "ನಾನು ಹೇಳಿದ್ದೆ, ಈಗಲಾದರೂ ನಿಮಗೆ ಸಮಾಧಾನವಾಯಿತೆ "? ಎಂದು ಅಬ್ಬರಿಸಿದಳು,

ಈಕೆಯ ಮನಸ್ಸು ಇಷ್ಟೇಕೆ ಕಲ್ಲಾಗಿದೆ ಎಂದುಕೊಂಡೆ.

ತಂದೆ ಮಗನನ್ನು ಚಿಕ್ಕಂದಿನಿಂದಲೂ ಅತಿ ಮುದ್ದಿನಿಂದ ಬೆಳೆಸಿರಬೇಕು; ಕಾರಣ ಗಂಡ ತನ್ನನ್ನು ತಾತ್ಸಾರಮಾಡಿದ್ದಾನೆಂದು ಆಕೆಗೆ ಅನಿಸಿರಬೇಕು. ಇಲ್ಲವೇ ಮಕ್ಕಳನ್ನು ಬೆಳೆಸುವ ಅವರ ವಿಚಾರಗಳಲ್ಲಿ ಬಹಳಷ್ಟು ಅಂತರ ಇದ್ದಿರಬೇಕು.

ಅದೇನೇ ಇರಲಿ, ಮಗ ಪರಲೋಕದ ದಾರಿಯಲ್ಲಿ ನಡೆದಿದ್ದಾನೆ, ಆತನ ತಂದೆ ದುಃಖತಪ್ತನಾಗಿ ಶಯ್ಯೆಯ ಬಳಿ ಕುಳಿತಿದ್ದಾನೆ. ಇಂಥ ಪ್ರಸಂಗದಲ್ಲಿ ಆದರೂ ಆಕೆ ತನ್ನ ಗಂಡನಿಗೆ ಒಂದೆರಡು ಸಾಂತ್ವನಪರ ವಚನಗಳನ್ನು ಹೇಳದಿರುವದು ನಮಗೇಕೋ ಭೀಕರವೆನಿಸಿತು.

ಆಕೆ ತನ್ನ ನೆರೆಮನೆಯವರ ಫೋನ ನಂಬರು ಕೊಟ್ಟು, ಏನಾದರೂ ಹೆಚ್ಚುಕಡಿಮೆ ಆದರೆ ತಿಳಿಸಿರಿ ಎಂದು ಹೇಳಿ ಹೊರಟು ಹೋದಳು.

ತಂದೆ ಮಗನ ಮಂಚದ ಬಳಿಯೇ ಕುಳಿತಿದ್ದ, ಇಷ್ಟೆಲ್ಲ ಆಗುವ ಹೊತ್ತಿಗೆ ಒಂದು ಗಂಟೆ

ಕಳೆದಿತ್ತು. ಆ ದುರ್ದೈವಿ ಇನ್ನೂ ಉಸಿರಾಡಿಸುತ್ತಿದ್ದ, ಪ್ರತಿ ಕಾಲುಗಂಟೆಗೊಮ್ಮೆ ಆತನ ನಾಡೀ ನೋಡುತ್ತಿದ್ದರೂ ಒಮ್ಮೊಮ್ಮೆ ಎಣಿಸಲೂ ಬಾರದಷ್ಟು ಮಿಡಿತ ಮಂದವಾಗಿರುತ್ತಿತ್ತು. ಹಿರಿಯ ನರ್ಸ್ ಊಟಕ್ಕೆ ತೆರಳಿದಳು. ರಾತ್ರಿ ಪಾಳಿಯ ನರ್ಸ್ ಆಗಾಗ ಬಂದು ಆತನ ಸ್ಥಿತಿಗತಿ ನೋಡಿಕೊಂಡು ಹೋಗುತ್ತಿದ್ದಳು.

ನನ್ನ ಸರತಿ ಬಂದಾಗ ನಾನೂ ಊಟಕ್ಕೆ ಹೋದೆ. ಪಾಕ ಶಾಲೆಗೆ ಹೋದರೂ ಏನನ್ನೂ ತಿನ್ನುವ ಮನಸ್ಸಾಗಲಿಲ್ಲ. ಊಟ ಅಬ್ಬರಿಸಿದಾಗ ಆತನ ಇಳಿದು ಹೋದ ಕಂಬಾಲ ಮೋರೆಯ ಚಿತ್ರವೇ ಕಣ್ಣೆದುರು ಕಟ್ಟುತ್ತಿತ್ತು.

ನಾನು ಪುನಃ ವಾರ್ಡಿಗೆ ಹೋದೆ. ತೆರೆಯ ಹಿಂದೆ ಇಣುಕಿ ನೋಡುವ ಧೈರ್ಯ ಆಗಲಿಲ್ಲ. ಆ ಹುಡುಗ ಈಗ ಸತ್ತಿರಬೇಕು. ಇಲ್ಲ, ಆತ ಇನ್ನೂ ಜೀವಂತನಾಗಿದ್ದ, ಒಳಗಿದ್ದ ನರ್ಸ್ ಹೊರಗೆ ಬಂದು, ನನ್ನನ್ನು ಪಾಕಶಾಲೆಯತ್ತ ಕರೆದೊಯ್ದಳು.

"ಆತನ ನಾಡಿ ತುಂಬ ಜೋರಾಗಿ ಬಡಿದುಕೊಳ್ಳುತ್ತಿದೆ. ರಾತ್ರಿ ಪಾಳಿಯ ನರ್ಸನ್ನು ಕರೆಯುತ್ತೇನೆ' ಎಂದಳು.

ಆ ನರ್ಸ್ ಬಂದು ಹುಡುಗನ ನಾಡಿ ಹಿಡಿದು ನೋಡಿ ಬೆರಗಾಗಿ, ಕೆಲಸದ ಮೇಲಿದ್ದ ಡಾಕ್ಟರರಿಗೆ ವರದಿ ಒಪ್ಪಿಸಿದಳು. ಸಂಜೆಗೆ ಆತನೇ ಈ ಬಾಲಕನನ್ನು ವಾರ್ಡಿಗೆ ತಂದು ಸೇರಿಸಿದ್ದ. "ಏನು, ಆತ ಇನ್ನೂ ಜೀವಿಸಿದ್ದಾನೆಯೇ? ಹಾಗಿದ್ದರೆ ಸರ್ಜನ್ನರನ್ನಲ್ಲಿ ಸಲಹೆ ಕೇಳಬೇಕು" ಎಂದ ಆ ಡಾಕ್ಟರ.

ನರ್ಸ್ ಬಳಿಕ ಸರ್ಜನ್ನರಿಗೆ ಫೋನ ಮಾಡಿ ಈ ಪ್ರಕರಣವನ್ನೆಲ್ಲ ಹೇಳಿದಾಗ ಆತ ವಿಳಂಬ ಮಾಡದೆ ವಾರ್ಡಿಗೆ ಬಂದುಬಿಟ್ಟ.

"ಹಣೆಗೆ ಬಿದ್ದ ಪೆಟ್ಟಿನಿಂದ ಈತನ ಮೂಳೆಯೊಂದು ಮುರಿದು, ಒಳಗೆ ಮಿದುಳನ್ನು ಒತ್ತುತ್ತಿರುವದರಿಂದ ತೊಂದರೆ ಆಗಿದೆ. ಶಸ್ತ್ರಚಿಕಿತ್ಸೆಯಿಂದ ಆ ಮೂಳೆಯನ್ನು ಕಿತ್ತಿ ಹಾಕಿದರೆ ಮಿದುಳು ಸರಿಯಾಗಿ ಕೆಲಸ ಮಾಡಬಹುದು. ಆದರೂ ಅಂತಿಮ ಪ್ರಯತ್ನವೆಂದು ಮಾಡಬಹುದು ಅಷ್ಟೇ" ಎಂದು ಸರ್ಜನ್ನರು ಅಭಿಪ್ರಾಯ ಪಟ್ಟರು. ಆತನ ತಂದೆ ಒಪ್ಪಿದರೆ ತಾವು ತಕ್ಷಣ ಶಸ್ತ್ರ ಚಿಕಿತ್ಸೆ ಮಾಡುವದಾಗಿಯೂ ತಿಳಿಸಿದರು.

ಶಸ್ತ್ರ ಚಿಕಿತ್ಸೆಗಾಗಿ ಸಿದ್ಧತೆ ನಡೆಸಲಾಯಿತು. ಆತನನ್ನು ಎತ್ತಾಡುವದನ್ನು ತಪ್ಪಿಸಲೆಂದು ಮಂಚವನ್ನೇ ಆಪರೇಶನ್ ಥಿಯೇಟರಿಗೆ ಸಾಗಿಸಲಾಯಿತು. ನಾನೂ ಜೊತೆಗಿದ್ದೆ.

ಮಿದುಳಿನ ಶಸ್ತ್ರ ಚಿಕಿತ್ಸೆಯನ್ನು ನಾನೆಂದೂ ನೋಡಿರಲಿಲ್ಲ. ಜಟಿಲವಾದದ್ದು ಎಂದು ಮಾತ್ರ ಕೇಳಿದ್ದೆ. ಆತನ ನಾಡಿಯ ಮೇಲೆ ಕೈಯಿಟ್ಟುಕೊಂಡಿರಲು ನನಗೆ ತಿಳಿಸಲಾಯಿತು. ಬದಲಾವಣೆ ಏನಾದರೂ ಕಂಡ ಕೂಡಲೆ ನಾನು ಸರ್ಜನ್ನರಿಗೆ ತಿಳಿಸಬೇಕಾಗಿತ್ತು.

ಸರ್ಜನ್ನರು ಚುರುಕಿನಿಂದ ಶಸ್ತ್ರ ಚಿಕಿತ್ಸೆ ಪ್ರಾರಂಭಿಸಿದರು. ನಾಡಿ ಮಿಡಿತ ಹೆಚ್ಚತೊಡಗಿತ್ತು. ೭೦— ೮೦— ೯೦— ೮೦—೯೦ ಎಂದು ನಾನು ಉಚ್ಚರಿಸುತ್ತಲೇ ಇದ್ದೆ. ಸರ್ಜನರ ಕೆಲಸ ನಡೆದೇ ಇತ್ತು.

ನಾಡಿಮಿಡಿತ ಒಮ್ಮೆ ೧೬೦ಕ್ಕೇರಿತು. ನಂಬಲಿಕ್ಕಾಗಲಿಲ್ಲ. ಸರ್ಜನ್ನರಿಗೆ ತಿಳಿಸಿದೆ.

"ಹೆದರಬೇಡ ನರ್ಸ್, ಇದು ಸೂಕ್ಷ್ಮ ಘಟ್ಟ, ಒತ್ತಡ ನಿವಾರಿಸುತ್ತಿದ್ದೇವೆ. ಚನ್ನಾಗಿ ಕೆಲಸ ಸಾಗಿದೆ, ಶೀಘ್ರದಲ್ಲಿಯೆ ಪರಿಣಾಮ ಕಂಡು ಬರಬಹುದು." ಎಂದು ಮುಗುಳ್ನಗುತ್ತ ನುಡಿದ ಡಾಕ್ಟರ.

ಕೊನೆಗೊಮ್ಮೆ ಶಸ್ತ್ರ ಚಿಕಿತ್ಸೆ ಮುಗಿದು ಗಾಯವನ್ನು ಹೊಲಿಯಲಾಯಿತು.

"ಆತನಿಗೆ ಒಂದು ಕಪ್ ಚಹ ಕೊಡಬಹುದು. ವಾರ್ಡಿಗೆ ಒಯ್ಯಿರಿ" ಎಂದು ಸರ್ಜನ ಹೊರಟು ಹೋದ.

ಲಿಫ್ಟಿನಲ್ಲಿ ಮತ್ತೆ ಆತನನ್ನು ವಾರ್ಡಿಗೆ ತರಲಾಯಿತು. ನರ್ಸ್‌ಗಳು ಕಿಟಕಿಗಳನ್ನೆಲ್ಲ ತೆರೆದಿಟ್ಟು ನಸುಕಿನ ಕಾರ್ಯಕ್ರಮಗಳಲ್ಲಿ ಚಟುವಟಿಕೆಯಿಂದ ನಿರತರಾಗಿದ್ದರು. ಆಪರೇಶನ್ ಥಿಯೇಟರಿನಲ್ಲಿ ಮೂರು ಗಂಟೆ ಕಾಲ ಕಳೆದು ಹೋದದ್ದೇ ನನ್ನ ಗಮನಕ್ಕೆ ಬಂದಿರಲಿಲ್ಲ.

ಮುಂದೊಂದು ಗಂಟೆಯಲ್ಲಿ ಹಗಲಿನ ಪಾಳಿಯವರು ಬಂದು ನನ್ನನ್ನು ಬಿಡುಗಡೆ ಮಾಡಿದರು.

ಮತ್ತೆ ಸಂಜೆಗೆ ನಾನು ಕೆಲಸಕ್ಕೆ ಬಂದಾಗ ಆ ಮಂಚದ ಸುತ್ತಲೂ ಪರದೆಗಳು ಇದ್ದುದನ್ನು ಕಂಡೆ. ಆ ಹುಡುಗ ಇನ್ನೂ ಜೀವಿಸಿದ್ದುದನ್ನು ಕಂಡು ನನಗೆ ಆಶ್ಚರ್ಯವಾಯಿತು. ಆದರೆ ಮೈಮೇಲೆ ಪ್ರಜ್ಞೆ ಇರಲಿಲ್ಲ. ಆ ನಿಶ್ಚೇತನ ಅವಸ್ಥೆಯಲ್ಲಿಯೇ ಆತ ನಾಲ್ಕು ದಿನಗಳನ್ನು ಕಳೆದ. ನಿಧಾನವಾಗಿ ಶಕ್ತಿ-ಕೂಡಿ ಬರುತ್ತಿತ್ತು. ಅತ್ತಿತ್ತ ತುಸು ಚಲಿಸಿದಂತೆ ಮಾಡುತ್ತಿದ್ದ.

ಅಂದು ರಾತ್ರಿ ಮೂರು ಗಂಟೆಯ ಸುಮಾರಕ್ಕೆ ತಂದೆಯು ನನ್ನ ಮೇಜಿನ ಹತ್ತಿರ ಬಂದು, "ಆತ ಪಿಸುಕಾಡುತ್ತಿದ್ದಾನೆ ನರ್ಸ್, ಏನೋ ಹೇಳಬಯಸುತ್ತಿದ್ದಾನೆ ಎಂದು ಆತುರದಿಂದ ನುಡಿದ.

ನಾನು ಮಂಚದ ಹತ್ತಿರ ಹೋದೆ. ಆತ ಒಂದೆರಡು ಸಲ ಕಣ್ಣು ಮಿಟುಕಿಸಿದಂತೆ ಮಾಡಿ ನಿಚ್ಚಳವಾಗಿ ತೆರೆದ. ಅತ್ತಿತ್ತ ಹೊರಳಿಸಿ ತಂದೆಯನ್ನು ಕಂಡೊಡನೆ, "ಪಪ್ಪಾ ಪಪ್ಪಾ," ಎಂದು ಮೆಲು ದನಿಯಲ್ಲಿ ಸ್ಪಷ್ಟವಾಗಿ ಉಚ್ಚರಿಸಿದ.

ತಂದೆಯ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿಯತೊಡಗಿತು. ನನ್ನ ಕಣ್ಣಿಂದಲೂ ಒಂದು ಹನಿ ಜಾರಿತು. ಬರಬರುತ್ತ ಆತ ಹುಷಾರಾಗುತ್ತ ನಡೆದು ಗಂಡಾಂತರದ ಸೀಮೆಯಿಂದ ಈಚೆಗೆ ಬಂದು ಬಿಟ್ಟ.

ನಾನು ಒಂದು ವಾರ ರಜೆಯ ಮೇಲೆ ತೆರಳಿದೆ.

ರಜೆಯಿಂದ ಹಿಂತಿರುಗಿದ ನಂತರ ಕೂಡ ನನ್ನನ್ನು ಆ ಮೊದಲಿನ ವಾರ್ಡಿಗೇ ರಾತ್ರಿ ಪಾಳಿ ಕೆಲಸಕ್ಕೆ ಹಾಕಿದರು. ನಾನು ಅಂದು ಹೋಗಿ ಕೆಲಸಕ್ಕೆ ಹಾಜರಾದಾಗ ಕೆಲ ಸಂದರ್ಶಕರು ಇನ್ನೂ ವಾರ್ಡಿನಲ್ಲಿ ಸುಳಿದಾಡುತ್ತಿದ್ದರು. ಸಂದರ್ಶನದ ಅವಧಿ ಮೀರಿದ್ದರೂ ಅವರು ಅಲ್ಲಿದ್ದರು. ಮೂಲೆಯ ಮಂಚದ ಬಳಿ ಇದ್ದ ಮಹಿಳೆಯೊಬ್ಬಳು ಅವಸರದಿಂದ ಬೀಳ್ಕೊಂಡು ಹೊರಗೆ ಹೋದಳು.

ನಾನು ಮತ್ತೆ ನೋಡಿದೆ. ನನ್ನ ಕಣ್ಣುಗಳನ್ನೇ ನಂಬಲಿಕ್ಕಾಗಲಿಲ್ಲ. ಹೌದು, ಅದೇ ಹುಡುಗ! ಈಗ ಆತನ ತಲೆಯ ಬ್ಯಾಂಡೇಜನ್ನು ತೆಗೆದು ಹಾಕಲಾಗಿತ್ತು. ಗಾಯದ ಮೇಲೆ ಮಾತ್ರ ಪಟ್ಟಿ ಇತ್ತು.

ನಾನು ಆತನ ಮಂಚದ ಬಳಿಗೆ ಹೋದೆ. ಆತನ ಭೆಟ್ಟಿಗೆ ಬಂದವರು ಯಾರಿರಬಹುದು ?... ಛೇ ಇರಲಾರದು; ಚಿಕ್ಕಮ್ಮನೊ ಮತ್ತಾರೊ ಇದ್ದಿರಬಹುದು.

"ಹಲ್ಲೊ ನರ್ಸ್. ರಜೆಯ ಮೇಲಿದ್ದಿರಾ"? ಎಂದೇ ಆತನೆ ಮಾತನಾಡಿಸಿದ.

"ಹೌದು. ನೀವು ಈಗ ಹೇಗಿದ್ದೀರಿ?" ಎಂದು ಕೇಳುತ್ತ, ಆತನ ಕೇಸ್ ಶೀಟ್‌ನ್ನು ಎತ್ತಿಕೊಂಡೆ.

"ಹುಷಾರಾಗಿದ್ದೇನೆ. ಡಾಕ್ಟರರು ಎದ್ದು ಕುಳಿತುಕೊಳ್ಳಲೂ ಅಡ್ಡಾಡಲೂ ಅನುಮತಿ ನೀಡಿದ್ದಾರೆ,"

"ನಿಮ್ಮ ತಂದೆ ಹೇಗಿದ್ದಾರೆ? ಇಂದು ಸಂಜೆಗೆ ಬಂದಂತೆ ಕಾಣಲಿಲ್ಲ?" ಎಂದು ವಿಚಾರಿಸಿದರೂ ಭೆಟ್ಟಿಗೆ ಬಂದಿದ್ದ ಆ ಹೆಣ್ಣು ಮಗಳು ಯಾರೆಂದು ಕೇಳುವ ಧೈರ್ಯ ಮಾತ್ರ ಆಗಲಿಲ್ಲ.

"ಓ, ಆತನಿಗೆ ನೆಗಡಿಯಾಗಿದೆ ಅಂತೆ. ಅದಕ್ಕೆ ಇಂದು ಬಂದಿರಲಿಲ್ಲ."

ರೋಗಿಗಳ ಔಷಧ ತಯಾರಿಸಲು ನಾನು ನನ್ನ ಕೋಣೆಗೆ ತೆರಳಿದೆ. ಆತ ನನ್ನ ಬೆನ್ನ ಹಿಂದೆಯೆ ಬಂದ.

"ನನ್ನ ಭೆಟ್ಟಿಗೆ ಬಂದ ಹೆಣ್ಣು ಮಗಳ ಬಗ್ಗೆ ನಿಮಗೆ ಕುತೂಹಲ ಅಲ್ಲವೆ ? ಆಕೆಯನ್ನೇ ನೋಡುತ್ತ ಇದ್ದಿರಿ" ಎಂದ.

"ನಿಮ್ಮ ತಂದೆಯನ್ನು ಬಿಟ್ಟು ಬೇರಾರೂ ನಿಮ್ಮ ಭೆಟ್ಟಿಗೆ ಬರುತ್ತಿರಲಿಲ್ಲ." ಎಂದು ಮುಖ ತಗ್ಗಿಸಿಯೆ ಹೇಳಿದೆ.

"ನಿಜ ನರ್ಸ್. ಅಂದು ಅಪಘಾತವಾಗಿ ನನ್ನನ್ನು ಆಸ್ಪತ್ರೆಗೆ ತಂದ ದಿನ ನನ್ನ ತಾಯಿಗೆ ಹೇಳಿಕಳಿಸಿದ್ದರಂತೆ. ಆಕೆ ಬಂದು ತಂದೆಗೆ ಕಟು ಶಬ್ದಗಳನ್ನಾಡಿ ಹೋದಳಂತೆ."

"ಹೌದು, ನನಗೂ ನೆನಪಿದೆ. ನಿಮ್ಮ ಅಂದಿನ ಸ್ಥಿತಿಯನ್ನು ಕಂಡು ಆಕೆಗೆ ತುಂಬ ಆಘಾತವಾಗಿರಬೇಕು. ತಮ್ಮ ಪ್ರೀತಿ ಪಾತ್ರರಿಗೆ ಕೆಡುಕಾದಾಗ ಅನೇಕರು ವಿಚಿತ್ರ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಾರೆ." ಎಂದು ಮಾತು ಮುಗಿಸಲು ಪ್ರಯತ್ನಿಸಿದೆ. ನನ್ನ ಮನಸ್ಸನ್ನು ಬಿಚ್ಚಿ ತೋರಿಸುವ ಇಚ್ಛೆ ಇರಲಿಲ್ಲ. ಕಾರಣವೂ ಇರಲಿಲ್ಲ.

"ನಿಮಗೆ ಎಲ್ಲ ತಿಳಿಯುವುದೇ—ಒಳಿತು" ಎಂದು ಆತ ಹೇಳಹತ್ತಿದ.

"ನಾವು ಅವಳಿ ಜವಳಿ ಮಕ್ಕಳು. ನನ್ನ ಸೋದರ ಒಬ್ಬನಿದ್ದ. ನಾವು ಏಳು ವರ್ಷದವರಿದ್ದಾಗ ನಮ್ಮಲ್ಲೊಂದು ಭಾರಿ ಹಬ್ಬ ನಡೆಯಿತು. ನಮ್ಮನ್ನು ಕಂಡರೆ ನಮ್ಮ ತಾಯ್ತಂದೆಗಳಿಗೆ ತುಂಬ ಅಕ್ಕರೆ. ತಂದೆಯ ವೇತನದಲ್ಲಿ ನಮ್ಮನ್ನು ನೆಮ್ಮದಿಯಿಂದಿಡಲು ನಮ್ಮ ತಾಯಿ ಸಾಕಷ್ಟು ಪರಿಶ್ರಮಿಸಬೇಕಾಗುತ್ತಿತ್ತು. ಒಂದಿನ ಶಾಲೆ ಬಿಟ್ಟ ಕೂಡಲೆ ನನ್ನ ಸೋದರ ಉತ್ಸಾಹದಿಂದ ನೆಗೆಯುತ್ತ ಮನೆಗೆ ಧಾವಿಸಿದ. ರಸ್ತೆಯ ತಿರುವಿನಲ್ಲಿ ಭರದಿಂದ ಸ್ಕೂಟರೊಂದು ಬಂದು ಆತನಿಗೆ ಹಾಯ್ದು ಪ್ರಾಣಾಂತಿಕ ಗಾಯಗೊಳಿಸಿತು. ಆತನ ಮರಣದ ನಂತರ ನಮ್ಮ ತಾಯಿ ಸಂಪೂರ್ಣ ಬದಲಾಗಿಬಿಟ್ಟಳು. ನಾನು ತುಸು ಕಣ್ಮರೆಯಾದರೂ ಕಕ್ಕಾವಿಕ್ಕಿಯಾಗುತ್ತಿದ್ದಳು. ಶಾಲೆಯ ಗೆಳೆಯರೊಡನೆ ಪ್ರವಾಸಕ್ಕೆ ಹೋಗಲೂ ಬಿಡುತ್ತಿರಲಿಲ್ಲ. ಆಟಪಾಟಗಳಿಗೂ ಬಿಡುತ್ತಿರಲಿಲ್ಲ. ಹೀಗೆ ದಿನಗಳು ಉರುಳಿದವು. ನನ್ನ ತಂದೆ-ತಾಯಿಯರಲ್ಲಿ ಅಂತರ ಬೆಳೆಯುತ್ತ ನಡೆಯಿತು. ನಾನೇನು ಮಾಡಬಯಸಿದರೂ ತಾಯಿ ಕೆಕ್ಕರಗಣ್ಣಿನಿಂದ ನೋಡುತ್ತಿದ್ದಳು, ತಂದೆ ನನ್ನ ಬೆನ್ನು ತಟ್ಟುತ್ತಿದ್ದ. ಚಿಕ್ಕಪುಟ್ಟ ವಿಷಯಗಳಲ್ಲಿ ತಂದೆ ತಾಯಿಯ ಮಾತಿಗೆ ಸಮ್ಮತಿಸುತ್ತಿದ್ದ. ನಾನು ಬೆಳೆದಂತೆಲ್ಲ ವಂಚಿತನಾದವನಂತೆ ಭಾಸವಾಗಹತ್ತಿತು.

"ದೊಡ್ಡವನಾದಾಗ ನನಗೂ ಸ್ಕೂಟರ ಬೇಕು ಅನಿಸಹತ್ತಿತು. ತಾಯಿ ಒಪ್ಪಲಿಲ್ಲ. ತಂದೆ ಹೇಳಿದರೂ ಸಮ್ಮತಿಸಲಿಲ್ಲ. ಕೊನೆಗೆ ತಂದೆಯೆ ಧೈರ್ಯ ಮಾಡಿ ಸ್ಕೂಟರ ಕೊಡಿಸಿದ. ಮುಂದೇನಾಯಿತೆಂಬುದು ನಿಮಗೆಲ್ಲ ತಿಳಿದಿದೆ.

"ನನಗೆ ಎಚ್ಚರ ಬಂದ ನಂತರ ಮತ್ತು ನನಗೆ ಸಂಪೂರ್ಣ ಗುಣವಾಗುವುದೆಂದು ಡಾಕ್ಟರರು ಹೇಳಿದ ಬಳಿಕ ನನ್ನ ತಂದೆ ಮನೆಗೆ ಹೋದ, ಹೆಂಡತಿಯಿಂದ ಮುಂಕಾತ್ಫಲಗಳನ್ನೇ ನಿರೀಕ್ಷಿಸಿ. ನನಗೆ ಗುಣವಾಗುತ್ತದೆ ಎಂಬ ಸುದ್ದಿ ಕೇಳಿ ಆಕೆ ಹಿಂದಿನದೆಲ್ಲವನ್ನೂ ಮರೆತು ಬಿಟ್ಟಳು. ನನ್ನ ಸೋದರ ಸತ್ತಿದ್ದರಿಂದ ನನ್ನನ್ನು ಬಚ್ಚಿಡಬಾರದು ಎಂದು ಆಕೆಗೆ ಈಗೀಗ ತಿಳಿಯಹತ್ತಿತ್ತು. ಆಕೆ ಚಿಂತಿಸಿದಷ್ಟು ಸಂಕಟಗಳು ಹೆಚ್ಚುತ್ತಲೇ ಹೋಗುವವು ಎಂದೂ ಆಕೆಗೆ ಅನಿಸಿತು. ಈ ನನ್ನ ಅಪಘಾತದಿಂದ ಅವರಿಬ್ಬರೂ ಹತ್ತಿರವಾದರಲ್ಲ, ಅಷ್ಟೇ ನನಗೆ ಸಂತೋಷ."

"ನಿಮ್ಮ ತಂದೆ ಇಂದು ರಾತ್ರಿ ಬರಲಿಲ್ಲ ?" ಎಂದು ಕೇಳಿದೆ.

"ನೆಗಡಿಯಾಗಿದೆಯಂತೆ. ಅಂತೇ ಆತ ಬಂದಿಲ್ಲ. ಇಲ್ಲದಿದ್ದರೆ ಪ್ರತಿದಿನ ಇಬ್ಬರೂ ಬಂದು ಹೋಗುತ್ತಾರೆ" ಎಂದು ತಿಳಿಸಿದ.

ಮುಂದೆ ಅನೇಕ ದಿನಗಳ ವರೆಗೆ ನಾನು ನಿರೀಕ್ಷಿಸುತ್ತಲೇ ಇದ್ದೆ. ಅವರಿಬ್ಬರೂ ಸಂಜೆಗೆ ಬಂದು, ಮಗನ ಮಂಚದ ಮೇಲೆ ಕುಳಿತು, ಆತನೊಡನೆ ಹರಟೆ ಕೊಚ್ಚಿ ಹಿಂತಿರುಗುತ್ತಿದ್ದರು.

ಕೊನೆಗೊಮ್ಮೆ ಆ ಹುಡುಗ ಸಂಪೂರ್ಣ ಗುಣ ಹೊಂದಿ ಆಸ್ಪತ್ರೆಯಿಂದ ಹೊರಬೀಳುವ ದಿನ ತಾಯ್ತಂದೆಗಳಿಬ್ಬರೂ ಆತನನ್ನು ಕರೆದೊಯ್ಯಲು ಬಂದಿದ್ದರು. ಇಷ್ಟು ವರ್ಷ ಹಾಳು ಮಾಡಿಕೊಂಡರೂ ಅವರ ಮುಂದಿನ ವರ್ಷಗಳು ಸುಖಮಯವಾಗಬಲ್ಲವು ಎಂದು ಸಮಾಧಾನ ಹೊಂದಿದೆ. ✡

# ಈ ಸಂಗೀತ ಕಚೇರಿಗಳು

ಎಸ್. ಪ್ರಹ್ಲಾದರಾವ್

ನನ್ನ ಆಪ್ತ ಮಿತ್ರರಾದ ಶ್ರೀಮಾನ್ ರಾಯರು ಈ ಪ್ರಶ್ನೆ ಕೇಳಿರುವುದರಿಂದ ನಾನು ಎರಡು ಸಾರಿ ಯೋಚಿಸಿ ಉತ್ತರ ಕೊಡಬೇಕಾಗಿದೆ. ರಾಯರಿಗೆ ಇಂಥ ಪ್ರಶ್ನೆ ಕೇಳುವ ಅಧಿಕಾರ ಸಂಪೂರ್ಣವಾಗಿ ಉಂಟು. ಅವರಿಗೆ ಸಂಗೀತದಲ್ಲಿ ಒಳ್ಳೆಯ ಅಭಿರುಚಿ ಇದೆ. ಮದರಾಸಿನಲ್ಲಿ ಇದ್ದ ವರ್ಷಗಳಲ್ಲಿ ಯಾವ ಸಂಗೀತ ಕಚೇರಿಗೂ ಅವರು ತಪ್ಪಿಸಿಕೊಂಡವರಲ್ಲ. ಈ ಇಪ್ಪತ್ತೈದು ವರ್ಷಗಳಲ್ಲಿ ಪ್ರಸಿದ್ಧರೆನಿಸಿದ ಸಂಗೀತಗಾರರ ಎಲ್ಲ ಕಚೇರಿಗಳಿಗೂ ಅವರು ಹೋಗಿದ್ದಾರೆ. ಈಗ ಮೈಸೂರಿನಲ್ಲಿ ಅವರು ಒಂದೆರಡು ಸಂಗೀತ ಮಂಡಳಿಗಳ ಸದಸ್ಯರು. ಸ್ವತಃ ಒಂದು ಮಂಡಳಿಯನ್ನು ಕಟ್ಟಿ ನಿರ್ವಹಿಸಿದ ಅನುಭವ ಅವರಿಗಿದೆ. ನನ್ನ ಅವರ ಪರಿಚಯವಾದ ಮೇಲೆ ತಾವು ಹೋಗಬಯಸಿದ ಕಚೇರಿಗಳಿಗೆಲ್ಲ ನನ್ನನ್ನು ಅವರು ಹೃತ್ಪೂರ್ವಕವಾಗಿ ಆಹ್ವಾನಿಸಿದ್ದಾರೆ. ನಾನಾದರೋ ಎಂದೂ ಅವರಿಗೆ ಬರುವುದಿಲ್ಲವೆಂದು ಹೇಳಿಲ್ಲ. ಅವರು ಕೇಳಿದ ಚಂದಾಹಣವನ್ನು ಸ್ವಪ್ರೇರಣೆಯಿಂದ ಕೊಟ್ಟಿದ್ದೇನೆ. ಖಂಡಿತ ಬರುವುದಾಗಿ ವಾಗ್ದಾನ ಮಾಡಿದ್ದೇನೆ. ಆದರೆ ಎಂದೂ ಯಾವ ಕಚೇರಿಗೂ ಹೋಗಿಲ್ಲ. ಇದು ಪರಿಸ್ಥಿತಿ. ಇಲ್ಲಿ ತಪ್ಪು ನನ್ನದೇ ಎನ್ನುವುದಂತೂ ಸ್ವಯಂಸ್ಪಷ್ಟ. ಆದರೆ ಕಚೇರಿಗೆ ಹೋಗುವ ಮೋಹನೀಯರಿಗೆ ಹತ್ತು ಕಾರಣಗಳಿದ್ದರೆ ಹೋಗದಿರುವ ನನ್ನಂಥವರಿಗೆ ನಾಲ್ಕಾದರೂ ಸರಿಯಾದ ಕಾರಣಗಳಿರಬೇಕಲ್ಲವೆ?

ಬಿಡದೆ ಕಚೇರಿಗಳಿಗೆ ಹೋಗಿ ಬರುವ ರಾಯರ ಅಭಿಪ್ರಾಯವನ್ನೇ ನೋಡಿ. ಹತ್ತಿಪ್ಪತ್ತು ಕಚೇರಿಗಳಲ್ಲಿ ಒಂದು ಸಾಧಾರಣ ಚೆನ್ನಾಗಿದ್ದರೆ ನಮ್ಮ ಪುಣ್ಯ. ಇದು ಅವರಂತೆ ಅನೇಕರ ಅನುಭವಕ್ಕೆ ಬಂದಿರುವ ವಿಷಯವೇ. ಎಲ್ಲದರ ಮಟ್ಟವೂ ಇಳಿದಿರುವಂತೆ ಸಂಗೀತದ ಮಟ್ಟವೂ ಇಳಿದಿದೆ. ಈಚಿನ ವಿದ್ವಾಂಸರು ಮಾಡುತ್ತಿರುವುದೇನು? ಅದೇ ರಾಗಗಳು. ಅದೇ ಆಲಾಪನೆ, ಅದೇ ಕೀರ್ತನೆಗಳು. ಸಾಲದ್ದಕ್ಕೆ ಅವಸರ- ಕಚೇರಿಗೆ ಕಳೆ ಕಟ್ಟುವಷ್ಟರಲ್ಲಿಯೇ ಕಚೇರಿ ಮುಗಿದು ಹೋಗಿರುತ್ತದೆ. ಅಲ್ಪಸ್ವಲ್ಪ ರಾಗಛಾಯೆಗಳನ್ನು ತೋರಿಸುವುದು, ಕೀರ್ತನೆಯನ್ನು ಅನ್ನುವುದು, ನಾಲ್ಕು ಪುಡಿ ಹೊರಬಿಡುವುದು, ಅಷ್ಟರಲ್ಲಿ ಮಂಗಳ. ಕೆಲವರಂತೂ ಜನಪ್ರಿಯತೆಗಾಗಿ ಲಘು ಗೀತೆಗಳನ್ನು ಹೇರಳವಾಗಿ ಹಾಡಿ ಕಚೇರಿ ಮುಗಿಸುವುದುಂಟು. ಕೀರ್ತನೆಗಳಲ್ಲಾದರೂ ವೈವಿಧ್ಯ ಬೇಡವೆ? ಮೂವತ್ತು ವರ್ಷಗಳಿಂದ ತಾವು ಹಾಡಿ ಹಾಡಿ ಬೇಸತ್ತ ಹಾಡುಗಳನ್ನೇ ಮತ್ತೇ ಹಾಡುತ್ತಾರೆ. ಆದನ್ನೇ ಗ್ರಾಮಫೋನ್ ಕಂಪನಿಯಲ್ಲಿ ಧ್ವನಿಮುದ್ರಿಸಿಯೂ ಆಗಿರುತ್ತದೆ. ಆ ಮುದ್ರಿಕೆಗಳನ್ನು ರೇಡಿಯೋ ಮೂಲಕ ಕೇಳಿ ಕೇಳಿ ಬೇಸತ್ತ ಶ್ರೋತೃಗಳಿಗೆ



ಮತ್ತೆ ಕಚೇರಿಯಲ್ಲೂ ಅದೇ ಊಟ, ರಾಗಿ ರೊಟ್ಟಿ ತಿಂದು ಬೇಸತ್ತ ಅಳಿಯ ಮಾವನ ಮನೆಗೆ ಹೋದರೆ ಅಲ್ಲೂ ರಾಗಿ ಮುದ್ದೆಯನ್ನು ಮಾಡಿದರಂತೆ. ಹಾಗೆ, ಇದು ಅನೇಕ ಕಚೇರಿಗಳ ಕತೆ. ಜನಕ್ಕೆ ಬೇಕಾದ್ದನ್ನು ನಾವು ಹಾಡುತ್ತೇವೆ ಎಂದು ಕೆಲವು ವಿದ್ವಾಂಸರ ವಾದ. 'ಮೂಡ್' ಬರಲಿಲ್ಲ ಎಂದು ಕೆಲವರ ವಾದ.

ದೂರದಿಂದ ಅವರನ್ನು ಹಣ ಕೊಟ್ಟು ಕರೆಸುತ್ತೀರಿ. ಅದ್ದೂರಿಯಾಗಿ ಔತಣ ಮಾಡಿಸುತ್ತೀರಿ. ಜನ ದುಡ್ಡು ಕೊಟ್ಟು ಸಂಗೀತ ಕೇಳಲು ಬರುತ್ತಾರೆ. ಹೀಗಿರುವಾಗ ಆಹ್ವಾನಿತ ವಿದ್ವಾಂಸರು ಲಘುಮನೋಭಾವದಿಂದ ವರ್ತಿಸುವುದು ಸರಿಯೆ?

ಈಚೆಗೆ ಸಂಗೀತದಲ್ಲಿ ಸರ್ಕಸ್ ತಲೆಹಾಕಿರುವುದು ಬಹು ಶೋಚನೀಯವಾದ ಸಂಗತಿ. ಕೇವಲ ಚಮತ್ಕಾರ ಪ್ರಧಾನವಾದಾಗ ಸಂಗೀತ ಕೇವಲ ವ್ಯಾಯಾಮ ಪ್ರದರ್ಶನವಾಗುತ್ತದೆ. ಕಕಕಕ ಗಗಗಗ ದದದದ ಎಂದು ಸೌತೆಕಾಯಿ ಹೆಚ್ಚಿದ ಹಾಗೆ ಸ್ವರಗಳನ್ನು ಅನ್ನುವುದು, ಅದರೊಂದಿಗೆ ಮೃದಂಗದವನು ಸಾಮೀಲಾಗಿ ಧಪಧಪ ಬಡಿಯುವುದು. ಪಿಟೀಲಿನವನು ತಂತಿ ತುಂಡಾಗುವಂತೆ ಕತ್ತರಿಸುವುದು. ಹೀಗೆ ೧೮೦ ಮೈಲಿ ವೇಗದಲ್ಲಿ ಸಂಗೀತವ್ಯಾಘ್ರ ಓಡುತ್ತ ಮುಕ್ತಾಯ ಘಟ್ಟಕ್ಕೆ ಬಂದಾಗ ಮುಗ್ಧ ಜನ ಏನೋ ಪವಾಡವೇ ಆಯಿತು ಎನ್ನುವಂತೆ ಚಪ್ಪಾಳೆ ತಟ್ಟುವುದು! ಇದು ಯಾವ ಸಂಗೀತ ಕಚೇರಿ?

ನಮಗೆಲ್ಲ ಗೊತ್ತಿರುವ ಹಾಗೆ ಸಂಗೀತ ಶಾಸ್ತ್ರವೂ ಹೌದು, ಕಲೆಯೂ ಹೌದು. ಕಲೆಯಿಲ್ಲವಾಗ ಅದು ಸರ್ಕಸ್ಸು. ಪಾರಂಗತ ನಾದ ಮೇಲೆ ಅದು ಭರತ ನಾಟ್ಯ, ಅಚ್ಚರಿ ಅದರ ಗುರಿಯಲ್ಲ. ಆನಂದ ಸಹಜವಾಗಿ ಅದರ ಗುರಿ. ಕಲೆಗಾರನಲ್ಲಿ ಮೊದಲು ಅದು ಸಿದ್ಧಿಗೊಂಡು ಶ್ರೋತೃವಿಗೆ ಇಳಿದು ಬರಬೇಕು. ಹಿಂದೆ ಅನೇಕ ವಿದ್ವಾಂಸರಲ್ಲಿ ಇಂಥ ಪರಿಣತಿ ಇತ್ತು. ಅದಿಲ್ಲದವರು ಕಚೇರಿ ಕೊಡುತ್ತಿರಲಿಲ್ಲ. ಈಗ ಸ್ಥಿತಿ ಬದಲಾಗುತ್ತಿದೆ. ಸಂಗೀತ ಗಳಿಕೆಯ ಮಾಧ್ಯಮವಾಗಿದೆ. ಇತರ ಎಲ್ಲ ಕಲೆಗಳಂತೆ.

ಅಲೆ ವಿದ್ವಾಂಸರೂ ಸಾರ್ವಜನಿಕ ಕಚೇರಿಗಳನ್ನು ಕೊಡುತ್ತಾರೆ. ಎಲ್ಲಿ ನೋಡಲಿ, ಸಂಗೀತ ಸಭೆಗಳು, ಸಂಗೀತ ಕಚೇರಿಗಳು. ವಾರಕ್ಕೆ ಎರಡು. ರಾಮನವಮಿ, ಗಣೇಶನ ಮಂಗಳಾರತಿಗಳಿಂದಾಗಿ ಸಂಗೀತ ಜೋಳಕ್ಕಿಂತ ಕಡೆಯಾಗುತ್ತಿದೆ. ಗಲ್ಲಿಗಲ್ಲಿಗಳಲ್ಲಿ ಸಂಗೀತ ಕಚೇರಿ. ಜೊತೆಗೆ ಮೈಕಾಸುರನ ಹಾವಳಿ. ಬೇಡವೆಂದು ಓಡಿದರೂ ಸಂಗೀತ ನುಗ್ಗಿ ಬಂದು ಕಿವಿಗಳಿಗೆ ಗಿಡಿಯುತ್ತದೆ. ಮನೆಮನೆಗಳಲ್ಲಿ ರೇಡಿಯೋ. ಕಂಕುಳಲ್ಲಿ ರೇಡಿಯೋ. ಹೋಟಲುಗಳಲ್ಲಿ ರೇಡಿಯೊ. ಪಾನಿಪೂರಿ ಅಂಗಡಿಯಲ್ಲಿ ರೇಡಿಯೊ ಹೀಗಾಗಿ ಸಂಗೀತವನ್ನು ಕಂಡರೆ ನನಗೆ ಪರಮ ದ್ವೇಷ!

ಅಯ್ಯೋ ಸಂಗೀತ ಚೆನ್ನಾಗಿರುವುದು ಹಾಗಿರಲಿ, ಶ್ರುತಿಯೇ ಕೊನೆಯವರೆಗೂ ಕೂಡಲಿಲ್ಲ ಕಣ್ರೀ—ಎಂದು ರಾಯರು ಆಗಾಗ ಅನ್ನುವುದುಂಟು. ಶ್ರುತಿ ಕೂಡುವುದೆಂದರೆ ಸತಿಪತಿಗಳ ಮನಸ್ಸು ಕೂಡಿದ ಹಾಗೆ. ಹದವರಿತು ಶ್ರುತಿ ಮಾಡಿದ ತಂಬೂರಿಯನ್ನು ಕಿವಿಯ ಹತ್ತಿರ ಇಟ್ಟುಕೊಂಡು ಮೀಟುತ್ತಿದ್ದರೆ ಪರಮಾನಂದವಾಗುತ್ತದೆ. ಜ್ವರ ಬಂದಾಗ ಒಬ್ಬ ಮಹಾಶಯರು ತಂಬೂರಿ ಶ್ರುತಿಗೆ ಕಿವಿಗೊಟ್ಟುಕೊಂಡು ಕಣ್ಣು ಮುಚ್ಚಿ ಗಂಟೆ ಎರಡು ಗಂಟೆ ಕೂಡುತ್ತಿದ್ದರಂತೆ. ಕಣ್ಣಿಂದ ಧಾರಾಕಾರವಾಗಿ ಆನಂದಾಶ್ರು ಸುರಿಯುತ್ತಿತ್ತಂತೆ. ಶ್ರುತಿ ರಂಜಾಪಹಾರಿ ಪರಮ ಸಂತೃಪ್ತಿಕಾರಿ. ಪ್ರಕೃತಿಯ ಶ್ರುತಿಯೊಂದಿಗೆ ನಮ್ಮ ದನಿಯನ್ನು ಸೇರಿಸುವುದೇ ಸಂಗೀತದ ಮರ್ಮ. ಶ್ರುತಿಯೊಡನೆ ಸೇರುವುದು ಸುಲಭವಾದ ಕಾಯಕವೇನಲ್ಲ: ಒಮ್ಮೆ ಸೇರಿದರಾಯಿತು, ನಮ್ಮ ಸರ್ವಸ್ವವನ್ನೂ ಅದು ನುಂಗಿ ನೊಣೆದು ಬಿಡುತ್ತದೆ. ಸ ಪ ಸ ಗಳ ನಮ್ಮ ಆಟವೆಲ್ಲ ಶ್ರುತಿಯ ಕ್ಷೇತ್ರದಲ್ಲೇ ನಡೆಯಬೇಕು. ಮೀನು ನೀರಿಗೆ ಬಿದ್ದಂತೆ. ನೀರಿನಲ್ಲಿ ಏನೆಲ್ಲ ಆಟಗಳನ್ನೂ ಅದು ಆಡಬಲ್ಲುದು. ಗುರುತ್ವಾಕರ್ಷಣೆಗೆ ಒಳಗಾದ ಜೀವಿ ಭೂಮಿಯ ಮೇಲೆ ವೈವಿಧ್ಯಮಯವಾದ ಜೀವನವನ್ನು ಸ್ವೇಚ್ಛೆಯಾಗಿ ನಡೆಸುವಂತೆ ಶ್ರುತಿಗಳಪಡದ ಸಂಗೀತ ಬತ್ತ ಮೊಸರು ಕಲಿಸಿ ತಿಂದಂತೆ!

ತಾಳವನ್ನು ಸಂಗೀತಗಾರರ ಮಿಂಡ ಎನ್ನುವುದುಂಟು. ಕೆಲವರಿಗಂತೂ ತಾಳ ಬೇತಾಳ ಇದ್ದಂತೆಯೆ. ಅದನ್ನು ಹಿಡಿದಿಡುವುದರಲ್ಲೇ ಅವರ ಶ್ರಮವೆಲ್ಲ ಅಪವ್ಯಯವಾಗುತ್ತದೆ. ತೊಡೆಯ ಮೇಲೆ ಅವರು ತಟ್ಟಿಕೊಳ್ಳುವುದನು ಗಮನಿಸಿ. ಪಿಟೀಲಿನವನು ಕೊಯ್ದು ಕೊಯ್ದು ತಾಳವನ್ನು ತೋರಿಸುತ್ತಾನೆ. ತಬಲದವನು ಬಡಿದು ಬಡಿದು ತಲೆ ಹಾಕಿ ಹಾಕಿ ಅದನ್ನು ಹಿಡಿಯಲು ಪ್ರಯತ್ನಿಸುತ್ತಾನೆ. ತಾಳದವನಂತೂ ಎದ್ದುಬಿದ್ದು ಹಾರಿ ಅದನ್ನು ನಿಯಂತ್ರಿಸುತ್ತಾನೆ. ಮುಂದೆ ಕೂತ ಸಹೃದಯ ಪ್ರೇಕ್ಷಕರಂತೂ ಚಪ್ಪಾಳೆ ತಟ್ಟುತ್ತ, ಚಿಟಿಕೆ ಹೊಡೆಯುತ್ತ ಹೆಬ್ಬೆರಳಿಗೆ ತೋರುಬೆರಳನ್ನು ತಾಗಿಸುತ್ತ ನುಣುಚಿಹೋಗುವ ತಾಳವನ್ನು ತೆರುಬಿ ಹಿಡಿಯಲು ಯತ್ನಿಸುತ್ತಾರೆ. ಅಂತೂ ಮೂರನೆಯ ಕಾಲದಲ್ಲಿ ಮುಕ್ತಾಯ ಬೀಳುವ ಹೊತ್ತಿಗೆ ಸಂಗೀತಗಾರರ (ಹಾಗೂ ಸಭಿಕರ) ಪ್ರಾಣ ಹಾರಿ ಹೋಗಿರುತ್ತದೆ. ಆದರೆ ತಾಳವೊ ? ಇವರಾರ ಏಟಿಗೂ ಸಿಕ್ಕದೆ ನೊಣದಂತೆ ಜೀವಸಹಿತ ಹಾರಿಹೋಗಿರುತ್ತದೆ!

ಈ ಗಲಭೆಯ ನಡುವೆ ಸಂಗೀತದ ಸ್ಥಿತಿ ಹೇಗೆ ಆಗುತ್ತದೆ ಎಂಬುದನ್ನು ನಮ್ಮ ಹಿರಿಯ ವಿದ್ವಾಂಸರು ಹೀಗೆ ವರ್ಣಿಸುತ್ತಾರೆ. ಕೇಳಿ:

"ಸ ಭಾ ನಾ ಯ ಕ ನಾ ದ ವಿದ್ವಾಂಸ ಯಾವುದೋ ಜಾತಿಗೆ ಸೇರಿದ ಯಾವುದೋ ತಾಳದಲ್ಲಿ ಪಲ್ಲವಿ ಎತ್ತಿ, ಬೇರೆ ಬೇರೆ ವಿಚಿತ್ರ ವಿನ್ಯಾಸಗಳಿಂದ ಜಾತಿಭೇದಗಳನ್ನು ತೋರುವಾಗ ತಾಳ ತಪ್ಪಿ ಹೋಗುವುದೆಂಬ ಭಯದಿಂದ ಮುಖವೆಲ್ಲವೂ ಬೆವರಿ ಹೋಗುತ್ತಿರಲು, ತೊಡೆಯ ಮೇಲೆ ತೊಗಲೇಳುವ ಹಾಗೆ ಕೈ ತಟ್ಟುತಾ, ಮುಖವನ್ನು ಮುಂಡಿ ಹಾಕಿ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು, ನರಗಳೆಲ್ಲವನ್ನೂ ಬಿಗಿ ಮಾಡಿಕೊಂಡು, ಗಂಟಲು ಒಣಗಿ ಗರಸಾಗುತ್ತಿರಲು, ಕೈಗಳನ್ನು ಬೀಸುತ್ತ ಮಾಡುವ ವಿಕಾರಗಳ ಜೊತೆಗೆ ಪಿಟೀಲು ಮೃದಂಗಗಳವರೂ ಹೀಗೆ ಒಬ್ಬರನ್ನು ಮೀರಿಸಿ ಇನ್ನೊಬ್ಬರು ಮಾಡುತ್ತಿರುವ ಕರಕರ

ಡಮಡಮ ಧ್ವನಿಗಳೊಡನೆ, ಸಭ್ಯರಲ್ಲಿ ಇಂಥ ವೀರಾವೇಶವುಳ್ಳವರು ಕೆಲವರು ಶಾಸ್ತ್ರಾನುಸಾರ ತಾಳವನ್ನು ಕೈಗಳಿಂದ ತಟ್ಟುವ ಪಟಪಟ ಧ್ವನಿಗಳೂ ಸೇರಿ ನಾದ ನಶಿಸಿ, ಲಯ ಲಯಿಸಿ ಯಾತ್ತದೋ. ನಿರ್ಘೋಷವೊಂದು ಕಿವಿಗಳನ್ನು ದಿಮ್ಮು ಹಿಡಿಸುತ್ತಿರಲು—ಇಂಥ ಸಂಗೀತದ ಜಂಝಾವಾತದಲ್ಲಿ ಭಾವಕ್ಕೂ ರಸಕ್ಕೂ ಭ್ರಾಂತಿಪಟ್ಟು ಬಂದ ರಸಿಕರಿಗೆ ಬೇಸರವಲ್ಲದೆ ಇನ್ನೇನು ಬಂದೀತು?...

ಸಂಗೀತ ಕಚೇರಿ ಸರ್ಕಾರಿ ಕಚೇರಿಯಷ್ಟು ಜುಗುಪ್ಸೆ ತರುವುದಾದರೆ ಅದಕ್ಕೆ ಹೋಗಬೇಕೇಕೆ?

ಸಾಲದುದಕ್ಕೆ ಅನೇಕ ಸಂಗೀತ ಸಭೆಗಳಲ್ಲಿ ಸ್ವಾಗತ, ಪರಿಚಯ, ಅಧ್ಯಕ್ಷ ಭಾಷಣ, ಪ್ರಶಂಸಾಭಾಷಣ, ವಂದನಾರ್ಪಣೆಗಳೆಂಬ ಕಾರ್ಯಕ್ರಮಗಳಿರುತ್ತವೆ– ಮೊದಲೇ ಕೆಟ್ಟಿರುವ ಪಾಯಸದಲ್ಲಿ ನಾಯಿಬಾಲ ಅದ್ದಿದ ಹಾಗೆ.

ನನ್ನ ಹಾಗೆಯೇ ಸಂಗೀತ ಕಚೇರಿಗಳಿಗೆ ಹೋಗದಿರುವ ಇತರ ಮಹನೀಯರುಗಳಿದ್ದಾರೆ. ಆದರೆ ಅವರು ಕೊಡುವ ಕಾರಣ ಬೇರೆ. ವಿದ್ವಾಂಸನನ್ನು ಕಂಡರೆ ವಿದ್ವಾಂಸನಿಗೆ ಆಗುವುದಿಲ್ಲ. ಕವಿಗೆ ಕವಿ ಮುನಿವಂ ಎಂದು ನಮ್ಮ ಕವಿ ಹೇಳಿಲ್ಲವೆ? ಅವನ ಕಚೇರಿಗೆ ನನ್ನಂಥ ವಿದ್ವಾಂಸ ಹೋಗಬೇಕೆ? ಹೋದರೆ ನನಗೆ ಅವಮಾನ—ಎಂದು ಅನೇಕ ವಿದ್ವಾಂಸರೇ ಕಚೇರಿಗಳಿಗೆ ಬರುವುದಿಲ್ಲ. ಇದಕ್ಕೆ ಏನು ಹೇಳಬೇಕು;

ಇನ್ನು—ಸಂಗೀತಕ್ಕೆ ಹೋಗುವವರೆಲ್ಲರೂ ನಿಜವಾದ ರಸಿಕರು ಎಂದು ಹೇಳಲಿಕ್ಕೂ ಬಾರದು. ತಮ್ಮ ಮಗಳೋ ಸೊಸೆಯೋ ಹೆಂಡತಿಯೋ ಗಂಡನೋ ಹಾಡುತ್ತಾರೆಂದು ಅವರ ಬಂಧುಬಳಗದವರು ಬರುತ್ತಾರೆ. ಶೋಕಿಗೆಂದು ಕೆಲವರು ಬರುತ್ತಾರೆ. ಬೇರೆಯ ಒಳ್ಳೆಯ (?) ಹವ್ಯಾಸವಿಲ್ಲದವರಿಗೆ ಸಂಗೀತವೇ ಗತಿ. ಸಮಾಜದಲ್ಲಿ ತಾವು ಸುಸಂಸ್ಕೃತರೆಂದು ತೋರಿಸಲು ಕೆಲವರು ಬರುತ್ತಾರೆ. ಸಂಗೀತ ಎಂದಿನಂತೆ ಇಂದೂ ಚೆನ್ನಾಗಿರುವುದಿಲ್ಲವೆಂಬ ಪರಮ ಸತ್ಯವನ್ನು ಸ್ಥಿರೀಕರಿಸಿಕೊಳ್ಳಲು ಕೆಲವರು ಬರುತ್ತಾರೆ. ಕನ್ನಡಿಗರಲ್ಲದ ಜನರೆಲ್ಲ ಸಂಗೀತದಲ್ಲಿ ನಿಷ್ಣಾತರು ಎಂಬ ತಪ್ಪು ಕಲ್ಪನೆ ಕೆಲವರಿಗೆ. ಒಳ್ಳೆಯ ಸಂಗೀತಗಾರ ಯಾವಾಗ ಹಾಡಿದರೂ ಚೆನ್ನಾಗಿಯೇ ಹಾಡುತ್ತಾನೆ ಎಂಬ ನಿರ್ಧಾರ ಕೆಲವರದು. ಅವನಿಗಿಂತ ನಾನು ಮೇಲು ಎಂದು ಮಾರನೆಯ ದಿನದಿಂದ ಹೇಳಿಕೊಂಡು ಮೆರೆಯಬಹುದಲ್ಲ ಎಂಬ ದೂರಾಲೋಚನೆ ಕೆಲವರದು. ಇನ್ನು ಅಧ್ಯಕ್ಷರು, ಕಾರ್ಯದರ್ಶಿ, ಪಕ್ಕವಾದ್ಯದವರು ಜಮಖಾನೆಯವರು—ಇಂಥವರಿಗೆ? ಹಾಜರಿ ಕಡ್ಡಾಯ!

ಇಂಥವರು ಒಳ್ಳೆಯ ಸಂಗೀತಗಾರರು, ಇವರ ಈ ಸಂಗೀತ ಚೆನ್ನಾಗಿತ್ತು; ಇಂಥವರು ಕಳಪೆ, ಇವರ ಈ ಸಂಗೀತ ಚೆನ್ನಾಗಿರಲಿಲ್ಲ—ಹೀಗೆಂದು ನಾನು ಬಾಯಿಬಿಟ್ಟು ಹೇಳುವ ಹಾಗಿಲ್ಲ. ಎರಡರಿಂದಲೂ ನನಗೆ ತೊಂದರೆಯೆ. ಇವರದ್ದು ಚೆನ್ನವೆಂದರೆ ಉಳಿದವರಿಗೆ ಅಸೂಯೆ, ಇವರದ್ದು ಕೆಟ್ಟದೆಂದರೆ ನನ್ನ ಮೇಲೆ ಅವರ ದ್ವೇಷ. ನಮ್ಮಂಥವರ ಸ್ಥಿತಿ ಹೇಗೆ ಎಂದರೆ ಜನಾನಾದಲ್ಲಿರುವ ಖೋಜದೂತರ ಹಾಗೆ. ಏನು ತಪ್ಪಿದೆ ಎಂಬುದು ನಮಗೆ ಗೊತ್ತು. ಆದರೆ ಅದನ್ನು ಸರಿಪಡಿಸುವ ಯೋಗ್ಯತೆ ಮಾತ್ರ ನಮಗಿಲ್ಲ.

ಸಂಗೀತ ಕಲಿಯದಿದ್ದುದು ನನ್ನ ಅನೇಕ ಸೋಲುಗಳಲ್ಲಿ ಒಂದು. ನಿಮ್ಮ ಶಾರೀರ ಚೆನ್ನಾಗಿದೆ ಎಂದು ಕೆಲವರು ಅಂದರು. ನಿಮಗೆ ತಾಳ ಜ್ಞಾನ ಇಲ್ಲದಿಲ್ಲ ಎಂದು ಕೆಲವರು ಅಂದರು. ರಾಗಗಳನ್ನು ಅವೆಷ್ಟು ನವುರಾಗಿ ಅನುಕರಣ ಮಾಡುತ್ತೀರಿ ಎಂದು ಕೆಲವರು ಪ್ರಶಂಸಿಸಿದರು. ಶ್ರುತಿಪೆಟ್ಟಿಗೆ ಕೊಂಡದ್ದಾಯಿತು. ಮಡಿಕೇರಿಯಲ್ಲಿ ಅದು ಮುಗ್ಗಿ ಹಾಳಾಯಿತು. ದೊಡ್ಡ ತಂಬೂರಿ ಕೊಂಡೆ, ಗಮಕ ಕಲಿತೆ. ಒಂದೂವರೆ ವರ್ಷದ ನನ್ನ ಮಗನಿಗೆ ಕುಮಾರವ್ಯಾಸನ ಮೊದಲ ಹದಿನೈದು ಪದ್ಯಗಳು ಕಂಠಗತವಾದವು ಅಷ್ಟೆ. ನನ್ನ ಗಮಕ ಕೈಬಿಟ್ಟುಹೋಯಿತು. ಬೆಳೆಯುತ್ತಿದ್ದ ನನ್ನ ಹಿರಿಯ ಮಗಳ ಹೃದಯಾಂತರಾಳದಲ್ಲಿ

ಸಂಗೀತದ ಕಳೆ ಆಡುತ್ತಿದ್ದುದನ್ನು ಗುರುತಿಸಿದೆ. ತಂಬೂರಿಯನ್ನು ಅವಳಿಗೆ ಕೊಟ್ಟೆ. ಒಳ್ಳೆಯ ಸಂಗೀತ ವಿದುಷಿಯಾಗುತ್ತಾಳೆಂಬ ಭರವಸೆಯಿಂದ ಅವಳನ್ನು ಪ್ರೋತ್ಸಾಹಿಸಿದೆ. ಆದರೆ ಅವಳು ಆ ಸ್ತರಕ್ಕೆ ಏರಲಿಲ್ಲ. ಬಹಳ ಬೇಸರವಾಯಿತು. ಅಷ್ಟರಲ್ಲಿ– ನನ್ನ ಜೀವನ ಸಂಗೀತದಲ್ಲೇ ಶ್ರುತಿ ತಪ್ಪಿ ಹೋಗುವ ಕಾಲ ಬಂದುಬಿಟ್ಟಿತು. ತಂಬೂರಿಯೊಂದು ಕಡೆ, ನಾವೊಂದು ಕಡೆ. ಎತ್ತು ಕೋಣ ಸೇರಿ ಗಾಡಿ ಎಳೆದ ಹಾಗಾಯಿತು. ತಂಬೂರಿಯ ಒಂದೊಂದೂ ತಂತಿ ಕಿತ್ತು– ಹೋಗಿ ಅದರ ಬುರುಂಡೆ ಒಡೆದು ಹೋಯಿತು. ಮತ್ತದರ ರಿಪೇರಿ ಆಗಲೇ ಇಲ್ಲ. ಆಲಾಪನೆಯಾಗಬೇಕಾಗಿದ್ದ ನನ್ನ ಸಂಗೀತ ಪ್ರಲಾಪವಾಯಿತು. ನನ್ನ ಹಾಡೊಂದನ್ನೇ ಕೇಳದ ನನ್ನ ಅನೇಕ ಮಿತ್ರರಿಗೆ ನನ್ನ ಪಾಡೇನು ಎಂಬುದು ತಿಳಿಯದು. ಬರಬರುತ್ತ ನನ್ನ ಮನೋಧರ್ಮಕ್ಕೆ ಯಾವ ಸಂಗೀತವೂ ಹಿಡಿಸದಾಯಿತು. ತಂಬೂರಿ ಇಂದು ನನ್ನ ಗೆಳೆಯರ ಮನೆಯಲ್ಲಿದೆ. ಈಗ ರೇಡಿಯೋ ತಿರುಗಿಸುವವರನ್ನು ಕಂಡರೆ ಉರಿದು ಬೀಳುತ್ತೇನೆ. ಮಾತು, ಸಂಗೀತ, ನಾಟಕ–ಯಾವುದೂ ನನ್ನ ಮನಸ್ಸಿಗೆ ಹಿಡಿಸುತ್ತಿಲ್ಲ. ಇಂಥದರಲ್ಲಿ ಸಂಗೀತ ಕಚೇರಿಗಳಿಗೆ ಏಕೆ ಬರುವುದಿಲ್ಲವೆಂದು ಕೇಳಿದರೆ ನಾನೇನು ಹೇಳಲಿ.

ಕಚೇರಿಯೇ ಬೇಡವಾಗಿರುವಾಗ ಈ ಸಂಗೀತ ಕಚೇರಿ ಯಾರಿಗೆ ಬೇಕು;

ಸಂಗೀತ ಕಚೇರಿಗಳ ವಿಷಯದಲ್ಲಿ ಈ ಕೆಲವು ಅಂಶಗಳನ್ನು ಗಮನಿಸುವುದು ಒಳ್ಳೆಯದು.

ನನ್ನಂತೆ ಆಲೋಚಿಸುವ ಅನೇಕರ ಅಭಿಪ್ರಾಯಗಳಿವು:

(೧) ಕಚೇರಿ ಘನವಾಗಿರಬೇಕು. ಲಘು ಸಂಗೀತ, ಪುಡಿ–ಸಲ್ಪ ಇರಲಿ. ಕಡೆಯ ಪಕ್ಷ ಒಂದು ರಾಗದ ವಿಸ್ತಾರ, ತಾನ ಪಲ್ಲವಿ ನಾಲ್ಕು ರಾಗಗಳ ವಿಸ್ತೃತ ಆಲಾಪನೆ–ಇಷ್ಟಾದರೂ ಇದ್ದೇ ತೀರಬೇಕು.

(೨) ಕಚೇರಿ ಚರ್ವಿತ ಚರ್ವಣವಾಗಬಾರದು. ಹೊಸ ಪ್ರಯೋಗಗಳಿಗೆ ಅಲ್ಲಿ ಅವಕಾಶವಿರಬೇಕು. ಹಾಗಿಲ್ಲದಲ್ಲಿ ಸಂಗೀತ ಬೆಳೆಯಲಾರದು

(೩) ನಿಜವಾದ ವಿದ್ವಾಂಸರ ಕಚೇರಿಗಳನ್ನು ಮಾತ್ರ ಏರ್ಪಡಿಸಬೇಕು. ಔತಣಕ್ಕೆ ಕರೆದು ಅರೆ ಬೆಂದ ಅನ್ನ ಇಕ್ಕಬಾರದು. ಅಲ್ಲದೆ ಹೆಸರಿಗೆ ಮರುಳಾಗಿ ಹೊರಗಿನವರನ್ನು ಆಹ್ವಾನಿಸುವ, ಹಿತ್ತಲ ಗಿಡವೆಂದು ಸ್ಥಳೀಯ ಪ್ರತಿಭೆಯನ್ನು ಕೀಳ್ಗಣುವ ಮನೋಧರ್ಮ ಹೋಗಬೇಕು.

(೪) ಶುದ್ಧ ಸಂಗೀತಕ್ಕೆ ಸಾಹಿತ್ಯವಾಗಲಿ ಭಾಷೆಯಾಗಲಿ ಅನಗತ್ಯ. ಆದರೆ ಬಳಸುವ ಸಾಹಿತ್ಯ ಅರ್ಥವಾಗುವಂತಿರಬೇಕು. ಭಾಷೆ ನಮ್ಮದೇ ಆದರೆ ಉತ್ತಮ.

(೫) ತೆಲುಗು ತಮಿಳು ಕೀರ್ತನೆಗಳಂತೆ ಕನ್ನಡ ಕೀರ್ತನೆಗಳೂ ಗಾನಯೋಗ್ಯ. ಪ್ರಯೋಗದ ಅಗತ್ಯವಿದೆ.

(೬) ವಿಶ್ವಾಸ, ಗೌರವ ಪರಸ್ಪರ ತೋರಬೇಕಾದ ಮನೋಧರ್ಮಗಳು. ವಿದ್ವಾಂಸರು ಶ್ರೋತೃಗಳ ವಿಷಯದಲ್ಲಿ ಇನ್ನಷ್ಟು ಶ್ರದ್ಧೆಯಿಂದ ವರ್ತಿಸುವುದು ಅಗತ್ಯ.

(೭) ಸಂಗೀತ ಕಚೇರಿಗಳಿಗೆ ಎಲ್ಲರೂ ಬರಬೇಕಾದುದಿಲ್ಲ. ಯಾವ ಸಂಗೀತ ಕಚೇರಿಗೆ ಎಂದು ಎಲ್ಲರೂ ಬಂದಿದ್ದಾರೆ ಹೇಳಿ. ನನ್ನಂಥವರೆಲ್ಲ ಬಂದುಬಿಟ್ಟರೆ ನಿಮ್ಮಂಥವರಿಗೆ ಸಭಾಂಗಣದಲ್ಲಿ ಜಾಗ ಇಲ್ಲದೆ ಹೋಗಬಹುದು.

ರಾಯರು ಪ್ರಶ್ನಿಸಿದ್ದರಿಂದ ಇಷ್ಟೆಲ್ಲ ಕಷ್ಟಪಟ್ಟು ಉತ್ತರ ಹೇಳಬೇಕಾಯಿತು. ಬೇರೆ ಯಾರಾದರೂ ಇದೇ ಪ್ರಶ್ನೆ ಹಾಕಿದ್ದರೆ— ಹೋಗ್ರಿ, ನಿಮ್ಮ್ಯಾರು ಕೇಳೋಕೆ ? ಎಂದು ಒಂದೇ ಮಾತಿನಲ್ಲಿ ಜಾರಿಕೊಂಡುಬಿಡಬಹುದಾಗಿತ್ತು ! ✻



# ಇಸ್ಲಾಂನಲ್ಲಿ ಆಪ್ತಧರ್ಮ ಮತ್ತು ನೆರೆಹೊರೆ

**ಚಾದಲ**

'ಈಸಬೇಕು ಇದ್ದು ಜಯಿಸಬೇಕು' ಎಂಬ ಉಕ್ತಿಯನ್ನು ಇಸ್ಲಾಂ ಧರ್ಮವು ಸಂಪೂರ್ಣವಾಗಿ ಸಮರ್ಥಿಸುತ್ತದೆ ಎಂದು ಧಾರಾಳವಾಗಿ ಹೇಳಬಹುದು. ಆಧ್ಯಾತ್ಮ ಜ್ಞಾನವೊಂದೇ ಸಾಲದು, ಐಹಿಕ ಹಾಗೂ ಪಾರಮಾರ್ಥಿಕ ಕರ್ತವ್ಯಗಳನ್ನು ನೆರವೇರಿಸಿಯೇ ಮೋಕ್ಷವನ್ನು ಪಡೆಯಬೇಕು ಎಂದು ಇಸ್ಲಾಂ ತನ್ನ ಅನುಯಾಯಿಗಳಿಗೆ ಉಪದೇಶಿಸುತ್ತದೆ.

ಏಕಾಂತವಾಸದಲ್ಲಿದ್ದು ತಪಶ್ಚರ್ಯೆಯಿಂದ ಮೋಕ್ಷ ಪಡೆಯುವುದು ಸುಲಭ. ಆದರೆ ಸಂಸಾರದಲ್ಲಿದ್ದುಕೊಂಡು ಅದರ ಹೊಣೆಗಾರಿಕೆಯನ್ನು ನಿರ್ವಹಿಸುತ್ತ ವಿರಕ್ತನಾಗುವುದು ದುಃಸಾಧ್ಯವಾದ ಕೆಲಸ. ಇದನ್ನರಿತೇ ಹಜರತ ಮುಹಮ್ಮದ ಪೈಗಂಬರರು ಪ್ರತಿಯೊಬ್ಬ ನಾಗರಿಕನೂ ಆಪ್ತಧರ್ಮ ಹಾಗೂ ನೆರೆಹೊರೆಯವರ ಬಗೆಗಿನ ಧರ್ಮ (ಸಮಾಜ ಋಣ) ಸರಿಯಾಗಿ ಪಾಲಿಸಿ ಆದರ್ಶ ನಾಗರಿಕನಾಗಬೇಕು ಎಂದು ಆದೇಶ ನೀಡಿದ್ದಾರೆ.

ಆಪ್ತವರ್ಗ ಎಂದರೆ ನೆಂಟರು, ಬಂಧುಬಳಗ. ಇವರಲ್ಲಿ ತಾಯಿಗೆ ಅತಿ ಶ್ರೇಷ್ಠ ಸ್ಥಾನ ನೀಡಲಾಗಿದೆ. ಹಿಂದೂಧರ್ಮದಲ್ಲಿಯೂ ಮಾತೃದೇವೋಭವ ಎಂದು ಪ್ರಪ್ರಥಮವಾಗಿ ಆದೇಶ ನೀಡಿದ್ದಾರೆಂಬುದನ್ನು ಗಮನಿಸಬಹುದು. ಹಜರತ ಪೈಗಂಬರರು ಮಾತೆಗೆ ಎಂಥ ಮಹತ್ವ ಸ್ಥಾನ ನೀಡಿದ್ದರೆಂಬುದಕ್ಕೆ ಇದೊಂದು ಉದಾಹರಣೆ.

ಅವರ ಕಾಲ ಎಂದರೆ ಅರೆಬಸ್ತಾನ ಯುದ್ಧದಲ್ಲಿ ಮುಳುಗಿದ್ದ ಕಾಲ. ನವಯುವಕರು ಪೈಗಂಬರರ ಆದೇಶದಂತೆ ಸೈನ್ಯದಲ್ಲಿ ಸೇರಲು ಅಹಮಹಮಿಕೆಯಿಂದ ಮುಂದೆಬರುತ್ತಿದ್ದರು. ಅವರಿಗೆ ಸಾವಿನ ಹೆದರಿಕೆಯು ಇರುತ್ತಿರಲಿಲ್ಲ. ಒಂದಿನ ಕೆಚ್ಚೆದೆಯ ಯುವಕನೊಬ್ಬ ಸೈನ್ಯದಲ್ಲಿ ಸೇರಲೆಂದು ಪೈಗಂಬರರ ಕಡೆಗೆ ಬಂದ. ತೇಜಸ್ವಿ ಯುವಕ, ಯುದ್ಧಕ್ಕಾಗಿ ಆತನ ಬಾಹುಗಳು ಸ್ಫುರಣ ಹೊಂದುತ್ತಿದ್ದವು. ಪೈಗಂಬರರು ಆತನನ್ನು ಕ್ಷಣ ಹೊತ್ತು ನೋಡಿ ವಿಚಾರಿಸಿದರು:

"ನಿನ್ನ ಮನೆಯಲ್ಲಿ ಯಾರುಯಾರು ಇದ್ದಾರೆ ? ತಾಯಿ ಇರುವಳೆ ?"

"ಹೌದು ಮಹಾಸ್ವಾಮಿ, ನನಗೆ ಮನೆಯಲ್ಲಿ ತಾಯಿಯೊಬ್ಬಳೇ ಇದ್ದಾಳೆ. ಆದರೆ ಇಸ್ಲಾಮಿನ ಸೇವೆಗಾಗಿ ಸೈನ್ಯದಲ್ಲಿ ಸೇರಲು ಬಂದಿದ್ದೇನೆ" ಎಂದು ಆತ ಹೇಳಿದ

ಆಗ ಪೈಗಂಬರರು ಮುಗುಳ್ನಗುತ್ತ,

"ಮಾಂಕೆ ಕದಮೋಂಕೆ ನೀಚೆ ಜನ್ನತ್ ಹೈ (ತಾಯಿಯ ಅಡಿಯಡಿಯಲ್ಲಿ ಸ್ವರ್ಗ ಇದೆ) ಎಂದು ಇಸ್ಲಾಂನ ಆದೇಶ ಇದೆ. ಆದ್ದರಿಂದ ನೀನು ಮನೆಗೆ ಹಿಂದಿರುಗಿ ತಾಯಿಯ ಸೇವೆ ಮಾಡಿ ಇಸ್ಲಾಂ ಧರ್ಮ ಪರಿಪಾಲನೆ ಮಾಡು." ಎಂದು ಹೇಳಿದರು.

ಆ ಯುವಕನು ಪೈಗಂಬರರ ಆಜ್ಞೆಯನ್ನು

ಶಿರಸಾವಹಿಸಿದನು.

ತಮ್ಮ ತಾಯ್ತಂದೆಯರನ್ನು ಗೌರವದಿಂದ ಕಾಣಬೇಕು ಎಂಬ ಬಗ್ಗೆ ಪವಿತ್ರ ಕುರಾಣದಲ್ಲಿ ಹೀಗೆ ಆದೇಶ ಇದೆ:

"ತಾಯ್ತಂದೆಯರೊಡನೆ ಒಳ್ಳೆಯ ರೀತಿಯಿಂದ ನಡೆದುಕೊಳ್ಳಬೇಕು. ಇದು ಪರಮೇಶ್ವರನ ಆಜ್ಞೆ. ಹೊಟ್ಟೆಯೊಳಗಿನ ಮಗುವಿಗಾಗಿ ತಾಯಿ ಅದೆಷ್ಟು ಕಷ್ಟ ಸಹಿಸುತ್ತಾಳೆ. ಆಕೆಯು ಮರಣಪ್ರಾಯದ ಪ್ರಸವವೇದನೆಯನ್ನು ಸಹಿಸಿ ಮಗುವಿಗೆ ಅಮೃತೋಪಮಸ್ತನಪಾನ ಮಾಡಿಸುತ್ತಾಳೆ. ಗರ್ಭಾವಸ್ಥೆಯಿಂದ ಆ ಬಾಲಕನು ಅನ್ನಪ್ರಾಶನ ಮಾಡುವವರೆಗೆ ಅಂದರೆ ಸುಮಾರು ಎರಡೂವರೆ ವರ್ಷದವನಾಗುವವರೆಗೆ ತಾಯಿಯು ಆತನಿಗಾಗಿ ಏನೆಲ್ಲ ಕಷ್ಟಗಳನ್ನು ಸಹಿಸುತ್ತಾಳೆ. ನಂತರ ಬೆಳೆದು ತರುಣನಾದ ಆ ಯುವಕನು ತನ್ನ ಮಾತಾಪಿತೃಗಳ ಉಪಕಾರ ಸ್ಮರಿಸಿ, "ಹೇ ಪ್ರಭೋ, ನನ್ನ ತಾಯ್ತಂದೆಗಳಿಗೆ ನೀನು ದಯಪಾಲಿಸಿದ ಸುಖಕ್ಕಾಗಿ ವೈಭವಕ್ಕಾಗಿ ನಾನು ನಿನಗೆ ಅನಂತ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ನನ್ನ ಸಂತತಿಗೂ ಇದೇ ಸದ್ಬುದ್ಧಿ ಕೊಟ್ಟು ಕಲ್ಯಾಣ ಮಾಡು. ನಾನು ಸಂಪೂರ್ಣ ಶರಣಾಗತನಾಗಿದ್ದೇನೆ. ನಿನ್ನ ಆದೇಶಕ್ಕೆ ತಲೆಬಾಗುತ್ತಿದ್ದೇನೆ." (ಪ ಕುರಾಣ ಅಧ್ಯಾಯ ೪೬, ಋಚಾ ೧೫).

ಬಡವರನ್ನು ಅನಾಥರನ್ನು ಕಂಡರೆ ಪೈಗಂಬರರ ಕರುಳು ಕರಗುತ್ತಿತ್ತು. ಅನಾಥ ಬಾಲಕರನ್ನು ಕಂಡರೆ ಪ್ರೇಮ ಉಕ್ಕಿ ಹರಿಯುತ್ತಿತ್ತು. ಎಳೆಮಕ್ಕಳ ಹಣ ಎತ್ತಿಹಾಕುವದಂತೂ ಅವರಿಗೆ ಎಳ್ಳಷ್ಟು ಸೇರುತ್ತಿರಲಿಲ್ಲ. ಇಂಥ ವಂಚನೆಯ ಪ್ರಕರಣಗಳನ್ನು ಕಂಡಾಗಲೆಲ್ಲ ಪೈಗಂಬರರಾದ ಅವರು ಪ. ಕುರಾನಿನ ಆದೇಶವನ್ನು ಅವರಿಗೆ ತಿಳಿಸಿ ಹೇಳುತ್ತಿದ್ದರು. "ಪಾಲಕರು ಅಜ್ಞಾನ ಮಕ್ಕಳ ಹಣ ವೆಚ್ಚ ಮಾಡುವಾಗ ಬಹಳಷ್ಟು ಜಾಗರೂಕರಾಗಿರಬೇಕು." (ಪ. ಕುರಾಣ ಅ. ೪ : ೫)

"ಅನಾಥರ ಆಸ್ತಿಯನ್ನು ಎತ್ತಿ ಹಾಕುವವರು ತಮ್ಮ ಹೊಟ್ಟೆಯಲ್ಲಿ ಬೆಂಕಿಯನ್ನೇ ಕಟ್ಟಿಕೊಳ್ಳುತ್ತಾರೆ ಮತ್ತು ಕೊನೆಗೆ ನರಕಕ್ಕೆ ಸೇರುತ್ತಾರೆ" (ಪ. ಕು. ಅ. ೪:೯).

ಧನಿಕರ ಧನವನ್ನು ಹೇಗೆ ಹಂಚಬೇಕು ಎಂಬುದನ್ನು ಪ. ಕುರಾಣವು ಸ್ಪಷ್ಟವಾಗಿ ನಿರ್ದೇಶಿಸಿದೆ. ಅದು ಹೀಗಿದೆ:

"ಹೇ ಪೈಗಂಬರಾ, ತಾವು ಹಣ ಹೇಗೆ ಖರ್ಚುಮಾಡಬೇಕು ಎಂದು ಜನ ನಿನ್ನನ್ನು ಕೇಳುತ್ತಾರೆ. ಅವರಿಗೆ ನೀನು ಹೀಗೆ ತಿಳಿ ಹೇಳಬೇಕು. ನಿಮ್ಮ ಸಂಪತ್ತಿಯ ಮೇಲೆ ನಿಮ್ಮ ತಾಯ್ತಂದೆಗಳ, ಬಡವರಾದಂಥ ಆಪ್ತ ವರ್ಗದವರ, ದೀನ ದರಿದ್ರರ, ಅನಾಥರ, ಅತಿಥಿಗಳ ಹಕ್ಕು ಇದೆ. ಅದ್ದರಿಂದ ನಿಮ್ಮ ಪ್ರತಿಯೊಂದು ಕೃತಿಯನ್ನೂ ಪರಮೇಶ್ವರನು ನೋಡುತ್ತಿರುತ್ತಾನೆ." (ಪ. ಕು. ಅ ೨:೨೧೪).

"ಮತ್ತು ಹಣವನ್ನು ಹಂಚಿಕೊಡುವ ಕಾಲಕ್ಕೆ ಹಾಜರಿರುವ ಸ್ವಜನರು, ದೀನ ದರಿದ್ರರು, ಅನಾಥಮಕ್ಕಳು ಇವರಿಗೆ ಯಥಾಶಕ್ತಿ ಸಹಾಯ ನೀಡು." (ಪ. ಕು, ಅ ೪:೭)

ತಂದೆಯ ಆಸ್ತಿಯಲ್ಲಿ ಮಗನಂತೆ ಮಗಳಿಗೂ ಪಾಲು ಇದೆ. ಈ ಹಕ್ಕನ್ನು ಪ್ರಪಂಚಕ್ಕೆ ಮೊದಲಿಗೆ ಘೋಷಿಸಿದ್ದು ಇಸ್ಲಾಂ ಧರ್ಮವೇ. "ಜನರೇ ನಿಮ್ಮ ಧನವನ್ನು ಹೀಗೆ ಹಂಚಿಕೊಡಿ. ಇಬ್ಬರು ಪುತ್ರಿಯರ ಪಾಲನ್ನು ಮಗನಿಗೆ ಕೊಡಿರಿ. ಪುತ್ರಿಯರು ಇಬ್ಬರಿಗಿಂತ ಹೆಚ್ಚು ಇದ್ದಲ್ಲಿ ಆಸ್ತಿಯಲ್ಲಿ ಅವರಿಗೆ ೨/೩ ಪಾಲು ದೊರೆಯಬೇಕು. ಮಗಳು ಒಬ್ಬಳೇ ಇದ್ದರೆ ಮಗ-ಮಗಳು ಇಬ್ಬರಿಗೂ ಸಮನಾಗಿ ಆಸ್ತಿ ಹಂಚಿ ಕೊಡಿರಿ. ಮೃತನ ಆಸ್ತಿಯಲ್ಲಿ ಆತನ ತಂದೆ ತಾಯಿಂದಿರಿಗೆ ೧/೬ ಪಾಲು ದೊರೆಯಬೇಕು." (ಪ. ಕು. ಅ. ೪:೧೦)

ಪವಿತ್ರ ಕುರಾಣದ ನಾಲ್ಕನೆ ಅಧ್ಯಾಯವಾದ 'ಸುರುತುನ್ನಿಸಾ'ದಲ್ಲಿ ಆಸ್ತಿ ವಿಭಜನೆಯ ಬಗೆಗೆ ವಿವರವಾಗಿ ಹೇಳಲಾಗಿದ್ದು, ಶ್ರೀಮಂತರ ಆಸ್ತಿಯಲ್ಲಿ ಸಮಾಜಕ್ಕೂ ಪಾಲು ಇದೆ ಎಂದು ಹೇಳಿರುವುದು ಸಮಾಜವಾದಕ್ಕೆ ಪೋಷಕವಾದ ಅಂಶ ಎನ್ನಬೇಕು.

ಬಡವರು ಸಿರಿವಂತರನ್ನು ದ್ವೇಷಿಸಿ ವಿಧ್ವಂಸಕ ಚಟುವಟಿಕೆಗಳನ್ನು ನಡೆಸಿ ಸಮಾಜ

ದಲ್ಲಿ ಸಮಾನತೆಯನ್ನು ಸ್ಥಾಪಿಸಬಹುದು; ಆದರೆ ಬಡವರು ಪ್ರಾಮಾಣಿಕತನದಿಂದ ದುಡಿಯಬೇಕು ಮತ್ತು ಶ್ರೀಮಂತರು ತಮ್ಮ ಸಂಪತ್ತಿನಲ್ಲಿ ಬಡವರಿಗೂ ಪಾಲು ಇದೆ ಎಂದು ಗ್ರಹಿಸಿ ಅಗತ್ಯವಿರುವವರಿಗೆ ಧನ ಸಹಾಯ ನೀಡಬೇಕು. ಈ ಧ್ಯೇಯ ಸಾಧನೆಗಾಗಿ ಪವಿತ್ರ ಕುರಾಣದಲ್ಲಿ ಹೀಗೆ ಹೇಳಲಾಗಿದೆ:

"ಹೇ ಪೈಗಂಬರಾ, ಜನರಿಗೆ ಹೀಗೆ ಹೇಳಬೇಕು. ಆಪ್ತರಿಗೆ ಹಕ್ಕಿನಿಂದ ದೊರೆಯುವದನ್ನು ನೀಡುತ್ತಿರಬೇಕು; ದೀನದರಿದ್ರರಿಗೆ ಮತ್ತು ಅತಿಥಿಗಳಿಗೆ ಉಚಿತವಾದುದನ್ನು ನೀಡುತ್ತಿರಬೇಕು, ಈಶ್ವರಾನುಗ್ರಹವನ್ನು ಬಯಸುವವರಿಗೆಲ್ಲ ಇದೇ ಯೋಗ್ಯಮಾರ್ಗ. ಇದರಿಂದಲೇ ಅವರ ಕಲ್ಯಾಣವಾಗುವದು" (ಪ. ಕು. ಅ. ೩೦. ೩೬–೩೭)

ಕೇವಲ ಬಡವರಿಗೆ ಸ್ವಜನರಿಗೆ ಸಹಾಯ ಮಾಡಬೇಕು ಎಂದು ಇಸ್ಲಾಂ ಹೇಳುತ್ತಿರದೆ ನೆರೆಹೊರೆಯವರೊಡನೆ ಹೇಗೆ ವರ್ತಿಸಬೇಕು ಎಂಬ ಬಗ್ಗೆ ಕೂಡ ಅದು ಸ್ಪಷ್ಟ ನಿರ್ದೇಶನ ನೀಡಿದೆ. ನೆರೆಹೊರೆಯವರನ್ನು — ನಿಂದಿಸಬಾರದು, ಅವರ ಸುಖದುಃಖಗಳಲ್ಲಿ ಸಮಭಾಗಿಯಾಗಿರಬೇಕು. ಅವರ ಆವಶ್ಯಕತೆಗಳನ್ನು ನಿವಾರಿಸಬೇಕು ಎಂದು ಇಸ್ಲಾಂ ಅನೇಕ ಉದಾಹರಣೆಗಳನ್ನು ನೀಡಿ ಸ್ಪಷ್ಟೀಕರಿಸಿದೆ. ಒಂದು ದೃಷ್ಟಾಂತ ಹೀಗಿದೆ:

ನೂರಾರು ವರ್ಷಗಳ ಹಿಂದೆ ಅರಬಸ್ತಾನದಲ್ಲಿ ಅಬ್ದುಲ್ಲಾ ಎಂಬ ವಿದ್ವಾಂಸನಿದ್ದ. ಆತನ ವಿದ್ವತ್ತೆಯನ್ನು ಗೌರವಿಸುವದಕ್ಕಾಗಿ ಜನ ಆತನನ್ನು 'ಸರ್ವಜ್ಞ' ಎಂದು ಕರೆಯುತ್ತಿದ್ದರು. ಹಜ್' ಯಾತ್ರೆಗೆಂದು ಅಬ್ದುಲ್ಲಾ ಒಮ್ಮೆ ಮಕ್ಕಾಕ್ಕೆ ಹೋಗಿದ್ದ. ಅಲ್ಲಿಯ ವಿಧಿಗಳನ್ನೆಲ್ಲ ಮುಗಿಸಿಕೊಂಡು ರಾತ್ರಿ ವಿಶ್ರಾಂತಿ ಪಡೆಯುತ್ತಿದ್ದ ಅಬ್ದುಲ್ಲಾ ಕನಸಿನಲ್ಲಿ, ಇಬ್ಬರು ದೇವದೂತರು ಪೃಥ್ವೀ ಸಂಚಾರಕ್ಕಾಗಿ ಇಳಿದು ಬಂದುದನ್ನು ಕಂಡ. ಅವರು ತಮ್ಮಲ್ಲಿ ಈ ರೀತಿ ಮಾತಾಡಿಕೊಳ್ಳುತ್ತಿದ್ದರು;

ಒಬ್ಬ – ಈ ವರ್ಷ ಎಷ್ಟು ಜನ ಹಜ್ ಯಾತ್ರೆ ಮಾಡಿದರು ?

ಇಬ್ಬ – ಆರು ಲಕ್ಷ ಜನ.

ಒಬ್ಬ – ಇವರಲ್ಲಿ ದೇವರು ಯಾರಿಗೆ ಒಲಿದ ?

ಇಬ್ಬ – ಯಾರಿಗೂ ಇಲ್ಲ.

ಕನಸಿನಲ್ಲಿಯೆ ಅಬ್ದುಲ್ಲಾನಿಗೆ ದುಃಖವಾಯಿತು. "ಪಾಪ, ಇಷ್ಟೊಂದು ಜನ ಎಷ್ಟೊಂದು ಕಷ್ಟ ಸಹಿಸಿ ಯಾತ್ರೆಗೆ ಬರುತ್ತಾರೆ. ಅವರೆಲ್ಲರ ಶ್ರಮ ವ್ಯರ್ಥವಾಯಿತಲ್ಲ" ಎಂದು ಆತ ಪರಿತಪಿಸಿದ.

ಆಗ ದೇವದೂತ ನುಡಿದ:

"ದಮಾಸ್ಕಸಿನಲ್ಲಿ ಅಲಿ ಎಂಬ ಸಮಗಾರ ಇದ್ದಾನೆ. ಆತ ಇಲ್ಲಿ ಯಾತ್ರೆಗೆ ಬಂದಿಲ್ಲ. ಆದರೂ ಪರಮೇಶ್ವರನು ಆತನಿಗೆ ಹಜ್ ಯಾತ್ರಾ ಫಲವನ್ನು ದಯಪಾಲಿಸಿದ್ದಾನೆ."

ಇದನ್ನು ಕೇಳಿ ಅಬ್ದುಲ್ಲಾನಿಗೆ ಅಚ್ಚರಿಯಾಯಿತು. ಗಡಬಡಿಸಿ ಎದ್ದು ದಮಾಸ್ಕಸ್ ನಗರದತ್ತ ಹೊರಟ. ಅಲ್ಲಿ ಅಲಿಯನ್ನು ಹುಡುಕಿ ತೆಗೆದು ಆತನಿಗೆ ತನ್ನ ಸ್ವಪ್ನ-ವೃತ್ತಾಂತವನ್ನೆಲ್ಲ ಮೆಲುದನಿಯಲ್ಲಿ ನಿವೇದಿಸಿದ.

ಅದನ್ನು ಕೇಳಿದವನೇ ಅಲಿ ಮೂಕಭೀತನಾದ. ಕೆಲ ನಿಮಿಷಗಳ ನಂತರ ಎಚ್ಚೆತ್ತು ಗದ್ಗದ ಕಂಠದಿಂದ ಹೇಳತೊಡಗಿದ.

"ಸ್ವಾಮಿ, ಹಜ್ ಯಾತ್ರೆಗೆ ಹೋಗಬೇಕು ಎಂದು ನಾನು ಕಳೆದ ಮೂವತ್ತು ವರ್ಷಗಳಿಂದ ಪಾದರಕ್ಷೆ ಹೊಲಿದು ಮಾರಿ, ಅದರಲ್ಲಿಯೆ ಪ್ರಪಂಚ ಸಾಗಿಸಿ, ಅಲ್ಪ ಸ್ವಲ್ಪ ಹಣ ಕೂಡಿಸಿಡುತ್ತ ಬಂದಿದ್ದೇನೆ. ಈ ವರ್ಷ ಯಾತ್ರೆ ಮಾಡಿ ಪುಣ್ಯ ಗಳಿಸಬೇಕು ಎಂದುಕೊಂಡಿದ್ದೆ. ಆದರೆ ನನ್ನ ನೆರೆಮನೆಯಲ್ಲಿ ಚಿಕ್ಕ ಮಕ್ಕಳು ಒಂದು ವಾರದಿಂದಲೂ ಅನ್ನ ಕಾಣದೆ ಹಸಿವೆಯಿಂದ ಚಡಪಡಿಸುತ್ತಿದ್ದವು. ಕೊನೆಗೆ ಅವು ಸತ್ತ ಪ್ರಾಣಿಯ ಮಾಂಸ ತಿಂದಾದರೂ ಹಸಿವನ್ನು ಹಿಂಗಿಸಿಕೊಳ್ಳಲು ಸಿದ್ಧವಾಗಿದ್ದವು. ಅದನ್ನು ನೋಡಿ ನನ್ನ ಎದೆ ಬಿರಿಯಿತು. ಇಲ್ಲಿ ಇಂಥವರನ್ನು ಬಿಟ್ಟು ನಾನು ಹಜ್ ಯಾತ್ರೆಗೆ ಹೋಗಬೇಕೆ ? ಎಂಬ ವಿಚಾರ ತಲೆಯಲ್ಲಿ ಬಂದೊಡನೆ, ನಾನು ಆ ಮನೆಯ ಯಜಮಾನನ ಕಡೆಗೆ ಹೋಗಿ 'ನಿನ್ನ ದುರ್ಗತಿ ನಾನು ನೋಡಲಾರೆ, ಈ ಹಣ ತೆಗೆದುಕೊ

ಪಾತ್ರ ಮಕ್ಕಳಿಗೆ ಅನ್ನ ಬಟ್ಟೆ ಒದಗಿಸು' ಎಂದು ಹೇಳಿ ನನ್ನ ಬಳಿ ಇದ್ದ ಎಲ್ಲ ಹಣವನ್ನೂ ಆತನಿಗಿತ್ತೆ."

"ಅಲಿ, ನೀನು ನಿಜವಾಗಿಯೂ ಪರಮೇಶ್ವರನ ಧನ್ಯವಾದಗಳಿಗೆ ಅರ್ಹನಿದ್ದೀ. ಹಜ್ ಯಾತ್ರೆಗೆಂದು ಕೂಡಿಸಿಟ್ಟಿದ್ದ ಹಣವನ್ನು ನೀನು ಹಸಿವೆಯಿಂದ ಕಂಗಾಲಾದ ಕುಟುಂಬವೊಂದಕ್ಕೆ ನೀಡಿ ಅವರಿಗೆ ಪ್ರಾಣದಾನ ಮಾಡಿರುವೆ. ನಿನ್ನ ಈ ಕೃತಿಯನ್ನು ಪರಮೇಶ್ವರ ಮೆಚ್ಚಿದ್ದಾನೆ." ಎಂದು ಅಬ್ದುಲ್ಲಾ ಆತನನ್ನು ಅಭಿನಂದಿಸಿದನು.

ಹಜರತ ಪೈಗಂಬರರು ಪದೇ ಪದೇ ಹೀಗೆ ಹೇಳುತ್ತಿದ್ದರು:

"ನಿನ್ನ ನೆರೆಹೊರೆಯವ ಮುಸಲ್ಮಾನನಿರಲಿ ಮುಸಲ್ಮಾನೇತರನೇ ಇರಲಿ ಆತನೊಂದಿಗೆ ಔದಾರ್ಯದಿಂದ ವರ್ತಿಸು. ನೆರೆಹೊರೆಯವರನ್ನು ನೋಯಿಸಬೇಡ. ತಾನು ಹೊಟ್ಟೆ ತುಂಬ ಉಂಡು, ನೆರೆಹೊರೆಯವರನ್ನು ಉಪವಾಸ ಇಡುವವನು ನಿಜವಾದ ಮುಸಲ್ಮಾನನಲ್ಲ."

ಧರ್ಮದ ಸೋಗಿನಲ್ಲಿ ನೆರೆಯವನನ್ನು ದುರ್ಲಕ್ಷಿಸುವ ಡಾಂಭಿಕರನ್ನು ಕುರಿತು ಪವಿತ್ರ ಕುರಾಣದಲ್ಲಿ ಹೀಗೆ ಹೇಳಿದೆ:

"ನೆರೆಹೊರೆಯವರನ್ನು ದುರ್ಲಕ್ಷಿಸುವವರ ಹಾಗೂ ಹಿಂಸಿಸುವವರ ಸೇವೆಯನ್ನು ಪರಮೇಶ್ವರ ಮೆಚ್ಚಲಾರ." (ಪ. ಕು. ಅ. ೧೦೭: ೪ ರಿಂದ ೭)

ಅತಿಥಿಗಳ ಆದರ ಸತ್ಕಾರಗಳ ಕುರಿತೂ ಇಸ್ಲಾಂನಲ್ಲಿ ಬಹಳ ಕಳಕಳಿಯಿಂದ ಹೇಳಿದೆ. ಆದರಾತಿಥ್ಯಕ್ಕಾಗಿ ಆರಬರು ಹೆಸರಾಂತವರಾಗಿದ್ದರೂ ಇಸ್ಲಾಂಧರ್ಮವು ಅತಿಥಿಸತ್ಕಾರವೆಂದರೆ ಗೃಹಸ್ಥಾಶ್ರಮಿಗಳ ಧರ್ಮ ಎಂದು ವಿಧಿಸಿದೆ. "ಮನೆಯಲ್ಲಿಯ ಅತಿಥಿದೇವರನ್ನು ಸೌಜನ್ಯದಿಂದ ಸತ್ಕರಿಸಿರಿ" ಎಂದು ಪೈಗಂಬರರು ಹೇಳುತ್ತಿದ್ದರು.

ಬಡವ ಬಲ್ಲಿದರೆನ್ನದೆ ಉಚ್ಚನೀಚರೆನ್ನದೆ ಎಲ್ಲರೊಡನೆ ಸೌಜನ್ಯದಿಂದ ವರ್ತಿಸಬೇಕು. ಯಾರ ಮನ ನೋಯಿಸುವಂತೆಯೂ ಚುಚ್ಚಿ ಮಾತಾಡಬಾರದು. ಕುತ್ಸಿತ ಟೀಕೆ ಮಾಡಬಾರದು ಎಂದು ಇಸ್ಲಾಂ ಉಪದೇಶಿಸಿದೆ.

"ಇತರರೊಡನೆ ಮಧುರ ಭಾಷಿಯಾಗಿರಬೇಕು. ಹೆರವರ ತಪ್ಪನ್ನು ಮನ್ನಿಸಬೇಕು. ಯಾರಿಗಾದರೂ ಮೊದಲು ನೆರವಾಗಿ ನಂತರ ಪೀಡಿಸುವದು ಉಚಿತವಲ್ಲ. ಎಲ್ಲರಿಗೂ ಪರಮೇಶ್ವರನು ದಯಾಮಯಿನಾಗಿದ್ದಾನೆ" (ಪ. ಕು. ಅ ೨ : ೨೬೩)

"ಇತರರನ್ನು ಕುಡು ಉಪಹಾಸದಿಂದ ನಗಬೇಡಿರಿ. ನಿಮ್ಮ ಹಿಂಸೆಗೀಡಾದವರು ಪರಮೇಶ್ವರನ ದೃಷ್ಟಿಯಲ್ಲಿ ನಿಮಗಿಂತ ಶ್ರೇಷ್ಠನಾಗಿರಬಹುದು. ಆದ್ದರಿಂದ ಇತರರನ್ನು ದೂಷಿಸುವದು ತರವಲ್ಲ. ಪರವರನ್ನು ನಿಂದಿಸುವವರು ತಮ್ಮ ಮೇಲೆಯೆ ಆಪತ್ತುಗಳನ್ನು ತಂದುಕೊಳ್ಳುತ್ತಾರೆ." (ಪ. ಕು. ಅ. ೪೯ : ೧೧)

"ಹೆರವರನ್ನು ಬೆನ್ನ ಹಿಂದೆ ಹಳಿಯದಿರಿ. ಅಥವಾ ಶಂಕಿಸದಿರಿ. ಯಾರನ್ನಾದರೂ ಬೆನ್ನ ಹಿಂದೆ ನಿಂದಿಸುವದೆಂದರೆ ಸತ್ತ ಸೋದರನ ಮಾಂಸ ಭಕ್ಷಿಸಿದಂತೆ. ಇದನ್ನು ನೀವು ಒಪ್ಪುವಿರಾ? ಇಲ್ಲ ಎಂದರೆ ಪರಮೇಶ್ವರನ ಬಗ್ಗೆ ಭೀತಿ ಇಟ್ಟುಕೊಂಡು ಈ ಪಾತಕದಿಂದ ಪರಾವೃತ್ತರಾಗಿರಿ." (ಪ. ಕು. ಅ ೪೯ : ೧೨)

ಹೀಗೆ ಸ್ವಕೀಯರ ಪರಕೀಯರ ಬಗೆಗೆ ಆತ್ಮೀಯ ಸೌಹಾರ್ದದ ಆದರ್ಶವನ್ನಿಟ್ಟುಕೊಂಡು ವರ್ತಿಸಬೇಕು ಎಂಬ ಮಾನವತೆಯ ಮಂತ್ರವನ್ನು ಇಸ್ಲಾಂ ಉಸುರಿದೆ. ✿



# ನಾಸ್ತಿಕತೆ ನಮಗೆ ಬೇಕೇ?

ಉಡುಪಿ ಅನಂತೇಶರಾವ

ದೇವರ ಅಸ್ತಿತ್ವವನ್ನು ಪ್ರಶ್ನಿಸುವುದೇ 'ನಾಸ್ತಿಕತೆ'. 'ದೇವರು' ಎಂದೊಡನೆ ಮನುಷ್ಯಮಾತ್ರರಾದ ನಮಗೆ ಅಪ್ರತಿಹತ ಭಯ, ತತ್ಫಲವಾಗಿ ಗೌರವ-ಎರಡೂ ಏಕಕಾಲದಲ್ಲಿ ಮೂಡುತ್ತವೆ. ಕಳೆದ ಸಹಸ್ರಾರು ವರ್ಷಗಳ ನಮ್ಮ ಸಂಸ್ಕೃತಿಯಲ್ಲಿ 'ದೇವರು' ಒಂದು ಅದಮ್ಯ ಶಕ್ತಿಯಾಗಿ ಬೆರೆತು ಹೋಗಿದ್ದಾನೆ. ಅವನನ್ನು ಸಾಕಾರನನ್ನಾಗಿಯೂ, ನಿರಾಕಾರನನ್ನಾಗಿಯೂ ಪೂಜಿಸುವ ನಮ್ಮ ಜನಾಂಗ ಅವನ ಸಾಕಾರ ರೂಪಕ್ಕೆ ಅನೇಕಾನೇಕ ಹೆಸರುಗಳನ್ನು ಕೊಟ್ಟಿದೆಯಾದರೂ 'ದೇವರೊಬ್ಬನೇ, ನಾಮ ಹಲವು' ಎಂದು ಸಾರಿ ಹೇಳುತ್ತಿದೆ.

'ಸಾಕಾರ-ನಿರಾಕಾರ, ಸಾಕಾರದಲ್ಲಿಯೂ ಹಲವು ಹತ್ತು ಕಡೆ ಹಲವು ಬಗೆಯ ರೂಪಾಂತರ-ಹೀಗೆ ಈ ಬಗೆಯ ಇತ್ತಂಡ ವಾದಗಳು ಇಂದಿನ ಮನುಷ್ಯನಲ್ಲಿರಬಹುದಾದ ದೇವರ ಬಗೆಗಿನ ನಂಬಿಕೆಯನ್ನು, ಕಲ್ಪನೆಯನ್ನು ವಿಕಲ್ಪಗೊಳಿಸುತ್ತವೆ, ವಿಸ್ಮೃತಗೊಳಿಸುತ್ತವೆ.

ಹಾಗಾದರೆ ಈ 'ದೇವರು' ಯಾರು? ದೇವರು ಇದ್ದಾನೆಯೇ, ಇಲ್ಲವೇ? ಇದ್ದರೆ, ಅವನು ಏಕಾಕಿಯೇ ಅಥವಾ ಅವನಂತಹ ಇನ್ನೂ ಅನೇಕರಿದ್ದಾರೆಯೇ? ಹಾಗಲ್ಲದೆ, 'ದೇವರು' ಎಂಬ ಶಬ್ದ ಯಾವುದೋ ಒಂದು ಅವ್ಯಕ್ತ ಶಕ್ತಿಯ ಸೂಚಕವಿರಬಹುದೇ?-ಎಂಬಿವೇ ಮೊದಲಾದ ಪ್ರಶ್ನೆಗಳು ಜಿಜ್ಞಾಸೆಗೊಳಪಟ್ಟಿವೆ; ವಿಚಾರವಂತರ ಮನ ಹೊಕ್ಕಿವೆ, ಹೊಕ್ಕು ಕಾಡುತ್ತಿವೆ.

## ಸಾಮಾಜಿಕ ಸಮಸ್ಯೆ:

ಸುಳ್ಳನ್ನು ಆಡುವುದು ಹಗುರ. ಆದರೆ ಒಂದೇ ಸುಳ್ಳನ್ನು ಹೇಳುವುದು ಕಠಿಣ. ನಮ್ಮ ಪೌರಾಣಿಕ ಪುಸ್ತಕಗಳಲ್ಲಿ ಉಲ್ಲೇಖವಾಗಿರುವ ವಿಷಯಗಳ ಬಗ್ಗೆ ನಮ್ಮ ಜನದಲ್ಲಿ ಬೆಳೆದು ಬಂದಿರುವ ಅನೇಕ ನಂಬಿಕೆಗಳನ್ನು ಅಭ್ಯಸಿಸಿದಾಗ, ಅಂತಿಮವಾಗಿ ದೊರೆಯುವ ಚಿಕ್ಕ ಚೊಕ್ಕ ಅಭಿಪ್ರಾಯವದು. ಒಂದು ಸನ್ನೆ, ಒಂದು ನೋಟ, ಒಂದು ಮಾತು, ಒಂದು ಊಹೆ-ಸಾಕು ಸಂಶಯದ ಹುಟ್ಟಿಗೆ. ಧಾರ್ಮಿಕ ಗ್ರಂಥಗಳಲ್ಲಿ ದೇವರ ಬಗ್ಗೆ ಇರುವ ಸಂಜ್ಞೆ, ನೋಟ, ಮಾತು ಹಾಗೂ ಊಹೆಗಳೆಲ್ಲ ಇಂದು ಸಾಮಾಜಿಕವಾಗಿ ತರ್ಕಿತಗೊಂಡು ದೇವರ ಅಸ್ತಿತ್ವ ಸಂಶಯಾಸ್ಪದವಾಗಿದೆ. ದೇವರು ಹಿಂದೆ ಆಧ್ಯಾತ್ಮಿಕ ಸಮಸ್ಯೆಯಾಗಿದ್ದನೋ, ಇಲ್ಲವೋ ತಿಳಿಯದು. ಆದರೆ ಇಂದಂತೂ ಅವನು ಸಾಮಾಜಿಕ ಸಮಸ್ಯೆಯಾಗಿರುವುದು ಸತ್ಯ. ಅಂತೆಯೇ ಇಂದಿನ ಸಮಾಜದೆಡೆಗಿನ ಒಂದೆರಡು ಇಣುಕು ನೋಟಗಳು ಇಲ್ಲಿ ಅಪ್ರಕೃತವಾಗಲಾರವು.

ಇತ್ತೀಚೆಗಷ್ಟೇ-ಎಂದರೆ ಕೇವಲ ೨೭ ವರ್ಷಗಳ ಹಿಂದೆ-ದಾಸ್ಯ ಶೃಂಖಲೆಯನ್ನು ಕೊಡಹಿಕೊಂಡ ನಮ್ಮ ರಾಷ್ಟ್ರವು ಅನುಭವಿಸಿದ



226-8

ನೂರಾರು ವರ್ಷಗಳ ಪರಕೀಯರ ಆಡಳಿತದಲ್ಲಿ ಹಿಂದೂ ಧರ್ಮಕ್ಕೆ ಚ್ಯುತಿಯೊದಗಿರಲಿಲ್ಲ. ಇಲ್ಲಿ 'ಹಿಂದೂ' ಪದದ ಅರ್ಥ ವಿವರಣೆ ಅವಶ್ಯವೆನಿಸುತ್ತದೆ. ಹಿಂದೂಧರ್ಮ ಒಂದು ಧರ್ಮವಲ್ಲ. ಅದಕ್ಕೆ ಪ್ರಚಾರದ ಅಗತ್ಯವಿಲ್ಲ. ಮಾನವ ಧರ್ಮವೇ ಹಿಂದೂ ಧರ್ಮ, ಮಾನವೀಯತೆಯೇ ಹಿಂದುತ್ವ.

ಈ ನಿಟ್ಟಿನಲ್ಲಿ ಯೋಚಿಸಿದಾಗ ಸ್ವಾತಂತ್ರ್ಯಾನಂತರದ ಭಾರತದಲ್ಲಿ 'ಹಿಂದುತ್ವ' ಮಾಯವಾಗಿದೆ ಎನಿಸುತ್ತದೆ. ಹಿಂದೂಗಳ ಶಾಸ್ತ್ರ ಗ್ರಂಥಗಳಾದ ವೇದ, ಉಪನಿಷತ್ತು, ಪುರಾಣಗಳ ಸೃಷ್ಟಿಕರ್ತರಾದ ಆರ್ಯರು ಸೂರ್ಯ, ಅಗ್ನಿ, ವರುಣ, ವಾಯುವೇ ಮೊದಲಾದ ನೈಸರ್ಗಿಕ ಶಕ್ತಿಗಳನ್ನು ಪೂಜಿಸುತ್ತಿದ್ದರೇ ವಿನಾ ಮೂರ್ತ್ಯಾರಾಧಕರಾಗಿರಲಿಲ್ಲ ಎಂಬ ಐತಿಹ್ಯ ಇಂದು ಬಹುಪಾಲು ಹಿಂದೂಗಳಿಗೆ ಮರೆತು ಹೋಗಿದೆ. ಅವರ ಈ ಅನುಷ್ಠಾನ ಯೋಗ್ಯ ಪದ್ಧತಿ ಇಂದು ಗಾಳಿ ಪಾಲಾಗಿದೆ. ಧರ್ಮ ಎಂದೊಡನೆ ಜಾತಿಯ ಬಗ್ಗೆ ತಲೆಯೋಡಿಸುವ ಬ್ರಾಹ್ಮಣರ ಕೈಚಳಕದಿಂದಾಗಿ ಇಂದು ಜಾತಿಗೊಬ್ಬ ದೇವರ ಸೃಷ್ಟಿ ನಾಯಿ ಕೊಡೆಯಂತೆ ಬೆಳೆಯುತೊಡಗಿದೆ. ಆಯಾ ದೇವರ ಯೋಗ್ಯತೆಗೆ ತಕ್ಕಂತೆ ಅವುಗಳ ಪೂಜೆ ಅವ್ಯಾಹತವಾಗಿ ನಡೆದು ಬಂದಿದೆ. ಚೌಡಿ, ದುರ್ಗಿಯರಂತಹ ಕ್ಷುದ್ರ ದೇವತೆಗಳನ್ನೊಳಗೊಂಡ ಈ ದೇವತಾ ಪಟ್ಟಿಯಲ್ಲಿ ತಿರುಪತಿ ವೆಂಕಟೇಶ್ವರನಂತಹ ಸೌಮ್ಯ ದೇವತೆಗಳೂ ಸಮಾವೇಶಗೊಂಡಿದ್ದಾರೆ. ಚೌಡಿ, ದುರ್ಗಿಯರಿಗೆ ಕುರಿ, ಕೋಣಗಳು ಪ್ರತ್ಯಕ್ಷವಾಗಿ ಬಲಿಯಾದರೆ, ತಿರುಪತಿ ವೆಂಕಟರಮಣನಿಗೆ ಕುರುಡು ಭಕ್ತರು ಪರೋಕ್ಷವಾಗಿ ಯಜ್ಞ ಪಶುಗಳಾಗುತ್ತಾರೆ...... ಹಾಗೂ......

ಈ ಯಜ್ಞ ಪಶುಗಳ ನಂಬಿಕೆ ಎಷ್ಟೊಂದು ಪ್ರಬಲವಾಗಿದೆಯೆಂದರೆ— ಕಾಳಸಂತೆಕೋರನಾಗಲಿ, ಕಳ್ಳ ಸಾಗಾಣಿಕೆದಾರನಾಗಲಿ ಅಥವಾ ಇನ್ನಾವುದೇ ವಿಧದ ದಿಢೀರ ಶ್ರೀಮಂತನಾಗಲಿ ತಿರುಪತಿ ತಿಮ್ಮಪ್ಪನಿಗೆ ಅಥವಾ ಧರ್ಮಸ್ಥಳದ ಮಂಜುನಾಥನಿಗೆ ವಜ್ರ ವೈಡೂರ್ಯ ಖಚಿತ ಆಭರಣಗಳನ್ನಾಗಲಿ, ಬೇರೆ ವಿಧದ ಧಾರ್ಮಿಕ ವಸ್ತುಗಳನ್ನು ದತ್ತಿ ಕೊಟ್ಟರೆ ಅಥವಾ ಗುಡಿ, ಗೋಪುರಗಳ ನಿರ್ಮಾಣ ಕಾರ್ಯ ಕೈಗೊಂಡರೆ ಅವನ ಸಾಮಾಜಿಕ ಪಾತಕಗಳೆಲ್ಲ ಕೆಂಡ ಸೋಕಿದ ಕರ್ಪೂರದಂತೆ ಕರಗಿ ಹೋಗಿ ಬಿಡುತ್ತವೆ; ಅವನೊಬ್ಬ ದೊಡ್ಡ ಮನುಷ್ಯನಾಗುತ್ತಾನೆ. ಸಮಾಜದ ಋಣದಿಂದ ಶ್ರೀಮಂತನಾದ ವ್ಯಕ್ತಿ ಅದರ ಋಣವನ್ನು ತೀರಿಸುವ ಗೋಜಿಗೇ ಹೋಗದೆ ತನ್ನ ಗಳಿಕೆಯನ್ನು ನಿರುಪಯುಕ್ತವಾಗಿ ವ್ಯರ್ಥಗೊಳಿಸುವ ಅಪೂರ್ವ ಅವಕಾಶ ಹಿಂದೂ ಧರ್ಮದಲ್ಲಲ್ಲದೆ ಬೇರಾವ ಧರ್ಮದಲ್ಲಿ ದೊರಕೀತು? ಈ ಸಾಮಾಜಿಕ ದುಷ್ಕೃತ್ಯವನ್ನು ಮೂಕ ವೇದನೆಯಿಂದ ಸಹಿಸಿಕೊಳ್ಳುವ ಬಡ ಜನತೆ 'ಯಜ್ಞ ಪಶು'ಗಳಲ್ಲದೆ ಬೇರೇನು ತಾನೇ ಆಗಲು ಸಾಧ್ಯ?

ಧರ್ಮವೆಂದರೆ ನಿರಂತರ ವಾತಾವರಣಕ್ಕೆ ಹೊಂದಿಕೊಳ್ಳುವ ಯಂತ್ರ. ಈ ಗುಣವಿಲ್ಲದ ಧರ್ಮ ಅರ್ಬುದ ರೋಗದ ಗಡ್ಡೆಯಾಗುತ್ತದೆ. ಇಂದಿನ ಹಿಂದೂ ಧರ್ಮಕ್ಕೂ ಈ ಮಾತು ಅನ್ವಯಿಸುತ್ತದೆ. 'ಹಿಂದೂ' ಪದದ ಮೂಲ 'ಸಿಂಧ್' ಎಂದು. ಇದರ ಅರ್ಥ 'ಹರಿ', ಚಲಿಸು' ಎಂದು. ಕಾಲ ಧರ್ಮದೊಂದಿಗೆ ನಿರಂತರವಾಗಿ ಹೊಂದಿಕೊಂಡು ಹೋಗುವುದೇ 'ಸಿಂಧ್' ಧರ್ಮದ [ಹಿಂದೂ ಧರ್ಮದ] ಮುಖ್ಯ ಲಕ್ಷಣ. ಆದರೆ, ಸುತ್ತಲಿನ ಪರಿಸರದ ಪರಿಗಣನೆಯಿಲ್ಲದೆ ಸನಾತನ ರೀತಿ-ನೀತಿಗಳಿಗೇ ಅಂಟಿಕೊಂಡಿರುವ ಇಂದಿನ ಹಿಂದೂ ಧರ್ಮದ ಜನ ಒಂದು ವಿಧದಲ್ಲಿ ನಿಂತನೀರಾಗಿದ್ದಾರೆ; ಕೊಳೆತು ನಾರುತ್ತಿದ್ದಾರೆ.

ಹೊಟ್ಟೆಗೆ ಹಿಟ್ಟಿಲ್ಲದೇ ಹೋದರೂ ಸರಿಯೇ, ಜುಟ್ಟಿಗೆ ಮಾತ್ರ ಮಲ್ಲಿಗೆ ಹೂ ಬೇಕೇ ಬೇಕು ನಮ್ಮ ಇಂದಿನ ಹಿಂದೂಗಳಿಗೆ, ದವಸ, ಧಾನ್ಯಗಳನ್ನು ಪುಷ್ಕಳವಾಗಿ ಬೆಳೆಯುತ್ತಿದ್ದ ಸಹಸ್ರಾರು ವರ್ಷಗಳ ಹಿಂದಿನ ಜನರ ಕಾನೂನು ಕಟ್ಟಳೆಗಳನ್ನನುಸರಿಸಿಯೇ ಇಂದೂ ಸಹ ವಿವಾಹವೇ ಮೊದಲಾದ ಸಮಾರಂಭಗಳು ಅದ್ಧೂರಿಯಿಂದ ನಡೆಯಬೇಕು ನಮ್ಮ ಇಂದಿನ ಹಿಂದೂಗಳಿಗೆ, ಸದಾ ಕಾಲ ಕಾಡಿನಲ್ಲಿ, ಕಗ್ಗತ್ತಲೆ

ಯಲ್ಲಿ, ಭೀಕರ ಪ್ರಾಣಿಗಳ ಮಧ್ಯೆ ವಾಸಿಸ ಬೇಕಾದ ನಮ್ಮ ಪೂರ್ವಿಕರು ಬೆಂಕಿ ಹೊತ್ತಿಸಿ, ಅದನ್ನು ಆರದಂತೆ ಕಾಪಾಡಲೋಸುಗ ಆಚರಿಸುತ್ತಿದ್ದ ಯಜ್ಞಯಾಗಾದಿಗಳು ವನ-ವನ್ಯಮೃಗಗಳೇ ಇಲ್ಲದ ಈ ವಿದ್ಯುತ್ ಯುಗದಲ್ಲಿಯೂ ವಿಜೃಂಭಣೆಯಿಂದ ಆಚರಿ-ಸಲ್ಪಡಬೇಕು, ನಮ್ಮ ಇಂದಿನ ಹಿಂದೂಗಳಿಗೆ. ಯಜ್ಞ, ಯಾಗಗಳಲ್ಲಿ ಟಿನ್‌ಗಟ್ಟಲೆ ತುಪ್ಪ, ಥಾನುಗಟ್ಟಲೆ ಬಟ್ಟೆ ಹಾಗೂ ಕ್ವಿಂಟಲ್‌ಗಟ್ಟಲೆ ಆಹಾರ ಧಾನ್ಯಗಳು ಅಗ್ನಿದೇವತೆಗೆ 'ಸ್ವಾಹಾ' ಆಗುತ್ತವೆ. ಆಹಾರ ಧಾನ್ಯಗಳಿಗೆ ಇದಿರುವ ಬೆಲೆಯು ಅರಿವಿರುವವರು ಇಂತಹ ಲೂಟಿಯನ್ನು ಮಾಡುವ ಮನಸ್ಸು ಮಾಡಲಾರರು. ಮಾನಮುಚ್ಚಿಕೊಳ್ಳಲು ಬೇಕಾಗುವ ಗೇಣು ಬಟ್ಟೆಗಾಗಿ ತಹತಹ ಪಡುವ ದರಿದ್ರರನ್ನು ಕಂಡ ಕಣ್ಣು ಥಾನುಗಟ್ಟಲೆ ಬಟ್ಟೆ ಬೆಂಕಿಗೆ ಆಹುತಿಯಾಗುವುದನ್ನು ಕಂಡು ಕೆಂಪಾಗುವ ಕಾಲ ಸುದೂರವಾಗಿದೆ ಎಂಬುದಾಗಿ ಯಾರೂ ಭಾವಿಸಬೇಕಾಗಿಲ್ಲ.

ಇಂದು ನಮ್ಮ ಹಿಂದೂ ಸಮಾಜದಲ್ಲಿ ದೇವರ ಹೆಸರಿನಲ್ಲಿ ನಡೆಯುತ್ತಿರುವ ಶೋಷಣೆ ಬಹುಶಃ ಇನ್ನಾವುದೇ ಬಗೆಯ ಶೋಷಣೆಗಿಂತ ಮಿಗಿಲಾದುದು. ಸಹಸ್ರಾರು ಜನರನ್ನು ಲೂಟಿ ಮಾಡಿ ತನ್ನನ್ನು ಪೂಜಿಸಿರಿ ಎಂದು ಯಾವ ದೇವರೂ ಹೇಳುವುದಿಲ್ಲ; ಹಾಗೆಂದು ಯಾವ ಧರ್ಮದಲ್ಲೂ ಇಲ್ಲ. ಹಾಗಿದ್ದೂ ನಮ್ಮ ಸಮಾಜದ ಬಡಜನತೆ ಲೂಟಿಗೊಳಗಾಗುತ್ತಿರುವುದೇಕೆ ? ಇದು ಅವರ ಕರ್ಮಫಲವೆ ? ಇದಕ್ಕೆಲ್ಲ ದೇವರೇ ಕಾರಣವೆ ? ಹಾಗಿದ್ದಲ್ಲಿ ಅಂತಹ ದೇವರು ನಮಗೆ ಬೇಕೆ ?

## ವೈಜ್ಞಾನಿಕ ವಿಶ್ಲೇಷಣೆ :

ಪ್ರತಿಕ್ಷಣವೂ ಹೊಸರೂಪ ಪಡೆಯುತ್ತಿರುವ ಚಂಚಲ ಪ್ರವೃತ್ತಿಯ ಈ ಪ್ರಪಂಚದಲ್ಲಿ ಜನರ ಅಭಿಪ್ರಾಯಗಳು ದಿನಗಳೆದಂತೆ ಬದಲಾಗುತ್ತಿವೆ. ಈಗ ಹತ್ತು ವರ್ಷಗಳ ಹಿಂದೆ ಇದ್ದ ಧಾರ್ಮಿಕ ಬುದ್ಧಿ, ಭೋಳೆ ಸ್ವಭಾವ, ಅಂಧಶ್ರದ್ಧೆಗಳು ಇಂದು ನಮ್ಮಲ್ಲಿ ಬಹುಮಟ್ಟಿಗೆ ಇಲ್ಲವಾಗಿವೆ. ಪ್ರತಿಯೊಂದು ವಿಷಯಕ್ಕೂ ವೈಜ್ಞಾನಿಕ ಕಾರಣಗಳನ್ನು ಸಂಶೋಧಿಸುವ, ಪ್ರಚುರ ಪಡಿಸುವ ಸಂಶೋಧಕರ ಸಂಖ್ಯೆ ನಮ್ಮಲ್ಲಿಂದು ಬೆಳೆಯತೊಡಗಿದೆ. ಅಂತೆಯೇ 'ದೇವರು' ಎಂಬುದಾಗಿ ನಾವು ಯಾವುದನ್ನು ಕರೆಯುತ್ತೇವೆಯೋ ಅದರ ಬಗ್ಗೆ ವೈಜ್ಞಾನಿಕ ವಿಶ್ಲೇಷಣೆಯನ್ನು ಈಗ ನಡೆಸೋಣ.

ವಿಶ್ವ ಮತ್ತು ಸೌರವ್ಯೂಹದ ಬಗೆಗೆ ಹೊಸ ಜ್ಞಾನ; ತಾಂತ್ರಿಕ, ವೈದ್ಯಕೀಯ, ಗಣಿತ ಹಾಗೂ ಇನ್ನಿತರ ಶಾಸ್ತ್ರಗಳಲ್ಲಿ ಅದ್ಭುತ ಪ್ರಗತಿ ಇವೇ ಮೊದಲಾದ ಘಟನೆಗಳು ಕಳೆದ ಐವತ್ತು ವರ್ಷಗಳಿಗಿಂತಲೂ ಕಡಿಮೆ ಕಾಲದಲ್ಲಿ ನಮ್ಮ ಪ್ರಪಂಚದ ರೂಪರೇಷೆಯನ್ನೇ ಬದಲಾಯಿಸಿವೆ. ಒಂದೆರಡು ತಲೆಮಾರಿನ ಹಿಂದಿನವರಿಗೆ ಹೊಸ ವಿಷಯಗಳಾಗಿದ್ದ, ಕುತೂಹಲಕಾರಿ ವಸ್ತುಗಳಾಗಿದ್ದ ರೈಲು, ವಿದ್ಯುತ್, ತಂತಿಸಮಾಚಾರ, ವಿಮಾನ ಮುಂತಾದವು ಇಂದು ಸಾಮಾನ್ಯ ವಿಷಯಗಳಾಗಿವೆ; ದಿನಬಳಕೆಯ ವಸ್ತುಗಳಾಗಿವೆ. ನಾವು ರೇಡಿಯೋವನ್ನು ಕಂಡು ಹಿಡಿದಿದ್ದೇವೆ. ಟೆಲಿವಿಜನ್ ಯಂತ್ರಗಳನ್ನು ನಿರ್ಮಿಸಿದ್ದೇವೆ. ಪ್ರಥಮ ಬಾರಿಗೆ ಭೂಮಿಯಿಂದ ಸಿಡಿದು, ಹೊರಗಿನ ಆಕಾಶಕಾಯವಲ್ಲಿ ನೆಲೆಯೂರಿ, ಅಲ್ಲಿಂದ ಸ್ಯಾಟಲೈಟ್‌ಗಳ ಮುಖಾಂತರ ವಾರ್ತಾ ವಿಶೇಷಗಳನ್ನು ಬಿತ್ತರಿಸಿದ್ದೇವೆ. ಅಲ್ಲದೆ ಚಂದ್ರಮಂಡಲಕ್ಕೂ ಹೋಗಿ ಬಂದಿದ್ದೇವೆ. ನಮ್ಮ ಈ ಎಲ್ಲ ಸಾಧನೆಗಳು ಮುಂದಿನೆರಡು ತಲೆಮಾರಿನವರು ಗ್ರಹಾಂತರ್ಯಾನ ಗೊಳ್ಳಬಲ್ಲರೆಂಬ ಕಲ್ಪನೆಗೆ ಚಾಲನೆ ನೀಡುತ್ತವೆ.

## 'ವಿಶ್ವ' ಯೋಜನೆಗಳು :

ಪೃಥ್ವಿಯ ಮೇಲೆ ಜನಸಂದಣಿ ಅತ್ಯಧಿಕವಾಗಿ ಉಲ್ಬಣಗೊಳ್ಳುತ್ತಿದೆ ಎಂಬುದಾಗಿ ವಿಜ್ಞಾನಿಗಳು ಗೋಗರೆಯುವುದನ್ನು ಆಗೀಗ ಪತ್ರಿಕೆಗಳಲ್ಲಿ ಓದಿದ್ದೇವೆ. ಈ ಪೃಥ್ವಿಯಲ್ಲಿ ಒಂದು ಚದರಡಿ ಸ್ಥಳವೂ ದೊರೆಯದಷ್ಟು ದಟ್ಟವಾಗಿ ಜನಸಂಖ್ಯೆಯು ಉಲ್ಬಣಿಸುತ್ತದೆಂದು

ಕಲ್ಪಿಸೋಣ. 'ಆಗ ವಿಜ್ಞಾನಿಗಳ ಉತ್ತರವೇನು ?' ಎನ್ನುವಿರಲ್ಲವೆ ? ವಿಜ್ಞಾನಿಗಳ ಯೋಚನಾ ಲಹರಿ ಈ ದಿಸೆಯಲ್ಲಿ 'ವಿಶ್ವ' ಯೋಜನೆಗಳನ್ನು ಸ್ಥಾಪಿಸಿದೆ.

ಜನಸಂಖ್ಯೆಯ ಬಗೆಗಿನ ನಮ್ಮ ಸಮಸ್ಯೆ ಸಜೀವಗೊಂಡು ನಮ್ಮನ್ನು ಬಾಧಿಸಲು ಇನ್ನೂ ಸಾಕಷ್ಟು ಕಾಲವೇ ಬೇಕಾಗಬಹುದು. ಈ ಕಾಲಾವಧಿ ಸುಮಾರು ಒಂದು ಲಕ್ಷ ವರ್ಷಗಳಷ್ಟೆಂದು ಅಂದಾಜು ಹಾಕೋಣ. ಅಣುಯುದ್ಧಗಳ ಈ ದಿನಗಳಲ್ಲಿ ಮನುಷ್ಯ ಅಷ್ಟು ದೀರ್ಘಾವಧಿಯ ವರೆಗೆ ಅಸ್ತಿತ್ವದಲ್ಲಿದ್ದಾನೆಯೇ ಎಂಬ ಶಂಕೆ ಅಂಕುರಿಸುವುದು ಸಹಜವೇ. ಆದರೂ ನಮ್ಮ ಅಳಿವು ಹಾಗೂ ಉಳಿವು ಎರಡೂ ನಮ್ಮ ಕೈಯಲ್ಲೇ ಇವೆ ಎಂಬುದನ್ನು ನಾವು ಮರೆಯದಿರೋಣ. ವೈಜ್ಞಾನಿಕ ಪ್ರಗತಿಯಿಂದ ಏನೆಲ್ಲವನ್ನೂ ಸಾಧಿಸಿದ ಮಾನವ ತನ್ನ ಅಗಾಧ ಬುದ್ಧಿಮತ್ತೆಯನ್ನು ತನ್ನ ವಿನಾಶಕ್ಕೆಡೆ ಮಾಡುವ ವಿಪರ್ಯಾಸದತ್ತ ಬಳಸಲಾರನೆಂದು ಆಶಿಸೋಣ.

ಒಳ್ಳೆಯದು. ಲಕ್ಷಾಂತರ ವರ್ಷಗಳ ನಂತರದ ನಾಗರಿಕತೆ ಮಾನವ ವಸತಿಗಾಗಿ ಗ್ರಹಗಳನ್ನೇ ನಿರ್ಮಿಸಲು ಉಪಕ್ರಮಿಸುತ್ತದೆ. ಅಮೇರಿಕದ ಪ್ರಿನ್ಸ್‌ಟನ್ ಇನ್‌ಸ್ಟಿಟ್ಯೂಟ್ ಫಾರ್ ಅಡ್ವಾನ್ಸ್‌ಡ್ ಸ್ಟಡೀಸ್ ಸಂಸ್ಥೆಯ ಭೌತಶಾಸ್ತ್ರ ವಿಜ್ಞಾನಿಯಾದ ಪ್ರೊಫೆಸರ್ ಫ್ರೀಮನ್ ಡೈಸನ್ ಅವರು ಈ ಬಗ್ಗೆ ಮುಂದಾಲೋಚನೆ ಮಾಡಿ ಯೋಜನೆಯೊಂದನ್ನು ನಿರೂಪಿಸಿದ್ದಾರೆ. ಮಂಗಳ ಹಾಗೂ ಗುರು ಗ್ರಹಗಳ ಮಧ್ಯೆ ಇರುವ ಕ್ಷುದ್ರಗ್ರಹಗಳನ್ನು ಇಂದಿನ ನಮ್ಮ ದೇಶಗಳಂತೆಯೂ, ಗುರುವೇ ಮುಂತಾದ ಬೃಹದಾಕಾರದ ಗ್ರಹಗಳನ್ನು ಲೇಸರ್‌ನಂತಹ ಪ್ರಬಲ ಮಾರಕಾಸ್ತ್ರಗಳಿಂದ ಛಿದ್ರಗೊಳಿಸಿ ನಮ್ಮ ಪೃಥ್ವಿಗಳಂತೆಯೂ ಉಪಯೋಗಿಸುವ ಮಹತ್ಸಾಧನೆ ಈ ಯೋಜನೆಯಲ್ಲಿ ಅಡಕವಾಗಿದೆ.

ಡೈಸನ್ನರ ಈ ಯೋಜನೆ ಫಲ ಕೊಡಲು ಅನೇಕ ಲಕ್ಷ ವರ್ಷಗಳೇ ಬೇಕು. ಇಷ್ಟಾದರೂ ಸಹ ಆ ಕೃತಕಗ್ರಹಗಳ ವಾತಾವರಣ ನಮಗೆ ಅನುಕೂಲಕರವಾಗಿಲ್ಲದಿರುವುದೇ ಹೆಚ್ಚು ಸಾಧ್ಯ. ಎಂದ ಮೇಲೆ ಈ 'ಡೈಸನ್ ಯೋಜನೆ' ವೃಥಾ ವ್ಯರ್ಥವಲ್ಲವೆ ? ಈ ಸಂದೇಹಕ್ಕೆ ಅಮೇರಿಕದ ಕಾರ್ನೆಲ್ ವಿಶ್ವವಿದ್ಯಾನಿಲಯದ ಗ್ರಹಾಭ್ಯಾಸ ಪ್ರಯೋಗ ಶಾಲೆಯ ನಿರ್ದೇಶಕರಾಗಿರುವ ಪ್ರೊಫೆಸರ್ ಕಾರ್ಲ್ ಸಗಾನ್ ಅವರು ಸಮಾಧಾನ ನೀಡುತ್ತಾ, 'ಪ್ರತಿಕೂಲ ವಾತಾವರಣವುಳ್ಳ ಗ್ರಹಗಳಲ್ಲಿ ಪಾಚಿಯನ್ನು ಚೆಲ್ಲಿ, ಒಂದು ವಿಧದ ಸರಪಣಿ ಕ್ರಿಯೆಯನ್ನು– ಇದಕ್ಕೆ 'ಫೋಟೋ ಸಿಂಥೆಸಿಸ್' ಎಂದು ಕರೆಯುತ್ತಾರೆ– ಏರ್ಪಡಿಸಿ, ಅಲ್ಲಿಯ ವಾತಾವರಣವನ್ನು ಕರಗಿಸಿ, ಪ್ರಾಣವಾಯು ಮತ್ತು ಸಾರಜನಕಗಳ ಮಿಶ್ರ ವಾತಾವರಣವನ್ನು ಉತ್ಪಾದಿಸಬಹುದು' ಎಂಬುದಾಗಿ ಪ್ರಚುರಪಡಿಸಿದ್ದಾರೆ. ಅಂತೂ ಈ ವಿಶ್ವ ಯೋಜನೆಗಳ ಮೂಲಕ ನಾವು ನಮ್ಮ ವಾಸಕ್ಕಾಗಿ ಗ್ರಹಗಳನ್ನೇ ನಿರ್ಮಿಸಿಕೊಳ್ಳಲಿದ್ದೇವೆ– ಎಂಬುದು ಸ್ಪಷ್ಟವಾದಂತಾಯಿತು.

## 'ದೇವರು'–'ಗಗನಯಾತ್ರಿ' ?

ಈ ವಿಚಾರವನ್ನು ಸದ್ಯಕ್ಕೆ ಕೈಬಿಟ್ಟು, ನಮ್ಮ ಯೋಚನಾಲಹರಿಯನ್ನು ಹೀಗೆ ಹರಿಸೋಣ. ಸೂರ್ಯನು ಅಪ್ರತಿಹತ ವೇಗದಿಂದ ತನ್ನ ಸುತ್ತ ಪರಿಭ್ರಮಿಸಿದಾಗ ಅವನಲ್ಲಿ ಉತ್ಪತ್ತಿಯಾದ ಅಪಕೇಂದ್ರೀಯ ಬಲದ ಪರಿಣಾಮವಾಗಿ ಅಖಂಡ ಸ್ಫೋಟವೇರ್ಪಟ್ಟು, ನಮ್ಮ ಭೂಮಿಯೇ ಮೊದಲಾದ ಆಕಾಶಕಾಯಗಳು ಅವನಿಂದ ಹೊರಹೊಮ್ಮಿದವೆಂದೂ, ಪೃಥ್ವಿಯಲ್ಲಿ ಪ್ರಪ್ರಥಮವಾಗಿ ಶೂನ್ಯಾವಕಾಶವಿದ್ದು, ಕಾಲಕ್ರಮೇಣ ಸಸ್ಯಜೀವಿಗಳೂ, ಪ್ರಾಣಿಜೀವಿಗಳೂ ವಿಕಸಿತವಾದವು ಎಂಬುದಾಗಿಯೂ ನಮ್ಮ ಭೂ–ಭೌತ ಶಾಸ್ತ್ರಜ್ಞರು ಈ ಪೃಥ್ವಿಯ ಹುಟ್ಟನ್ನು ವಿಶದೀಕರಿಸುತ್ತಾರೆ. ಅಸಾಮಾನ್ಯವೆನಿಸುವ ಈ ಘಟನಾವಳಿಯನ್ನು ನಮ್ಮ ಪೂರ್ವಿಕರು 'ದೇವರ ಪವಾಡ' 'ಭಗವಂತನ ಲೀಲೆ' ಎಂಬುದಾಗಿ ಈ ವರೆಗೂ ದೃಢವಾಗಿ ನಂಬಿ

ದ್ದಾರೆ.

ಸೂರ್ಯನ ವಿಘಟನೆ, ತನ್ಮೂಲಕ ಸೌರ ಸಂಸ್ಥೆಯ ಜನನ. ತದನಂತರ ಪೃಥ್ವಿಯಲ್ಲಿ ಸಸ್ಯಜೀವಿಗಳ ಅಂಕುರಾರ್ಪಣೆ, ಅವುಗಳನ್ನವಲಂಬಿಸಿ ಪ್ರಾಣಿ ಜೀವಿಗಳ ಉದ್ಭವ ಮತ್ತು ವಿಕಾಸ-ಈ ಘಟನೆಗಳ ಹೋಲಿಕೆ ನಮ್ಮ 'ಡೈಸನ್' ಹಾಗೂ 'ಸಗಾನ್'ರ ವಿಶ್ವ ನಿರ್ಮಾಣದಂತಹ ಬೃಹತ್ ಯೋಜನೆಯಲ್ಲಿ ಎದ್ದು ಕಾಣುತ್ತದೆ. ಇಷ್ಟಲ್ಲದೆ ಇನ್ನೊಂದು ಗಮನೀಯ ಅಂಶ ಸಹ ಇಲ್ಲಿ ಪ್ರಸ್ತಾಪನೀಯ. ವಿಶ್ವದ ಬೇರೆಡೆಗಳಲ್ಲಿ ವಿಶೇಷ ರೀತಿಯ ಸ್ಥಿತಿಯಲ್ಲಿ, ವಿಸ್ಮಯಕಾರಕ ರೂಪಗಳಲ್ಲಿ ಬುದ್ಧಿಜೀವಿಗಳು ಅಸ್ತಿತ್ವದಲ್ಲಿವೆ ಎಂಬುದಾಗಿ ಈಗಾಗಲೇ ವೈಜ್ಞಾನಿಕವಾಗಿ ನಿಷ್ಪನ್ನಗೊಂಡಿದೆ.

ಹೀಗಾಗಿ, 'ದೇವರ ಪವಾಡ,' ಭಗವಂತನ ಲೀಲೆ'ಗಳ ಬಗ್ಗೆ ನಮ್ಮ ಬುದ್ಧಿಮತ್ತೆಯನ್ನು ಹರಿಯಬಿಟ್ಟಾಗ ಸ್ವಾರಸ್ಯಕರ ಪ್ರಶ್ನೆಗಳು ಪುಟಿದೇಳುತ್ತವೆ, ವಿಶ್ವಪ್ರಳಯ ಹಾಗೂ ಪೃಥ್ವಿಯಲ್ಲಿ ಜೀವೋತ್ಪತ್ತಿಯಂತಹ ಘಟನೆಗಳು ಸಂಭವಿಸುವಂತೆ ಬೇರೆ ವಿಶ್ವದ ಬುದ್ಧಿಜೀವಿಗಳು ಕಾರ್ಯಾಚರಣೆ ಕೈಗೊಂಡಿರಬಾರದೇಕೆ ? ಆ ಬುದ್ಧಿಜೀವಿಗಳನ್ನೇ ನಮ್ಮ ಪೂರ್ವಿಕರು 'ದೇವರು' ಎಂದು ಹೆಸರಿಸಬಾರದೇಕೆ ? ಎಂದ ಮೇಲೆ ದೇವರು 'ಇತರ ಗ್ರಹದಿಂದ ಬಂದ ಯಃಕಶ್ಚಿತ್ ಗಗನಯಾನಿ' ಆಗಿರಬಾರದೇಕೆ ?

## ಉಪಸಂಹಾರ :

ಮೇಲೆ ಮಂಡಿಸಿದ ಎಲ್ಲ ವಿಚಾರಗಳ ಕ್ರೋಢೀಕರಣದಿಂದಾಗಿ ಒಂದು ವಿಷಯ ಸ್ಪಷ್ಟ ಪಡುತ್ತದೆ. ಅದು-ನಮ್ಮ ಇಂದಿನ ಪರಿಸರಕ್ಕೆ ಮೂರ್ತಿ ಪೂಜೆ ಸರ್ವಥಾ ಸಲ್ಲದು. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, 'ದೇವರು' ಒಬ್ಬ ವ್ಯಕ್ತಿಯಲ್ಲ; ಒಂದು ಶಕ್ತಿ. ದೇವರ ಪೂಜೆ ಎಂದರೆ ಶಕ್ತಿ ಪೂಜೆಯಾಗಬೇಕೇ ಹೊರತು ವ್ಯಕ್ತಿ ಪೂಜೆಯಾಗಬಾರದು. ಆರ್ಯಜನಾಂಗ ಈ ವಿಧದ ಶಕ್ತಿಪೂಜೆಯನ್ನು ಮಾಡುತ್ತಿದ್ದುದನ್ನು ಗಮನಿಸಿದರೆ, ಅವರು ಸಾಮಾಜಿಕವಾಗಿ ಹಾಗೂ ವೈಜ್ಞಾನಿಕವಾಗಿ ಸತ್ಯವರ್ತಿಗಳಾಗಿದ್ದರೆನ್ನಬಹುದೇ ವಿನಾ ಅವರು ಮೂಢಮತಿಗಳಾಗಿದ್ದರೆನ್ನಲು ಅಳವಿಲ್ಲ, ಆಸ್ಪದವೂ ಇಲ್ಲ.

ಸಾಮಾಜಿಕ ಸನ್ನಿವೇಶ ಹಾಗೂ ವೈಜ್ಞಾನಿಕ ಪರಿಸರಗಳನ್ನು ಸಂಶ್ಲೇಷಿಸಿ ನೋಡಿದರೆ ನಮಗೆ ಇಂದು 'ದೇವರ' ಪೂಜೆ ಮಾಡುವಷ್ಟು ತಾಳ್ಮೆಯಾಗಲೀ, ವ್ಯವಧಾನವಾಗಲೀ ಇಲ್ಲವೆಂದು ತೋರುತ್ತದೆ. ಆದರೂ ಚಿರನೂತನ ಚೇತನಾ ಸ್ವರೂಪಿಯಾದ ಆ ದೇವರ ಸ್ಮರಣೆ ನಮಗೆ ಅವಶ್ಯವಾಗಬಹುದು. ಹಾಗಾದಾಗ, ನೈಸರ್ಗಿಕ ಶಕ್ತಿಗಳ ಪೂಜೆ ಮಾಡುವ ಮನೋಭಾವ ನಮ್ಮಲ್ಲಿ ಬೆಳೆದು ಬರಬೇಕು. ನಾವು ಇಂದು ಆಚರಿಸುತ್ತಲಿರುವ 'ಮೂರ್ತಿ ಪೂಜೆ'ಯ ವಿರುದ್ಧ ಹೋರಾಡಬಲ್ಲ 'ನಾಸ್ತಿಕತೆ' ನಮಗೆ ಅಗತ್ಯವಾಗಿ ಬೇಕು. ✡



ಇಬ್ಬರು ಮೂರ್ಖರು ಸೈಕಲ್ ಮೇಲೆ ವಿಹಾರಾರ್ಥ ಹೊರಟಿದ್ದರು. ಸ್ವಲ್ಪ ಪ್ರಯಾಣದ ನಂತರ ಒಬ್ಬಾತ ತನ್ನ ಸೈಕಲ್‌ನ್ನು ನಿಲ್ಲಿಸಿ ಹಿಂದಿನ ಚಕ್ರದ ಗಾಳಿಯನ್ನು ತೆಗೆದುಬಿಟ್ಟ. ಅದೇಕೆ ಹಾಗೆ ಮಾಡಿದ್ದೆಂದು ಇನ್ನೊಬ್ಬಾತ ಕೇಳಲು ಆತ, "ಸೀಟಿನ ಎತ್ತರ ಕಡಿಮೆ ಮಾಡಿದೆ, ಕಾಲಿಗೆ ನೆಲ ಎಟಕುತ್ತಿರಲಿಲ್ಲ" ಎಂದ! ಆತನ ಮಿತ್ರ ತಕ್ಷಣ ಸ್ಪ್ಯಾನರ್ ತೆಗೆದುಕೊಂಡು ತನ್ನ ಸೈಕಲ್ಲಿನ ಹ್ಯಾಂಡಲ್ ಬಾರನ್ನು ಬಿಚ್ಚಿ ಅದನ್ನು ವಿರುದ್ಧ ದಿಕ್ಕಿಗೆ ತಿರುಗಿಸಿ ಪುನಃ ಕೂಡಿಸಿದ. ನಂತರ ಸಿಟ್ಟಿನಿಂದ ತನ್ನ ಮಿತ್ರನಿಗೆ ಹೇಳಿದ, "ನಾನು ಹಿಂತಿರುಗುತ್ತಿದ್ದೇನೆ. ನಿನ್ನಂತಹ ಮೂರ್ಖರ ಜೊತೆ ಪ್ರಯಾಣ ಮುಂದುವರಿಸಲಾರೆ!"

-ಶ್ರೀಧರ, ಹೊನ್ನಹಳ್ಳಿ

ವಿಶಾಲ ಪ್ರಪಂಚವು ಇಂದು ತೈಲ ಸಮಸ್ಯೆಯನ್ನು ಎದುರಿಸಬೇಕಾಗಿದೆ, ಕೆಲವರ ಹಟಮಾರಿತನದಿಂದ. ಕಾರಣ ಆ ಸಮಸ್ಯಾನಿವಾರಣೆಗಾಗಿ ಮೂಡಿದ ಕೆಲ ವಿಚಾರಗಳು ಇಲ್ಲಿವೆ.

# ಪೆಟ್ರೋಲಿಗೆ ಬದಲು...

ಎಸ್. ವೆಂಕಟೇಶಮೂರ್ತಿ

ಕಲ್ಲಿದ್ದಲು, ಎಣ್ಣೆ, ಕಟ್ಟಿಗೆಗಳಂತಹ ಸಾಂಪ್ರದಾಯಿಕ ಇಂಧನಗಳನ್ನು ಅವಲಂಬಿಸಿರುವ ಮಾನವ ಕೋಟಿ ಶಕ್ತಿಯ ಬಿಕ್ಕಟ್ಟಿಗೆ ಸಿಕ್ಕಿಕೊಂಡಿದೆ. ಈ ಬಿಕ್ಕಟ್ಟಿನ ಪರಿಸ್ಥಿತಿ ಇನ್ನೂ ಕೆಲವಾರು ವರ್ಷ ಮುಂದುವರಿಯಬಹುದು. ಪರಮಾಣು ಶಕ್ತಿ, ಸೌರಶಕ್ತಿ–ಇವು ವ್ಯಾಪಕವಾಗಿ ಜನರಿಗೆ ಲಭಿಸಲು ಇನ್ನೂ ಕೆಲವು ವರ್ಷಗಳು ಬೇಕು. ಪರಮಾಣು ಶಕ್ತಿ ಮತ್ತು ಸೌರ ಶಕ್ತಿಗಳನ್ನು ಇಂದಿನ ತಾಂತ್ರಿಕತೆ ನೇರ ಬಳಕೆಗೆ ಬೇಕಾದ ರೂಪದಲ್ಲಿ ಒದಗಿಸಲು ಸಿದ್ಧವಾಗಿಲ್ಲ. ಶಕ್ತಿಯ ರೂಪಾಂತರದ ಪ್ರಾಮುಖ್ಯತೆ ಮುಂದೆ ಹೆಚ್ಚುತ್ತದೆ. ಈ ಎಲ್ಲ ಸಮಸ್ಯೆಗಳಿಗೆ ಪರಿಹಾರ–ನೀರಿನ ಬಳಕೆ! ವಿದ್ಯುತ್ತನ್ನು ಪ್ರಯೋಗಿಸಿ ನೀರಿನಿಂದ ಜಲಜನಕ ಪಡೆಯಬಹುದು. ವಾಹನ ಚಾಲನೆಗೆ, ಉಷ್ಣ ಉತ್ಪಾದನೆಗೆ ಜಲಜನಕವನ್ನು ಬಳಸಬಹುದು.

ಫ್ಲೋರೆನ್ಸ್‌ನ ಇಗ್‌ನೇಸ್ಸಿ ಎಂಬ ಸಂಶೋಧಕರು ಎಲ್ಲ ವಾಹನಗಳ ಇಂಜಿನ್‌ಗಳು ನಲ್ಲಿ ನೀರಿನಿಂದ ಕೆಲಸ ಮಾಡುವಂತೆ ಸಾಧ್ಯವಾಗಿಸುವ ಉಪಕರಣವೊಂದನ್ನು ತಯಾರಿಸಿದ್ದಾರೆ. ಈ ಉಪಕರಣವು ನೀರನ್ನು ಅದರ ಘಟಕಗಳಾಗಿ (ಜಲಜನಕ ಮತ್ತು ಆಮ್ಲಜನಕ) ವಿಭಜಿಸುವುದು. ಅನಂತರ ಜಲಜನಕವನ್ನು ಶಕ್ತಿಯ ಆಕರವಾಗಿ ಉಪಯೋಗಿಸುವುದು.

ಜಲಜನಕವನ್ನು ಬಳಸುವ ಕಾರಿನ ಇಂಜಿನ್ನು ಹೇಗಿರಬೇಕು? ನೀರು, ಗಾಳಿ, ಪೆಟ್ರೋಲ್‌ಗಳ ರಾಸಾಯನಿಕ ಪ್ರತಿಕ್ರಿಯೆಯಿಂದ ಜಲಜನಕ, ಇಂಗಾಲದ ಮಾನಾಕ್ಸೈಡ್ ಮತ್ತು ಇಂಗಾಲಾಮ್ಲಗಳ ಮಿಶ್ರಣವನ್ನು ಉತ್ಪಾದಿಸಿ, ಈ ಮಿಶ್ರಣವನ್ನು ಪೆಟ್ರೋಲಿನ ಬಾಷ್ಪ ಮತ್ತು ಗಾಳಿಗಳೊಂದಿಗೆ ಸೇರಿಸಿ ಇಂಜಿನ್ ಒಳಗೆ ಚಿಮ್ಮಿಸಬೇಕು. ಕಾರ್ಬೊರೇಟರ್‌ನ ಬದಲು ಇಂಧನ ಪ್ರವೇಶವನ್ನು ನಿಯಂತ್ರಿಸಬಲ್ಲ ಬೇರೊಂದು ವ್ಯವಸ್ಥೆ ಮಾಡಬೇಕು. ಇವೆಲ್ಲ ಒಂದು ಅಂತರ್ದಹನ ಇಂಜಿನ್ನಿನಲ್ಲಿ ನಡೆಯುತ್ತವೆ. ಇದರಲ್ಲಿ ಮುಖ್ಯಪಾತ್ರ ಜಲಜನಕದ್ದು. ವ್ಯೋಮನೌಕೆ ಮತ್ತು ರಾಕೆಟ್ಟುಗಳ ವಿನ್ಯಾಸಕ್ಕೆ ಹೆಸರಾದ ಅವೇರಿಕದ ಜೆಟ್ ಪ್ರೊಪಲ್ಷನ್ ಲ್ಯಾಬೊರೆಟರಿ (J. P. L.) ಯಲ್ಲಿ ರೂಪಿಸಲ್ಪಡುತ್ತಿರುವ ಕಾರಿಗೆ ಬೇಕಾದ ಇಂಜಿನ್ನು ಇಂತಹದು.

ಜಲಜನಕದ ಬಳಕೆಯಿಂದ ಒಂದು ಮೈಲು ದೂರಕ್ಕೆ ಶೇಕಡಾ ಹತ್ತರಷ್ಟು ಕಡಿಮೆ ಪೆಟ್ರೋಲ್ ಖರ್ಚಾಗುತ್ತದೆ. ಇದು ಜೆ. ಪಿ. ಎಲ್. ಇಂಜನಿಯರ್‌ಗಳ ಹೇಳಿಕೆ. ಆದರೆ ೧೫ ಗ್ಯಾಲನ್ ಪೆಟ್ರೋಲ್‌ಗೆ [illegible] ಗ್ಯಾಲನ್ ನೀರಿನಂತೆ ಆಗ್ಗಾಗ್ಗೆ ನೀರು ತುಂಬಿಸುವ ವ್ಯವಸ್ಥೆ ಬೇಕೇಬೇಕು. ಇದರಿಂದ ಇಂಗಾಲದ ಮಾನಾಕ್ಸೈಡ್ ಮತ್ತಿತರ ಮಲಿನಕಾರಿ ಅನಿಲಗಳ ಪ್ರಮಾಣವೂ ಕಡಿಮೆಯಾಗುವುದಂತೆ!

ನ್ಯೂಯಾರ್ಕಿನ ಬ್ರೂಕ್ ಹಾವೆನ್ ನ್ಯಾಷನಲ್ ಲ್ಯಾಬೊರೇಟರಿಯಲ್ಲಿ ಜಲಜನಕವನ್ನು ನೇರವಾಗಿ ಉಪಯೋಗಿಸುವ ಬೇರೆಯೇ ಆದ ವಿಧಾನಗಳನ್ನು ಪರಿಶೀಲಿಸುತ್ತಿದ್ದಾರೆ. ಆದರೆ ಅನಿಲ ರೂಪದಲ್ಲಿ ಜಲಜನಕವನ್ನು ಉಪಯೋಗಿಸಲು ಸಾಧ್ಯವಿಲ್ಲ. ಏಕೆಂದರೆ ಇದು ಹೆಚ್ಚು ಜಾಗವನ್ನು ಆಕ್ರಮಿಸುವುದು. ಆದ್ದರಿಂದ ವಿಮಾನ, ಬಸ್ಸುಗಳಂತಹ ವಾಹನಗಳಲ್ಲಿ ಅನಿಲ ಜಲಜನಕದ ಉಪಯೋಗವು ತ್ರಾಸದಾಯಕ. ಜಲಜನಕ ಅನಿಲವನ್ನೇ ನೇರವಾಗಿ ಬಳಸುವ ಬದಲು ಜಲಜನಕ ಮತ್ತು ಕೆಲವು ಲೋಹಗಳ ಕ್ರಿಯೆಯಿಂದ ಉಂಟಾಗುವ ಹೈಡ್ರೈಡ್‌ಗಳೆಂಬ ಸಂಯುಕ್ತಗಳನ್ನು ಈ ಕಾರ್ಯಕ್ಕೆ ಏಕೆ ಬಳಸಬಾರದು ಎಂಬುದಾಗಿ ಸಂಶೋಧನೆ ನಡೆಸಿದ್ದಾರೆ.

ಹೈಡ್ರೈಡ್‌ಗಳು ಬಿಸಿಗೊಂಡಾಗ ಜಲಜನಕ ಬಿಡುಗಡೆಯಾಗುವುದು; ಕಡಿಮೆ ಉಷ್ಣತೆಯಲ್ಲಿ ಜಲಜನಕವನ್ನು ಬಿಡುಗಡೆ ಮಾಡುವ ಹಗುರವಾದ ಹೈಡ್ರೈಡ್‌ಗಳು ಉಪಯುಕ್ತ. ಮೆಗ್ನೀಸಿಯಂ-ನಿಕ್ಕಲ್ ಹೈಡ್ರೈಡ್ ಹಗುರವಾಗಿರುವುದಾದರೂ ಅದನ್ನು ೨೬೦ ಡಿಗ್ರಿ ತಾಪಕ್ಕೆ ಕಾಯಿಸಿದಾಗ ಮಾತ್ರ ಜಲಜನಕ ಬಿಡುಗಡೆಯಾಗುತ್ತದೆ. ಇದಕ್ಕಿಂತ ಉತ್ತಮವೆಂದರೆ ಕಬ್ಬಿಣ-ಟೈಟಾನಿಯಂ ಹೈಡ್ರೈಡ್. ಇದು ಕಡಿಮೆ ತಾಪದಲ್ಲಿ ಜಲಜನಕವನ್ನು ಬಿಟ್ಟುಕೊಡುವುದಾದರೂ ಅಷ್ಟು ಹಗುರವಿಲ್ಲ. ಹಗುರವೂ ಆಗಿದ್ದು ಕಡಿಮೆ ತಾಪದಲ್ಲಿ ಜಲಜನಕ ಕೊಡುವ ಹೈಡ್ರೈಡ್‌ಗಳಿಗಾಗಿ ಸಂಶೋಧನೆ ನಡೆಯುತ್ತಿದೆ.

ಲೋಹ ಹೈಡ್ರೈಡನ್ನು ಬಳಸುವ ಕಾರಿನ ಕೋಶದಲ್ಲಿ ಪುಡಿರೂಪದಲ್ಲಿ ಲೋಹವನ್ನು ತುಂಬಿರಬೇಕು. ಬೇರೆ ಬೇರೆ ನಿಲ್ದಾಣಗಳಲ್ಲಿ ಒತ್ತಡ ಪೂರಿತ ಜಲಜನಕವನ್ನು ಒದಗಿಸಿ ಲೋಹವನ್ನು ಅದರ ಹೈಡ್ರೈಡಾಗಿ ಪರಿವರ್ತಿಸಬೇಕು. ರೇಡಿಯೇಟರನ್ನು ಸುತ್ತಿಬರುವ ಬಿಸಿನೀರು ಲೋಹ ಹೈಡ್ರೈಡನ್ನು ಬಿಸಿಮಾಡಿ ಜಲಜನಕವನ್ನು ಬಿಡುಗಡೆಮಾಡುತ್ತದೆ.

ಈ ಶತಮಾನದ ಮೊದಲ ದಶಕಗಳಲ್ಲಿ ಹೆನ್ರಿ ಫೋರ್ಡ್‌ನ ಮಾದರಿ ಕಾರುಗಳು ರಸ್ತೆಯಲ್ಲಿ ಕಾಣಿಸಿಕೊಂಡ ಕೂಡಲೇ ಜನಪ್ರಿಯವಾದುವು. ಅಂಥವೇ ಜನಪ್ರಿಯತೆಯನ್ನು ಜಲಜನಕ ಚಾಲಿತ ಕಾರುಗಳು ಗಳಿಸುತ್ತವೆಯೇ ಎಂಬುದು ಸಂಶಯ. ಆದರೆ ಪೆಟ್ರೋಲ್ ಉಳಿತಾಯ, ಮಾಲಿನ್ಯ ನಿವಾರಣೆಗಳಿಂದಾಗಿ ಇಂತಹ ಕಾರುಗಳ ತಯಾರಿಕೆಗೆ ಪ್ರೇರಣೆ ಬಂದಿದೆ.

ಪೆಟ್ರೋಲಿಗೆ ಬದಲು ಜಲಜನಕ, ನೀರುಗಳನ್ನಲ್ಲದೆ ಹಂದಿಯ ಸೆಗಣಿ, ಅಡಿಗೆ ಅನಿಲ, ಅಮೋನಿಯ, ವಿದ್ಯುಚ್ಛಕ್ತಿ ಮೊದಲಾದವುಗಳನ್ನು ಇಂಧನಗಳಂತೆ ಬಳಸುವ ದಿಶೆಯಲ್ಲಿ ಹಲವಾರು ಯಶಸ್ವೀ ಪ್ರಯೋಗಗಳು ನಡೆಯುತ್ತಿವೆ.

ವಾತಾವರಣದ ಮಾಲಿನ್ಯವನ್ನು ಕಡಿಮೆ




ವನಸ್ಪತಿ ಅಂದರೆ... ಅದೊಂದು ತುಂಬಾ... ಅಪರೂಪದ ವಸ್ತು. ಅಷ್ಟು ತಿಳಿದುಕೊಂಡರೆ ಸಾಕು

ಮಾಡುವುದು, ಕಡಿಮೆ ಖರ್ಚಿನಲ್ಲಿ ಇಂಜಿನ್ನು ಕಾರ್ಯ ನಿರ್ವಹಿಸುವಂತೆ ಮಾಡುವುದು ಹೇಗೆ ಸಾಧ್ಯ? ಇದಕ್ಕೆ ಹಂದಿ ಸೆಗಣಿಯನ್ನು ಉಪಯೋಗಿಸಿ ಎನ್ನುತ್ತಾರೆ ಬ್ರಿಟಿಷ್ ಸಂಶೋಧಕ ಹೆರಾಲ್ಡ್ ಬೇಟ್, ಹಂದಿ ಸೆಗಣಿಯಿಂದ ಮಿಥೇನನ್ನು ಉತ್ಪಾದಿಸಬಲ್ಲ ಮಿ॥ ಬೇಟ್‌ರವರ ಪರಿವರ್ತನಾ ಉಪಕರಣವು ಅರ್ಧ ಕಿಲೋಗ್ರಾಂ ತೂಗುವುದು, ಬೆಲೆ ೨೫೦ ರೂ. ಗಳು. ಮೀಥೇನ್ ಅನಿಲದಿಂದ ಇಂಜಿನ್ನು ಚಲಿಸುವುದು.

ಮದ್ರಾಸಿನ ಯಂತ್ರಶಿಲ್ಪಿ ಶ್ರೀಯುತ ಡಿ. ಕಣ್ಣನ್ ಎಂಬಾತ ಪೆಟ್ರೋಲಿಗೆ ಬದಲು ಅಡಿಗೆ ಅನಿಲದಿಂದ ಚಲಿಸಬಲ್ಲ ಕಾರನ್ನು ಅಭಿವೃದ್ಧಿಗೊಳಿಸಿ ಪ್ರದರ್ಶಿಸಿದ್ದಾರೆ. ಕಾರ್ಬೋರೇಟರ್‌ನಲ್ಲಿ ಸ್ವಲ್ಪ ಬದಲಾವಣೆ ಮತ್ತು ಇಂಜಿನ್ನಿನ ಸಂಕೋಚನವನ್ನು ಹೆಚ್ಚಿಸಲು ಸಿಲಿಂಡರ್‌ನ ತಲೆಭಾಗದ ಮೇಲ್ಮೈನಲ್ಲಿ ಸ್ವಲ್ಪ ಬದಲಾವಣೆಗಳನ್ನು ಮಾಡಬೇಕು ಎಂದು ಶ್ರೀ ಕಣ್ಣನ್ ಹೇಳುತ್ತಾರೆ. ಖರ್ಚುಸಹ ಬಹಳ ಕಡಿಮೆ

ನವದೆಹಲಿಯ ಭಾರತೀಯ ತಾಂತ್ರಿಕ ಮಂದಿರದಲ್ಲಿ (I.I T.) ಅಮೋನಿಯ ಆವಿಯಿಂದ ಚಲಿಸಬಲ್ಲ ಆಟೋ ಇಂಜಿನ್ನಿನ ಪರೀಕ್ಷೆ ನಡೆಯುತ್ತಿದೆ. ಗ್ಯಾಸೊಲೀನ್ ಇಂಜಿನ್ನಿನಿಂದ ದೊರೆಯಬಹುದಾದ ಶಕ್ತಿಯ ಶೇಕಡಾ ೬೦ ರಷ್ಟು ಹೆಚ್ಚು ಶಕ್ತಿಯನ್ನು ಅಮೋನಿಯ ಇಂಜಿನ್ನಿನಿಂದ ಪಡೆಯಬಹುದು. ಇದನ್ನು ರೂಪಿಸಿದವರು ಪ್ರೊ. ಮಾಥೂರ್ ಮತ್ತು ಅವರ ಸಹೋದ್ಯೋಗಿಗಳು. ನೀರು ಮತ್ತು ಗಾಳಿಗಳ ನೆರವಿನಿಂದ ಪಡೆಯಬಹುದಾದ ಅಮೋನಿಯ ಅನಿಲವು ಪೆಟ್ರೋಲ್‌ಗೆ ಉತ್ತಮ ಬದಲಿ ವಸ್ತುವಾಗಬಲ್ಲುದು ಎಂಬುದಾಗಿ ಪ್ರೊ. ಮಾಥೂರ್ ಹೇಳುತ್ತಾರೆ. ಇದು ಮಾಲಿನ್ಯ ರಹಿತವೂ ಹೌದು.

ಮುಂಬಯಿಯ ವಿಕ್ಟೋರಿಯ ಜೂಬ್ಲಿ ತಂತ್ರ ಮಂದಿರದ ಪ್ರೊ. ಜೆ. ಎನ್. ಷೇಟ್‌ರವರು ವಿದ್ಯುತ್ ಕಾರೊಂದನ್ನು ವಿನ್ಯಾಸಗೊಳಿಸಿರುತ್ತಾರೆ. ಈಗಿನ ಪೆಟ್ರೋಲ್ ಕಾರುಗಳಿಗಿಂತ ಇದು ಶೇಕಡಾ ೪೦ ರಷ್ಟು ಕಡಿಮೆ ಬೆಲೆ. ಹೊಗೆ ಇಲ್ಲದಿರುವುದರಿಂದ ವಾಯು ಮಲಿನತೆಗೆ ಕಾರಣವಿಲ್ಲ. ಈ ಕಾರಿನಲ್ಲಿ ನಾಲ್ಕು ಜನರು ಕುಳಿತುಕೊಳ್ಳಬಹುದು ಎರಡು ಬಾಗಿಲುಗಳುಳ್ಳ ಈ ಕಾರಿನ ಮೈಕಟ್ಟು ಫೈಬರ್ ಗ್ಲಾಸಿನಿಂದಾಗಿದೆ. ೪೮ ವೋಲ್ಟ್‌ಗಳ ಲೆಡ್–ಆಸಿಡ್ ವಿದ್ಯುತ್ಕೋಶದ ಬಳಕೆಯಿಂದ ೬೦ ಆಂಪ್ಲಿಯರ್‌ಗಳಷ್ಟು ವಿದ್ಯುತ್ ಒದಗಿಸಲಾಗುತ್ತದೆ. ೨.೫ ಹಾರ್ಸ್‌ಪವರ್ ಶಕ್ತಿಯುಳ್ಳ ಈ ಕಾರು ಗಂಟೆಗೆ ೫೫ ಕಿಲೋಮೀಟರ್‌ನಷ್ಟು ಪರಮಾವಧಿ ವೇಗದಲ್ಲಿ ಚಲಿಸಬಲ್ಲದು. ಆದರೆ ೫೦ ಕಿಲೋಮೀಟರ್‌ಗೆ ವಿದ್ಯುತ್ಕೋಶವನ್ನು ವಿದ್ಯುದೀಕರಣಗೊಳಿಸಬೇಕಾಗುವುದು. ಖರ್ಚು ೫೦ ಕಿಲೋಮೀಟರಿಗೆ ಒಂದು ರೂಪಾಯಿ ಮಾತ್ರ.

ಬ್ಯಾಟರಿ ಶಕ್ತಿಯಿಂದ ನಡೆಯುವ ಕಾರುಗಳ ಬಗ್ಗೆ ಸಂಶೋಧನೆ ನಡೆಸಲು ಕೇಂದ್ರ ಸರ್ಕಾರದವರು ಇಪ್ಪತ್ತು ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಿದ್ದಾರೆ. ✡



ಬಿಲ್ಲುಗಾರನು ಬಿಟ್ಟ ಬಾಣವು ಒಬ್ಬನನ್ನು ಕೊಲ್ಲಬಹುದು, ಕೊಲ್ಲಲಿಕ್ಕಿಲ್ಲ, ಅದೇ ಬುದ್ಧಿವಂತನೊಬ್ಬ ತನ್ನ ಚಾತುರ್ಯದಿಂದ ಹೂಡಿದ ಒಳಸಂಚಿನಿಂದ ಇನ್ನೂ ಬಸಿರಿನಲ್ಲಿದ್ದ ಕೂಸುಗಳು ಸಹ ಕೊಲ್ಲಲ್ಪಡುವವು.

— ಆರ್ಯಚಾಣಕ್ಯ

ತೆಲುಗು ಕಥೆ



ಮೂಲ : ಪವನಿ ನಿರ್ಮಲ ಪ್ರಭಾವತಿ
ಕನ್ನಡಕ್ಕೆ : ಎಂ. ಎಲ್. ರಾಘವೇಂದ್ರ

"ಬಾ! ವರಲಕ್ಷ್ಮೀ! ಬಾ! ಯಾಕಿನ್ನೂ ಬರಲಿಲ್ಲ ಅಂದ್ಕೊಂತಿದ್ದೆ. ನನ್ನ ಚಿಕ್ಕ ಸೊಸೇನ ನೋಡುವೆಯಂತೆ ಬಾ!" ವರಂಡಾ ಮೆಟ್ಟಿಲು ಹತ್ತುತ್ತಿರುವಂತೆಯೇ ಎದುರಾಗಿ ಬಂದು ಎಳೆದುಕೊಂಡು ಹೋದಳು ಮೀನಾಕ್ಷಮ್ಮ. ವರಲಕ್ಷ್ಮಿ ಕುತೂಹಲದಿಂದ ಅನುಸರಿಸಿದಳು. ಮದುವೆ ಅಷ್ಟೇನೂ ಆಡಂಬರವಾಗಿದ್ದು ಕಂಡು ಬರಲಿಲ್ಲ. ಆದರೂ, ಮನೆತುಂಬಾ ವಿವಿಧ ವರ್ಣದ ರಂಗವಲ್ಲಿ... ಹೊಸಿಲುಗಳಿಗೆ ಅರಿಸಿನ ಕುಂಕುಮ, ಮಾವಿನ ತಳಿರುತೋರಣ ಮದುವೆ ಕಳೆ ತಂದು ಎಲ್ಲೆಲ್ಲೂ ವ್ಯಕ್ತವಾಗುತ್ತಿರುವಂತೆ ತೋಚಿತು ವರಲಕ್ಷ್ಮಿಗೆ. ಒಳಕೋಣೆಯಲ್ಲಿ ಐದಾರು ಮಂದಿ ಮುತ್ತೈದೆಯರ ಮಧ್ಯೆ ತಲೆ ಬಾಗಿಸಿ ಕುಳಿತಿದ್ದಳು ಮದುಮಗಳು.

"ನೋಡು! ಚೆನ್ನಾಗಿ ನೋಡು! ಹುಡ್ಗಿ ಹೇಗಿದ್ದಾಳೆ?" ಗತ್ತಿನಿಂದ ಹೇಳಿದ್ದಳು ಮೀನಾಕ್ಷಮ್ಮ. ಆ ಮಾತಿನಲ್ಲಿ ಒಂದು ರೀತಿಯ ಸವಾಲಿತ್ತು.

ವರಲಕ್ಷ್ಮಿ ಕೂಲಂಕಷವಾಗಿ ನೋಡಿದಳು. ಇಲ್ಲಿನ ಭಾಷೆ ಬಾರದ ಹೆಣ್ಣು. ಅಲ್ಲಿ ನೆರೆದ ಮಂದಿಯ ಮಾತು ಅರ್ಥವಾಗದೆ, ಕೇಳುವ ಪ್ರಶ್ನೆಗಳಿಗೆ ಉತ್ತರಿಸಲಾಗದೆ ನಿಸ್ಸಹಾಯ ಸ್ಥಿತಿಯಲ್ಲಿ ಕುಳಿತಿರುವ ಚಂದನದ ಬೊಂಬೆಯಂತಿರುವ ಆ ಹುಡುಗಿಯತ್ತ ನೋಡುತ್ತಿದ್ದರೆ, ವರಲಕ್ಷ್ಮಿಗೆ ಮರುಕ ಮೂಡಿ ಬಂದಿತ್ತು. ಎತ್ತಲೋ ಬೇಡವೋ ಎಂಬಂತೆ ತಲೆ ಎತ್ತಿ ತಮ್ಮಿಬ್ಬರತ್ತ ನೋಡಿ, ಮತ್ತೆ ಮೊದಲಿನಂತೆ ತಲೆ ತಗ್ಗಿಸಿದಳು ಹುಡುಗಿ.

"ಹೇಗಿದ್ದಾಳೆ?" ಮೀನಾಕ್ಷಮ್ಮ ಮತ್ತೆ ಕೇಳಿದಳು.

"ಚಂದನದ ಗೊಂಬೆ ಇದ್ದಾಗೆ ಇದ್ದಾಳೆ! ಚಿಕ್ಕಮ್ಮಾ!" ಎಂದಳು ವರಲಕ್ಷ್ಮಿ. ತುಟಿಗಳ ಮೇಲೆ ನಗು ಮಿನುಗಿತ್ತು.

"ಹಾಗೆ ಹೇಳು ಲಕ್ಷ್ಮೀ, ನನ್ ಮಗ್ನಿಗೇನೆ ಕಮ್ಮಿ? ರೂಪದಲ್ಲೇನು ಕಡ್ಮೇನೆ! ಮನ್ಮಥ! ಏನೋ ಸ್ವಲ್ಪ ಮೊದ್ದು ಅಷ್ಟೆ! ಈ ಕಾಲದ ಮೋಸ! ಕುಯುಕ್ತಿ ಗೊತ್ತಿಲ್ಲ– ಅಷ್ಟೆ!"— ಮೀನಾಕ್ಷಮ್ಮನ ವಾಕ್‌ಝರಿ ಸಾಗುತ್ತಿರುವಂತೆಯೇ ವರಲಕ್ಷ್ಮಿಗೆ ಸತ್ಯದ ಆಕಾರ ನೆನಪಿಗೆ ತಂದಿತು. ಎಷ್ಟೇ ಆದರೂ ಹೆತ್ತ ತಾಯಿ ಮೀನಾಕ್ಷಮ್ಮ ಇಂಥ ಆತ್ಮ ವಂಚನೆಗೆ ಬಲಿಯಾಗುವಳೆಂದು ಅನ್ನಿಸಿರಲಿಲ್ಲ.

ಮೇಲ್ದುಟಿ ಕಚ್ಚಿ ತಿಂದಂತಿರುವ, ಕಿತ್ತಿಟ್ಟಗುವಂತಿರುವ, ಉಬ್ಬಿದ ಎರಡು ಕಣ್ಣು ಗುಡ್ಡೆ

ಗಳು, ತೊದಲು ಮಾತು, ಹುಟ್ಟು ಕಿವುಡು, ಮುಳ್ಳು ಹಂದಿಯಂತಹ ತಲೆಗೂದಲು, ತನ್ನ ಚರ್ಯೆಯಾಗಲಿ, ತನ್ನ ಬೇಕು-ಬೇಡುಗಳ ಪರಿವೆಯಾಗಲಿ, ಏನೊಂದೂ ಅರಿಯದ ಹುಚ್ಚು ಸತ್ಯ... ಮೀನಾಕ್ಷಮ್ಮನ ದೃಷ್ಟಿಯಲ್ಲಿ ಮನ್ಮಥ, ಕೇವಲ ತುಸು ಮೊದ್ದನಂತೆ...!

"...ಅದಕ್ಕೆ ಮಂಗಳನ್ನ ಕೊಟ್ರೂಂತ ಕೇಳಿದ್ರೆ, ಮೂತಿ ತಿರುವಿದವರ ಮುಖ ಬಾಡಿ ಹೋಗುವ ಹಾಗೆ, ಬೆಲೆ ಒಂದು ನೂರು ರೂಪಾಯಿ ಜಾಸ್ತಿಯಾದರೂ ಸರಿಯು-ಚಿಂತಿಲ್ಲ. ಮುತ್ತಿನಂತಹ ಹುಡ್ಗೀನ ಹುಡುಕು-ವಂತೆ ಹೇಳಿದೆ ನಮ್ಮ 'ಮಧ್ಯವರ್ತಿ'ಗೆ. ಪಾಲಘಾಟು, ಚಿದಂಬರಂ... ಅಲ್ಲೆಲ್ಲ ಅಲೆದು, ಎಂಟ್ನೂರು ಹೋದ್ರೂ ಚಿಂತಿಲ್ಲಾಂತ ಕೊಟ್ಟು ತಂದಾಯ್ತು.... ಏನಂತೀಯಾ?" ಮೀನಾಕ್ಷಮ್ಮ ಹೆಮ್ಮೆಯಿಂದ ಹೇಳಿದಳು. ವರಲಕ್ಷ್ಮಿ ತಲೆ ತಗ್ಗಿಸಿದಳು.

ಒಂದೇ ಸಮನೆ ತುಸು ಗಟ್ಟಿಯಾಗಿ ಆಕೆ ಮಾತನಾಡುತ್ತಿರುವುದನ್ನು ಕಂಡು ಏನೂ ಅರ್ಥವಾಗದಿದ್ದರೂ, ಬೊಟ್ಟು ಮಾಡಿ ತೋರಿದ ರೀತಿಯಿಂದ ಅದು ತನ್ನನ್ನು ಕುರಿ-ತಾದುದೆ ಎನ್ನುವ ಅನುಮಾನ, ಏನೋ ಭಯ; ಹುಡುಗಿ ತನ್ನ ಬೊಗಸೆ ಕಣ್ಣುಗಳನು ಮತ್ತಷ್ಟು ವಿಶಾಲಗೊಳಿಸಿ ನೋಡತೊಡಗಿದಳು. ವರಲಕ್ಷ್ಮಿಗೆ ಯಾಕೋ ಹೊಟ್ಟೆಯಲ್ಲಿ ಕೈಯಿಟ್ಟು ಕಲಕಿದಂತಾಯಿತು. ತಾನೂ ಅದೇ ಮಣ್ಣಿನ ಮೇಲೆ ಹುಟ್ಟಿದವಳು! ತಾನೂ ಒಂದು ದಿನ ಹೀಗೆ ಇವಳಂತೆಯೇ ಇಲ್ಲಿಗೆ ಬಂದವಳು; ತಾನೂ, ಅಂದು ಬೆದರಿ ಕುಳಿತಿದ್ದಳು. ತನ್ನವರು, ತನ್ನ ಭಾಷೆ ಬಲ್ಲವರು ಇಲ್ಲಿ ಯಾರೂ ಇಲ್ಲ ಎಂದು ಎನಿಸಿದಾಗ ಎಲ್ಲಿಲ್ಲದ ಬೇಸರ. ಮುಂದೆ ಹೇಗೆ ಎನಿಸದಿರಲಿಲ್ಲ. ಸುತ್ತ ಕುಳಿತ ಮುತ್ತೈದೆಯರು, ಭಾಷೆ ಬಾರದೆಂದು ತಿಳಿದಿದ್ದರೂ ಆ ಹುಡುಗಿನ ಏನೇನೋ ಕೇಳುತ್ತಿದ್ದಾರೆ. "ನೀವೆಷ್ಟು ಜನ ಅಕ್ಕತಂಗಿಯರು? ತಂದೆ– ತಾಯಿ ಇದ್ದಾರೆಯೇ?"– ಇತ್ಯಾದಿ. ಆ ಕೇಳುವ ಧಾಟಿಯಲ್ಲಿ ಉತ್ತರದ ಅವಶ್ಯಕತೆ ಅಷ್ಟಾಗಿ ಇರದಿದ್ದರೂ 'ನಿನಗೆ ನಮ್ಮ ಭಾಷೆ ಬರೋಲ್ಲ! ನಾವು ನಿನ್ನ ಏನೇ ಬೈದರೂ ನಿನಗೆ ಅರ್ಥವಾಗೊಲ್ಲ!! ಎನ್ನುವ ವ್ಯಂಗ್ಯ ತುಂಬಿರುವಂತೆ ಅನಿಸಿತು ವರಲಕ್ಷ್ಮಿಗೆ. ಕಟುಕನ ಮುಂದೆ ನಿಲ್ಲುವ ಹಸುವಿನಂತೆ ಆ ಹುಡುಗಿ ತಲೆ ಬಗ್ಗಿಸಿಕೊಂಡಿದ್ದಳು.

"ಅಂದ್ಹಾಂಗೆ... ಆ ಹುಡ್ಗಿದೂ ನಿಮ್ಮ ದೇಶಾನೆ! ನಿಮ್ಮ ಭಾಷೆಯಲ್ಲಿ ಸ್ವಲ್ಪ ಹೊತ್ತು ಮಾತಾಡ್ತಿರು ವರಲಕ್ಷ್ಮಿ! ಪಾಪ... ಭಾಷೆ ಸ್ವಲ್ಪಾನೂ ಅರ್ಥವಾಗೊಲ್ಲ... ಹೊಸ ಜಾಗ... ಹೊಸ ಜನ... ಹುಡ್ಗಿ ಬೆದರಿ ಎಲ್ಲಿ ಮಂಕಾಗ್ತಾಳೋ ಅಂತ... ನಿನ್ನ ಬರಹೇಳ್ದೆ ಮುತ್ತೈದೆಯಾಗಿ... ಇನ್ನೊಂದು ಗಂಟೆಗೆಲ್ಲಾ ಪುರೋಹಿತ್ರು ಬರ್ತಾರೆ... ಏನೋ 'ಆ... ಊ...' ಅಂದು ಆಯ್ತು ಅನಿಸ್ಬಿಡ್ತಾರೆ... ನಾ ಹೋಗ್ಲಾ...?" ಉತ್ತರವನ್ನೂ ಎದುರು ನೋಡದೆ ಹೊರಟಿದ್ದಳು ಮೀನಾಕ್ಷಮ್ಮ.

"ನಿನ್ನ ಹೆಸರೇನು?" ತಮಿಳಿನಲ್ಲಿ ಮೃದುವಾಗಿ ಕೇಳಿದಳು ವರಲಕ್ಷ್ಮಿ. ಹುಡುಗಿಯು ಪಕ್ಕದಲ್ಲಿ ಕುಳಿತು ಸ್ನೇಹಪೂರ್ವಕ ನಗೆ ಬೀರಿದ್ದಳು.

ನಂಬದವಳಂತೆ ವರಲಕ್ಷ್ಮಿಯತ್ತ ನೋಡಿದಳು ಕ್ಷಣಕಾಲ...

"ನಿಮಗೆ ನಮ್ಮ ಭಾಷೆ ಬರುತ್ತೇ?" ತಮಿಳಿನಲ್ಲಿ ಅಚ್ಚರಿಯಿಂದ ನುಡಿದಿದ್ದಳು ಹುಡುಗಿ... ವರಲಕ್ಷ್ಮಿ ನಕ್ಕು," ಬರೋದೇನು? ನಾನು ಹುಟ್ಟಿದ್ದು ಪಾಲ್‌ಘಾಟಿನಲ್ಲಿ...ನೀನು ಚಿದಂಬರಂನಲ್ಲಿ...ಅಷ್ಟೇ ವ್ಯತ್ಯಾಸ! ನಾನೂ, ನಿನ್ನಂತೆಯೇ ಈ ದೇಶಕ್ಕೆ ಬಂದವಳು... ಕೊಂಡುಕೊಂಡು ಬಂದರು...!" ಮೃದುವಾಗಿ ಆ ಹುಡುಗಿಯ ಕೈಯನ್ನು, ತನ್ನ ಕೈಗೆ ತೆಗೆದುಕೊಂಡಳು ವರಲಕ್ಷ್ಮಿ.... ಆ ಸ್ಪರ್ಶದಲ್ಲಿ ತಾನು ಹುಟ್ಟಿದ ಮಣ್ಣಿನ ವಾಸನೆ... ಅಭಿಮಾನ– ಆಪ್ಯಾಯತೆ ತುಂಬಿದೆ. ಒಂದೇ ಪರಿಸ್ಥಿತಿಯಲ್ಲಿ ಭೇಟಿಯಾದ ಆಪ್ತರಲ್ಲಿ ಉಂಟಾಗುವ ಆನಂದಾನುಭೂತಿ ಇದೆ.... ಸಮುದ್ರದ ಮಧ್ಯೆ ಸಿಲುಕಿ ಮುಳುಗಿ ಹೋಗುತ್ತಿರುವ ವ್ಯಕ್ತಿಗೆ, ಹಠಾತ್ತನೆ ದೋಣಿಯೊಂದು ಪ್ರತ್ಯಕ್ಷವಾಗಿ, ರಕ್ಷಿಸಿದಾಗ ಉಂಟಾಗುವ, ಭಾವಾತೀತ

ವಾದ ಸುಖ–ಹಾಯಿ ಅನುಭವಕ್ಕೆ ಬಂದಿತ್ತು ಆ ಹುಡುಗಿಗೆ.

"ಇಷ್ಟಕ್ಕೂ ನಿನ್ನ ಹೆಸರೇ ಹೇಳಲಿಲ್ಲವಲ್ಲಾ!" ವರಲಕ್ಷ್ಮಿ ಮತ್ತೆ ಕೇಳಿದಳು-

"ಮರಕತು..."

"ತುಂಬಾ ಚನ್ನಾಗಿದೆ!"

ಮರಕತುಳ ಕಂಗಳಲ್ಲಿ ಬೆಳದಿಂಗಳಂತಹ ಬೆಳಕು...

"ಏನು ಹೆಸರೋ ಏನೋ ತಮಿಳರದು! ಎಲ್ಲ ವಿಚಿತ್ರ! ನೀವಿಬ್ರೂ ಮಾತಾಡ್ತೀರಿ...ನಾವು ಹೋಗ್ತೀವಿ...ನಮಗೇನು ಅರ್ಥವಾಗುತ್ತೆ... ಎಷ್ಟೊತ್ತು ತಾನೆ ಕೂರ್ಲಿಕ್ಕೆ ಸಾಧ್ಯ ಅದೂ ಮೂಕಬಸವರಂತೆ...!" ಅನ್ನುತ್ತ ಎದ್ದರು ಮುತ್ತೈದೆಯರು. ಅವರ ಮಾತು ಅರ್ಥವಾಗದಿದ್ದರೂ–ಅವರ ಮಾತಿನ ಧಾಟಿ ಮರಕತಳಿಗೆ ಹೇಗೋ ಅನ್ನಿಸಿತು...ಅಯೋಮಯವಾಗಿ ನೋಡಿದಳು ಅವರತ್ತ.

"ನೋಡು ವರಲಕ್ಷ್ಮೀ! ಮಾತಾಡೋದೇನೋ ಮಾತಾಡ್ತಿಯಾ...ನಿನಾದೆ, ನಿನ್ನ ಏರಿಸೋಹಾಗೆ ಮಾತ್ರ ಮಾಡ್ಬೇಡಾ ನಿನ್ನ ಶಿಷ್ಯಳನ್ನ...ನಿನ್ನ ಗಂಡನಿಗಿಂತಲೂ ಮಹಾ ಪೆದ್ದ ಪಾಪ! "ಹುಚ್ಚುಸತ್ಯ!" ಎಂದಳು ಕೊನೆಯಲ್ಲಿ ಹೊರಟ ಮಾಣಿಕ್ಯಂಬ.

ವರಲಕ್ಷ್ಮಿಗೆ ಆ ಕ್ಷಣದಲ್ಲಿ...ಅವರೆಲ್ಲಾ ಮನುಷ್ಯ ಸ್ವರೂಪದ ವಿಷದ ಹುಳುಗಳಂತೆ ಕಂಡರು!

"ಅವರೆಲ್ಲಾ ಏನಂದ್ರೂ ಅಕ್ಕಾ? ನನಗೊಂದೂ ಅರ್ಥವಾಗುತ್ತಿಲ್ಲ; ನಿನ್ನೆ ರಾತ್ರಿ ನನ್ನ ಇಲ್ಲಿಗೆ ಕರೆತಂದ್ರು. ನಮ್ಮ ದೇಶ ಬಿಟ್ಟು ಮೂರು ದಿನವಾಯ್ತು! ರೈಲಲ್ಲಿ, ಬಸ್ಸಿನಲ್ಲಿ, ಗಾಡಿಯಲ್ಲಿ ಪ್ರಯಾಣ ಮಾಡಿದೆ. ಊರ ಹೆಸರೂ ಕೂಡಾ ಗೊತ್ತಿಲ್ಲ...ಯಾರ್ಯಾರೋ... ಬರ್ತಾರೆ...ಏನೇನೋ ಕೇಳ್ತಾರೆ. ವಿಚಿತ್ರ ಪ್ರಾಣೀನ ನೋಡೋ ಹಾಗೆ ನೋಡ್ತಾರೆ...! ಇಷ್ಟೊತ್ತು ನಿನ್ ಜೊತೆ ಮಾತಾಡಿದಾಕೆ... ನನಗೆ ಅತ್ತೆಯಾಗೋರೂಂತ ಮಾತ್ರ ತಿಳೀತು ಅಷ್ಟೆ! ಏನಂದ್ರೂ ಅವ್ರೆಲ್ಲಾ?"

ಒಮ್ಮೆಲೆ ತಡೆ ತೊಲಗಿದ ಜಲಪ್ರವಾಹದಂತೆ



ಮಾರ್ಪಟ್ಟಳು ಮರಗತಂ.

ವರಲಕ್ಷ್ಮಿ ವ್ಯಂಗ್ಯ ನಗೆ ನಕ್ಕಳು. "ಅವರಾಡೋ ಮಾತುಗಳನ್ನು ನಾನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದೇ ಇಲ್ಲ...! ಈ ಕಿವಿಯಲ್ಲಿ ಕೇಳಿ ಆ ಕಿವಿಯಲ್ಲಿ ಬಿಟ್ಬಿಡ್ತೀನಷ್ಟೆ! ಇನ್ನು ಮುಂದೆ ನಿನಗೂ ಭಾಷೆ ಬರುತ್ತೇಳು... ಆಗ ನಿನಗೆ ಎಲ್ಲ ಅರ್ಥವಾಗುತ್ತೆ...ಇಷ್ಟಕ್ಕೂ ನೀನು ನಿನ್ನ ಗಂಡನಾಗೋನ್ನ ನೋಡಿದ್ದಿಯಾ?"

"ಊಹೂಂ...!"

ವರಲಕ್ಷ್ಮಿಯ ಹೃದಯ ಗಾಳಿಯನ್ನು ಕಳೆದುಕೊಂಡ ಬಲೂನಾಯಿತು. ಹೌದು... ಸರಿಯಾಗಿ ತನ್ನಂತೆಯೇ...ಆ ಗಂಡು ಯಾರೋ ಹೇಗಿದ್ದಾನೋ... ಎಂಥಾವನೋ ಮರಕತಳಿಗೆ ತಿಳಿಯದು! ಈ ಚಿಂದುಳ್ಳ ಚಂದನದ ಬೊಂಬೆಯ ಮನಸ್ಸಿನಲ್ಲಿ ಅದೆಷ್ಟು ಬಣ್ಣ ಬಣ್ಣದ ಕನಸುಗಳಿವೆಯೋ...! ಎಲ್ಲ ಸ್ವಲ್ಪ ಹೊತ್ತಿನಲ್ಲಿ, ಶಾಶ್ವತವಾಗಿ ಬೂದಿಯಾಗಿ ಹೋಗುವವೆಂದು ಹೇಳುವುದಾದರೂ ಹೇಗೆ?

"ನೀನು ನೋಡಿದ್ದೀಯಾ ಅಕ್ಕಾ? ಹೇಗಿದ್ದಾರೆ? ನಮ್ಮ ಅಪ್ಪ ಬಂದು ನೋಡ್ತೀನಿ ಅಂದ್ರು. ಆದರೆ ಮಧ್ಯವರ್ತಿ ಸಾಧ್ಯವಿಲ್ಲಾಂದ. ನನ್ನೊಬ್ಬಳ ಛಾರ್ಜೇ ನೂರು ರೂ. ಆಗುತ್ತೆ ಅಂದ. ಅಷ್ಟು ಖರ್ಚು ಭರಿಸೋರು ಯಾರು? ಜೊತೆಗೆ ಯಾರೂ ಬರ್ಬೇಕಾಗಿಲ್ಲ ಅಂದ. ನನ್ ಕರ್ಮ...ಪ್ರಯಾಣದ ಮಧ್ಯದಲ್ಲಿಯೇ ಎಲ್ಲಿ ಆ ಮುದಿಗೂಬೆಯೇ ನನ್ನ ಮದ್ವೆ ಆಗ್ತೀನಿ ಅಂತಾ ನೋಂತೆ ಹೆದರಿದ್ದೆ ಕೂಡಾ...ಅಮ್ಮ ಬಹಳವಾಗಿ ಅತ್ತಿದ್ದಳು. 'ಬಡತನದಿಂದ ಹುಡುಗೀನ ಮಾರಿಕೊಳ್ಳಬೇಕಾಗಿ ಬಂದಿತು. ಮದ್ವೆ ನೋಡೋ ಯೋಗವನೂ ಇಲ್ವೆ...ಅಯ್ಯೋ ದರಿದ್ರವೇ! ಆ ಅಳಿಯ ಎಂಥಾವನೋ ಏನೋ...ವಯಸ್ಸೆಷ್ಟೊ, ಎಷ್ಟನೆ ಮದ್ವೆನೋ ಏನೋ ಅದೂ ಗೊತ್ತಿಲ್ಲ! ಈ ಮಧ್ಯವರ್ತಿ ಏನೋ ಮೊದಲನೆ ಮದ್ವೆ ಅಂತಿದ್ದಾನೆ... ನಂಬೋದಾದರೂ ಹ್ಯಾಗೆ?' ಅಂತ ಗೋಳಿಟ್ಟಳು. ಹೌದು! ಇಷ್ಟಕ್ಕೂ ಹೇಗಿದ್ದಾರೆ ಅಕ್ಕಾ!"

ಮದುಮಗಳಲ್ಲಿರಬೇಕಾದ ಸಹಜ ಕುತೂಹಲ, ಆತುರ, ಬಾಲ್ಯ ಪೂರ್ತಿಯಾಗಿ ಬಿಡದ ಚಾಪಲ್ಯ...ತನ್ನ ಭಾಷೆ ತಿಳಿದ ಒಬ್ಬ ಪ್ರಾಣಿ ಸಿಕ್ಕಿತಲ್ಲ ಎಂಬ ಆನಂದ, ಮರಕತಳ ಮಾತಿನಲ್ಲಿ ವ್ಯಕ್ತಗೊಂಡಿತ್ತು.

ಮನಸ್ಸು ಕಲ್ಲಾಗಿಸಿಕೋ ಎಂದು ಮೃದುವಾಗಿ ಹೇಳಬೇಕೆಂದೆನಿಸಿ ವರಲಕ್ಷ್ಮಿ ತುಂಟಿ ತೆರೆಯಲಿದ್ದಾಗ, ಮೀನಾಕ್ಷಮ್ಮ ಧಾವಿಸಿ ಬಂದಳು.

"ಅರೇ! ಆಗಲೇ ಸ್ನೇಹಿತರಾಗಿಬಿಟ್ಟಿರಾ? ನಾನೆಂದುಕೊಂಡೆ ... ನಡಿರಿ...ನಡಿರಿ...ಪುರೋಹಿತರು ಬಂದಿದ್ದಾರೆ...ನಿಮ್ಮ ಚಿಕ್ಕಪ್ಪ ಮೇಳದ 'ರಿಕಾರ್ಡ್' ಹಾಕ್ತಿದ್ದಾರೆ! ಆ ಹುಡ್ಗಿಗೆ ಸ್ವಲ್ಪ ಮೊದ್ಲೆ ಹೇಳ್ಬಿಡು...ಹೇದೆ ನಡ್ಕೊಬೇಕೂಂತ. ನಿಮ್ಮ ಭಾಷೇಲಿ...ತೀರಾ ಹಸೆಮಣೆಮೇಲೆ ಕೂತ್ಮೇಲೆ... ಭಾಷೆ ಬರದೆ ನಾವು ಒಬ್ಬರಿಗೊಬ್ಬರು ಅವಸ್ಥೆ ಪಡೋದು ಆಗೋದು ಬೇಡ!"

"ಬಾ! ಮರಕತಂ!" ಎನ್ನುತ್ತ ಎದ್ದಳು ವರಲಕ್ಷ್ಮಿ.

ಹೋಗುತ್ತಿದ್ದ ಮೀನಾಕ್ಷಮ್ಮ ಥಟ್ಟನೆ ನಿಂತು ಹಿಂದಿರುಗಿ ಹೇಳಿದಳು. "ಆ ಹಾಳು ಹೆಸರು ಬೇಡ! ಮಹಾಲಕ್ಷ್ಮೀ ಅಂತ ಕರೆಯೋಣಾಂತ ಇದ್ದೀವಿ ನಾವೆಲ್ಲಾ! ಅವಳಿಗೂ ಅದನ್ನೇ ಹೇಳು!"

ವರಲಕ್ಷ್ಮಿಯ ಬೆನ್ನನ್ನು ಯಾರೋ ತಟ್ಟಿದಂತೆ ಆಯಿತು, ಮರಕತಂ...ಮಹಾಲಕ್ಷ್ಮಿ! ಒಂದು ಕಾಲದಲ್ಲಿ ವಳ್ಳಿ. ಈಗ ವರಲಕ್ಷ್ಮಿ! ಬೇಡ ಬೇಡ ನನ್ನಂತಹ ಜೀವನ ಮರಕತಳಿಗೆ ಮಾತ್ರ ಪ್ರಸಾದಿಸಬೇಡ... ಭಗವಾನ್! ವರಲಕ್ಷ್ಮಿಯ ಶರೀರ ಬೆವರಿಟ್ಟಿತು.

"ಬಾರೇ ವರಲಕ್ಷ್ಮೀ! ಹೊತ್ತಾಗ್ತಾಯ್ತು! ಎಷ್ಟೇ ಕೂಡಿಕೆ ಶಾಸ್ತ್ರವಾದರೂ ಮುಹೂರ್ತ ಮುಹೂರ್ತನೆ!" ಸರಸರನೆ ಹೊರಟಳು ಮೀನಾಕ್ಷಮ್ಮ.

ವರಲಕ್ಷ್ಮಿಯ ಹೃದಯ ಡವಡವ ಹೊಡೆದುಕೊಂಡಿತು. ಹುಚ್ಚುಸತ್ಯ ಹಸೆಮಣೆ ಮೇಲೆ ನಗುತ್ತ ಕುಳಿತಿದ್ದಾನೆ; ನೆರೆದ ಬಂಧು-ಬಳಗ, ಮಿತ್ರ ಸಮೂಹದ ನಡುವೆ ಏನೋ ಗುಸು ಗುಸು ಕುಹಕ ನಗೆ.

ಹಸೆ ಮಣೆ ಮೇಲೆ ನಿಂತು ಕೂರುವ ಹವ-

ಣಿಕೆಯಲ್ಲಿದ್ದ ಮರಕತಂ, ತನ್ನ ಕೈಹಿಡಿಯಲಿರುವ ಗಂಡನತ್ತ ನೋಡಿದಳು...ಕೊರಡಿನಂತೆ ನಿಂತುಬಿಟ್ಟಳು. ವರಲಕ್ಷ್ಮಿಯು ಕೈಯನ್ನು ಹಿಡಿದಿದ್ದ ಅವಳ ಕೈಮುಷ್ಟಿ ಬಿಗಿದುಕೊಂಡು ಮಂಜಿನ ಗಡ್ಡೆಯಂತಾಯಿತು. ಅವಳ ಹೃದಯದ ಮೇಲೆ ಬರ ಸಿಡಿಲೆರಗಿದಂತಾಯಿತೋ ಪ್ರಚಂಡ ಮಾರುತ ಬೀಸಿತೋ...ಒಬ್ಬ ವರಲಕ್ಷ್ಮಿ ಮಾತ್ರವೇ ಬಲ್ಲಳು...

ಮರಕತಂ, ವರಲಕ್ಷ್ಮಿಯತ್ತ ದೃಷ್ಟಿ ಹೊರಳಿಸಿದಳು. ಇಬ್ಬರ ಕಣ್ಣುಗಳೂ ಕ್ಷಣಕಾಲ ಕೂಡಿಕೊಂಡವು. ಮರಕತಳ ನೀರು ತುಂಬಿದ ಕಣ್ಣುಗಳಲ್ಲಿ...ಕೋಟಿ ಪ್ರಶ್ನೆಗಳು ಸುಳಿಸುತ್ತಿತ್ತ ಕಾಣಿಸಿತು ವರಲಕ್ಷ್ಮಿಗೆ—ನನ್ನ ಜೀವನದ ಬೆಲೆ ಎಂಟುನೂರು ರೂಪಾಯಿ ಅಕ್ಕ! ನಾನು ಏನು ಪಾಪ ಮಾಡಿದೇ ಅಂತ ನನಗೆ ಈ ಶಿಕ್ಷೆ ? ಇಲ್ಲಿ ನೆರೆದ ಮಂದಿ, ಸೋಜಿಗ ನೋಡುತ್ತಿರುವ ಇವರೆಲ್ಲಾ ಮನುಷ್ಯರೇ ? ಮನುಷ್ಯ ರೂಪದಲ್ಲಿರುವ ದೆವ್ವಗಳೇ ? ಬಡತನವೇ ಶಾಪವಾದರೆ, ಅದರಲ್ಲಿ ಹುಟ್ಟಿದ್ದೊಂದೇ ಅಪರಾಧವಾದರೆ, ಅದಕ್ಕೆ ವಿಧಿ ಇಷ್ಟು ದಾರುಣವಾಗಿ ಶಿಕ್ಷಿಸಬೇಕೆ ?'

"ಧೈರ್ಯ ತಂದುಕೋ ! ಹಸೆಮಣೆ ಮೇಲೆ ಕೂತ್ಕೋ !' ಬಿಗಿದುಕೊಳ್ಳುತ್ತಿದ್ದ ಕಂಠವನ್ನು ಪ್ರಯಾಸದಿಂದ ಸಡಿಲಗೊಳಿಸಿ ಗೊಣಗಿದಳು ವರಲಕ್ಷ್ಮಿ. ಬಲಿಪಶುವಿನಂತೆ ಕುಳಿತಳು ಮರಕತಂ. ಮರಕತಳ ಹಿಂದೆ ಅವಳ ಸೆರಗಿನ ಮೊನೆಯನ್ನು ಸವರುತ್ತ ಕುಳಿತಳು ವರಲಕ್ಷ್ಮಿ: ತಾನು ಸರಿಯಾಗಿ ಹೇಗೆ ಕುಳಿತಿದ್ದಳು ! ಆ ದಿನ ! ಮರಕತಂ ಬಿಕ್ಕಳಿಕೆ ಕೇಳಿಸದಂತೆ ಅಳುತ್ತಿದ್ದಾಳೆ...ಅವಳ ಪಕ್ಕಗಳು ಅದುರುತ್ತಿವೆ. ವರಲಕ್ಷ್ಮಿಗೆ ತಲೆ ಸುತ್ತುತ್ತಿರುವಂತೆ—ಬಹಳ ಆಯಾಸವಾದಂತೆ ಎನಿಸಿ—ಮೊಣಕಾಲುಗಳ ಮಧ್ಯೆ ತಲೆಯಿಟ್ಟು, ಕಣ್ಣು ಮುಚ್ಚಿಕೊಂಡಳು! ನಾದಸ್ವರ ರಿಕಾರ್ಡ್ ಪ್ರಾರಂಭವಾಯಿತು ಗ್ರಾಮಫೋನಿನಲ್ಲಿ!

"ಈ ರಾತ್ರಿನೇ...ಆ ಶಾಸ್ತ್ರಾನೂ ಮುಗಿಸಿಬಿಡ್ತಾರಂತೆ...!" ಹಿಂದೆ ಗುಸುಗುಸು ಮಾತುಗಳು. ಈ ರಾತ್ರಿ ಮರಕತಳಿಗೆ ಮೊದಲ ರಾತ್ರಿ...ಇನ್ನು ಮುಂದಿನ ರಾತ್ರಿಗಳೆಲ್ಲಾ ಕಾಳರಾತ್ರಿಗಳೇ......ಏನೋ.....ವರಲಕ್ಷ್ಮೀಗೆ ಯಾಕೋ ಬವಳಿ ಬಂದಂತಾಯಿತು. ಆಕೆಯ ಮನಸ್ಸು ಗತಪುಟಗಳತ್ತ ವೇಗವಾಗಿ ಉರುಳಿ ಹೋಯಿತು.

*

ಹನ್ನೆರಡು ವರ್ಷಗಳ ಹಿಂದೆ ಹೀಗೆಯೇ ಮದುವೆ ನಡೆಯಿತು ವಳ್ಳಿಗೆ: ಆಗ ಅವಳ ಬೆಲೆ ಐನೂರು ಮಾತ್ರವೇ ! ತಂದೆ ಮಹಾ ಕುಡುಕ ! ಆ ಕುಡಿತ ವಿಪರೀತಗೊಳ್ಳಲು, ಅವನು ಮಾಡುತ್ತಿದ್ದ 'ಹೋಟೆಲ್' ಸರ್ವರ್' ಕೆಲಸ ಕೂಡಾ ಹೋಯಿತು. ತಾಯಿ ಹೋಟೆಲ್‌ನಲ್ಲಿ ಹಿಟ್ಟು ರುಬ್ಬಿ, ವಳ್ಳಿಯ ಸಹಾಯದಿಂದ ಅವರಿವರ ಮನೆಗೆ ಕುಡಿಯುವ ನೀರು ಹಾಕಿ, ಐವರು ಮಕ್ಕಳೊಂದಿಗೆ ಸಂಸಾರ ಮಾಡುತ್ತಿದ್ದಳು.

ವಳ್ಳಿ ದಾವಣಿ ಹಾಕಿಕೊಳ್ಳುವ ಕಾಲಕ್ಕೆ, ತಂದೆ ಶಾಶ್ವತವಾಗಿ ರೋಗಿಯಾಗಿ ಮೂಲೆ ಹಿಡಿದು ಕುಳಿತ. ವಯಸ್ಸಿಗೂ ಬೆಳೆದ, ಅಂದವಾಗಿ, ಆಕರ್ಷಣೀಯವಾಗಿದ್ದ ವಳ್ಳಿ, ಶ್ರೀಮಂತರ ಮನೆ–ಹೋಟೆಲ್ಲುಗಳಲ್ಲಿ ಕುಡಿಯುವ ನೀರು ಹಾಕುವುದು ಸಮಸ್ಯೆಯಾಗಿ ಪರಿಣಮಿಸಿತು.

ಹೋಟೆಲ್ ಮಾಲೀಕನ ಮಗ ಷಣ್ಮುಗಂ ಒಂದು ದಿನ ದಾವಣಿ ಹಿಡಿದು ಎಳೆದ. ಕಂಕುಳಲ್ಲಿದ್ದ ಬಿಂದಿಗೆಯಲ್ಲಿನ ನೀರನ್ನು ಅವನ ತಲೆಯ ಮೇಲೆ ಸುರಿದಿದ್ದಳು ಕೋಪದ ಭರದಲ್ಲಿ ! ಪ್ಲೀಡರ್ ವೇಲುಪಿಳ್ಳೆ, ವಯಸ್ಸು ಬಾಡಿದ್ದರೂ ಓರೆನೋಟ ಬಿಡದ ಮುದುಕ: ನದಿಯ ಹತ್ತಿರ ಹೋಗಿ ನೀರು ತರಲು ಭಯ. ಪಕ್ಕದ ಮನೆ ಶಠಗೋಪ; ಎದುರು ಮನೆಯ ನೀಲಕಂಠ, ವಳ್ಳಿ ವಯಸ್ಸಿನ ಹೆಣ್ಣುಮಕ್ಕಳು ಮನೆಯಲ್ಲಿದ್ದರೂ ಸದಾಕಾಲ ವಳ್ಳಿಯನ್ನು ಹಿಡಿದು ನುಂಗುವಂತೆ ನೋಡುತ್ತಾರೆ.

ವಳ್ಳಿ ತಾಯಿ ಆಂಡಾಳ್‌ಗೆ ಪರಿಸ್ಥಿತಿ ಗಮನಿಸಿದಂತೆಲ್ಲಾ ಹುಚ್ಚು ಹಿಡಿದಂತೆ ಆಗುತ್ತದೆ... ಆ ಸಂದರ್ಭದಲ್ಲೇ ವಳ್ಳಿ ಮನಸ್ಸಿನಲ್ಲಿ ಒಂದು ಸುಂದರರೂಪ ಮನೆಮಾಡಿಕೊಂಡಿತು. ಬಟ್ಟೆ

ವ್ಯಾಪಾರಿ ಪರಮಶಿವನ್ ಮಗ ನಟರಾಜನ್‌ಗೂ ಅವರ ಮನೆಗೂ ನೀರು ಹಾಕುತ್ತಿದ್ದಳು ವಳ್ಳಿ! ನಟರಾಜನ್ ವಿನಯ ವಿಧೇಯತೆಯಿಂದ ನೋಡುತ್ತಿದ್ದ...ಮನೆಮಂದಿಯೆಲ್ಲಾ ಅಷ್ಟೇ ಗೌರವದಿಂದ ನೋಡುತ್ತಿದ್ದರು, ಷಣ್ಮುಗಂ ತಲೆಮೇಲೆ ನೀರು ಸುರಿದ ದಿನ, ಆ ಕೋಪದಲ್ಲಿ ಅರ್ಧನೆನೆದ ಒಟ್ಟೆಯೊಂದಿಗೆ, ಬರುವ ಹಾದಿಯಲ್ಲಿಯೇ ಇದ್ದ ಪರಮಶಿವನ್ ಮನೆಗೆ ಬಂದಿದ್ದಳು ವಳ್ಳಿ! ಏದುಸಿರು ಬಿಡುತ್ತಲೇ ನಡೆದ ಸಂಗತಿ ವಿವರಿಸಿದ್ದಳು...! ಪರಮಶಿವನ್ ಆತನ ಹೆಂಡತಿ ಬಿದ್ದುಬಿದ್ದು ನಕ್ಕಿದ್ದರು. "ಹೋಗ್ಲಿಬಿಡು! ಒಳ್ಳೇ ಕೆಲ್ಸಾನೇ ಮಾಡ್ದೆ! ಅವರು ನೀನು ನೀರು ಹಾಕೋದ್ಬೇಡಾ ಅನ್ನೋದು! ಏನು ಮುಳುಗಿ ಹೋಗೋದಿಲ್ಲೇಳು! ಹೇಗೂ ನಮ್ ಅಂಗ್ಡಿಗೂ ಕಂಡಿಲಿಕ್ಕೆ ನೀರ್ಬೇಕು... ಇವೊಂದೆರಡು ಬಿಂದ್ಗೆ ಹೆಚ್ಚಿಗೆ ಹಾಕಿಸ್ಕೊಂತೀವಿ!" ಎಂದಿದ್ದರು.

"ನಿನ್ನ ಧೈರ್ಯ, ಆತ್ಮಾಭಿಮಾನ ನನಗೆ ತುಂಬಾ ಮೆಚ್ಚಿಕೆಯಾಗಿದೆ ವಳ್ಳಿ!" ಎಂದಿದ್ದ ನಟರಾಜನ್, ಆ ಕ್ಷಣದಿಂದ ನಟರಾಜನ್ ಬಗ್ಗೆ ಪ್ರತ್ಯೇಕ ಅಭಿಮಾನ ಮೊಳೆಯಿತು...ವಳ್ಳಿಯಲ್ಲಿ. ಅವನ ಹದ್ದುಮೀರದ ವರ್ತನೆ, ನಡೆನುಡಿ ಎಷ್ಟೋ ಮುಂದಾಗಿ ಕಂಡಿತ್ತು. 'ನಟರಾಜನ್ ನನ್ನವನಾದರೆ..." ಎಂಬ ಭಾವನೆ ಬೆಳೆದು ಮರವಾಗಲು ಮೊದಲಿಟ್ಟಿತು.

ತೆಲುಗು ನಾಡಿನಲ್ಲಿ ಕೆಲವರು ಎರಡನೆ ಮದುವೆ, ಮೂರನೆ ಮದುವೆಯ ಮುದುಕರಿಗೆ, ಅನಾಗರಿಕರಿಗೆ, ಲಂಗು-ಲಗಾಮಿಲ್ಲದೆ ತಿರುಗುವವರಿಗೆ ಯಾರೂ ಹೆಣ್ಣುಕೊಡಲು ಮುಂದೆಬಾರದಿದ್ದಾಗ, 'ಪಾಲಘಾಟ್' ಚಿದಂಬರಂನಲ್ಲಿ ಹುಡುಕಿ ತರ್ತೀವಿ...ಅಲ್ಲಿ ಕೆಲವರು ಹೆಣ್ಣುಮಕ್ಕಳನ್ನು ಮಾರಾಟಮಾಡುವ ಪದ್ಧತಿಯಿದೆ...ಹಣ ಬಿಸಾಡಿದರೆ ಸರಿ...'ಅನ್ನುವ ಮಧ್ಯವರ್ತಿಗಳ ಸಂಖ್ಯೆ ಹೆಚ್ಚಿದಂತೆಲ್ಲ—ಆ ಅಪವಾದವನ್ನು ನಿಜಗೊಳಿಸಲೆಂಬಂತೆ, ತಮ್ಮ ಮಕ್ಕಳನ್ನು ಮಾರಾಟಮಾಡುವವರು ಇಲ್ಲಿ ಕೆಲವರು ಹುಟ್ಟಿಕೊಂಡರು.

'ಪಕ್ಕದ ಮನೆ ಅಮ್ಮಾಳ್ ಇಬ್ಬರು ಹೆಣ್ಣುಮಕ್ಕಳನ್ನೂ ತೆಲುಗು ನಾಡಿಗೆ ಕಳುಹಿಸಿ... ಸಾವಿರ ರೂಪಾಯಿ ಗಳಿಸಿದಳು! ಆ ಮಕ್ಕಳಾದರೂ-ನಿಕ್ಷೇಪವಾಗಿ, ಮೂರನೆ ಮದುವೆಯ ಗಂಡಂದಿರ ಜೊತೆ...ಲಂಕೆಯಂತಹ ಮನೆಯಲ್ಲಿ ಮಹಾರಾಣಿಯರಂತೆ ಬಾಳುತ್ತ ತಾಯಿಗೆ ತಿಂಗಳು ತಿಂಗಳಿಗೆ ನೂರೋ ನೂರಿಪ್ಪತ್ತೋ ಕಳುಹಿಸುತ್ತಿದ್ದಾರೆ ಕೂಡಾ..!

ಹೀಗೆ ಇಂಥ ಸುದ್ದಿಗಳು ಹೆಚ್ಚುತ್ತಾ ಹೋದುವು।

ನಟರಾಜನ್ ಒಂದು ಸ್ಥಿರ ನಿರ್ಣಯಕ್ಕೆ ಬಂದ ದಿನವೇ! ಅದೇ ದಿನ ಆಂಧ್ರ ದೇಶದಿಂದ ಒಬ್ಬ ಮಧ್ಯವರ್ತಿ ಮಹಾಶಯ ಹುಡುಗಿಯ ವ್ಯಾಪಾರಕ್ಕೆಂದು ಆಂಡಾಳು ಹತ್ತಿರಕ್ಕೆ ಬಂದ..

ತನ್ನ ಸದ್ಯದ ಪರಿಸ್ಥಿತಿಯಲ್ಲಿ ಒಳ್ಳೇ ಸಂಬಂಧ ನೋಡಿ, ವಳ್ಳಿ ಮದುವೆ ಮಾಡುತ್ತೀನೀ ಅಂದ್ರೆ ಅದು ಆಗದ ಮಾತು. ಅಲ್ಲದೆ ಇದಕ್ಕೆ ಕಾರಣ ಹುಡುಗಿ ತಂದೆ; ಸಂಬಂಧ ಬಾರದೆ ಇರುವುದಕ್ಕೆ ಇದೂ ಒಂದು ಕಾರಣ. ವಳ್ಳಿ ಅಂದಚಂದ, ಅದರಿಂದ ಆಗುತ್ತಿರುವ ಅನರ್ಥ ಅವಳು ಬಲ್ಲಳು. ಹೆಣ್ಣು ಮಕ್ಕಳು ಎದೆಯ ಮೇಲೆ ಚಪ್ಪಡಿಯಿದ್ದಂತೆ...ಆದಷ್ಟು ಬೇಗ ಇಳಿಸಿಕೊಳ್ಳುವುದೇ ಒಳ್ಳೆಯದು ಎಂದು ತೋಚಿತು ಅವಳಿಗೆ.

ನಟರಾಜನ್, ತಂದೆ ತಾಯಿಯರನ್ನು ಶತವಿಧದಲ್ಲಿ ಒಪ್ಪಿಸಲು ಪ್ರಯತ್ನಿಸಿ ನೋಡಿದ...... ಆದರೆ ಇಬ್ಬರೂ ಒಪ್ಪಲಿಲ್ಲ.

ವಳ್ಳಿ ಬಡಹುಡುಗಿ, ಒಳ್ಳೇ ಹುಡುಗಿ... ನಮಗೆ ಕೈಲಾಗೋ ಸಹಾಯ ಮಾಡೋಣ; ಅಷ್ಟೇ ವಿನಾ, ಮನೆಸೊಸೆಯಾಗಿ ಮಾತ್ರ ಅಂಗೀಕರಿಸೋಲ್ಲ:" ಎಂದರು ಇಬ್ಬರು.

"ಅಪ್ಪಾ, ಅಮ್ಮಾ, ವ್ಯಾಪಾರಾನ ಬಿಟ್ಟು ಬರ್ತೀನಿ. ನೀನು, ನನ್ ಜೊತೆ ಬಂದ್ಬಿಡು ವಳ್ಳಿ! ಎಲ್ಲೊ ಒಂದು ಕಡೆ ಹೋಗಿ ಸುಖವಾಗಿ ಇದ್ದುಬಿಡೋಣ" ಅಂದಿದ್ದ ನಟರಾಜ.

ಆ ವೇಳೆಗಾಗಲೇ ವಳ್ಳಿ ತಂದೆ ಮುನ್ನೂರು ರೂ. ಅಡ್ವಾನ್ಸಾಗಿ ತೆಗೆದುಕೊಂಡಿದ್ದ.

ವಳ್ಳಿ ಆ ರಾತ್ರಿ ಎಲ್ಲಾ ಯೋಚಿಸಿದಳು. ಪರಮಶಿವನ್ ಬಹಳ ರೀತಿಯಲ್ಲಿ ತಮಗೆ

ಸಹಾಯ ಮಾಡಿದ್ದಾರೆ. ಆ ಕೃತಜ್ಞತೆಯೂ ಇಲ್ಲದೆ, ತಾವು ನಟರಾಜನ್ ಜೊತೆ ಹೋಗಿ... ಕೃತಘ್ನಳಾಗಲಾರೆ! ಉಜ್ವಲ ಭವಿಷ್ಯವಿರುವ ನಟರಾಜನ್, ತನಗಾಗಿ, ಈ ಎಲ್ಲವನ್ನು ತ್ಯಜಿಸಿ, ಬರುವುದು, ಹಾಳಾಗುವುದು... ಅವಳ ಮನಸ್ಸು ಸ್ವಲ್ಪವೂ ಒಪ್ಪಲಿಲ್ಲ.

ಹಾಗಾದರೆ, ಈ ಸಮಸ್ಯೆಗಳಿಗೆಲ್ಲಾ ಮೂಲ ಎಲ್ಲಿದೆ? ದುರ್ಭರ ದಾರಿದ್ರ್ಯದಲ್ಲೇ?

ವಳ್ಳಿಯ ಆಲೋಚನೆ ಸಾಗುತ್ತಿದ್ದಂತೆಯೇ ಒಂದು ವಾರ ಕಳೆದಿತ್ತು. ಮಧ್ಯವರ್ತಿ ಮತ್ತೆ ಬಂದ... ಜೊತೆಗೆ ಯಾರೂ ಬರಲಿಕ್ಕಿಲ್ಲ ಅಂದ... ಯಜ್ಞ ಪಶುವಿನಂತೆ ರೈಲಿನಲ್ಲಿ ಕುಳಿತುಕೊಂಡಳು.

ಅವಳೆಂದೂ ಶ್ರೀಮಂತರ ಸೊಸೆಯಾಗ ಬೇಕೆಂದು ಬಯಸಲಿಲ್ಲ! ಕಂತೆಗೆ ತಕ್ಕ ಬೊಂತೆ... ತನ್ನ ಅಂತಸ್ತಿಗೆ ತಕ್ಕವನೇ, ನಟರಾಜನಂತೆ ಆತ್ಮೀಯತೆ, ವಾತ್ಸಲ್ಯ, ಅನುರಾಗದಿಂದ ನೋಡಿಕೊಳ್ಳುವ ವ್ಯಕ್ತಿ ಯಾದರೆ ಸಾಕು— ಅಂದುಕೊಂಡಿದ್ದಳು. ಕಡೆಗೆ ಅವನು ತನ್ನಂತೆ ನೀರು ಹೊರುವವನಾ ದರೂ ಪರವಾಗಿಲ್ಲ, ಹೋಟೆಲ್‌ನಲ್ಲಿ ಸರ್ವರ್ ಆಗಿದ್ದರೂ ಚಿಂತೆಯಿಲ್ಲ, ತಾನು ಹುಟ್ಟಿ ಬೆಳೆದ ವಾತಾವರಣದಿಂದ, ಪರಿಚಯವಿಲ್ಲದ ದೂರ ಪ್ರಾಂತ್ಯಕ್ಕೆ ಹೋಗಬೇಕಾದೀತೆಂದು— ಕನಸು ಮನಸಿನಲ್ಲೂ ಊಹಿಸಿರಲಿಲ್ಲ. ಅವಳ ಊಹೆಗೂ ಎಟುಕದಷ್ಟು ದೂರ ಬಂದಿತ್ತು ರೈಲು.

*

ಭಾಷೆ ಹೊಸದು, ಹೊಸ ಜನ, ಹೊಸ ವಾತಾವರಣ!

"ನಿನ್ನ ಹೆಸರೇನು?" ಅದೇ ಪ್ರಶ್ನೆ...

ಬಹಳ ಸಾರಿ. ಬಹಳ ಮಂದಿ ಕೇಳಿದ ಮೇಲೆ ಅರ್ಥವಾಯಿತು,

"ವಳ್ಳಿ!"

"ಛೀ... ಛೀ... ವರಲಕ್ಷ್ಮಿ ಅಂತ ಹೇಳು: ವಳ್ಳಿ ಚೆನ್ನಾಗಿಲ್ಲ!" ಕೈಸನ್ನೆಯಿಂದ ಹೇಳಿದ್ದಳು ಒಬ್ಬ ಮುತ್ತೈದೆ. ಒಂದೆರಡು ತಿಂಗಳಿನಿಂದ ಮದ್ರಾಸಿನಲ್ಲಿರುವ ಒಬ್ಬಾಕೆ... ಹರಕು ಮುರುಕು ತಮಿಳಿನಲ್ಲಿ ಕೆಲವು ಪದಗಳನ್ನು ಹೇಳಿದಳು.

ಮದುವೆ ಶಾಸ್ತ್ರ ಮುಗಿಯಿತು.

ರಾತ್ರಿ... ಅದು ಮೊದಲ ರಾತ್ರಿ...

ಇಬ್ಬರೂ ಅತ್ತಿಗೆಯಂದಿರು ಕೂಡಿ ಏನೇನೋ ಮಾತನಾಡಿಕೊಂಡು ನಗುತ್ತಿದ್ದರು. ಆ ಮಾತಿನ ಅರ್ಥ ತಿಳಿಯಲಿಲ್ಲವಾದರೂ, ಭಾವ ಅರ್ಥವಾಯಿತು... 'ಈ ಹುಚ್ಚನ ಪ್ರಣಯ ಹೇಗಿರುತ್ತೋ? ಭಾಷೆ ಬಾರದ ಹುಡುಗಿ ಅವನೊಂದಿಗೆ ಹೇಗೆ ಮಾತಾಡ್ತಾಳೋ?' ಎಂಬ ವ್ಯಂಗ್ಯ, ಕೃತ್ರಿಮದಂತೆ ತುಂಬಿತ್ತು.

ಇಬ್ಬರು ಭಾವಂದಿರೂ ಕೂಡ ಅದೇ ನಗೆ ನಗುತ್ತಿದ್ದರು. ಅತ್ತೆ ಮಾತ್ರ ಸಂಭ್ರಮದಿಂದ ಅಡ್ಡಾಡುತ್ತಿದ್ದಳು. ಅಪ್ರಯೋಜಕ ಮಗ... ಅದರಲ್ಲೂ ಮತಿಗೆಟ್ಟವನಿಗೆ... ಮದುವೆ ಮಾಡಿದೆನೆಂಬ ಜಂಭ ಆಕೆಯ ಪ್ರತಿ ಲೀಲೆ ಯಲ್ಲೂ ವ್ಯಕ್ತವಾಗುತ್ತಿತ್ತು.

ಮಾವನವರು ಮಾತ್ರ... ಪಾದಕ್ಕೆ ಎರಗಿ ದಾಗ ಮಗ ಸೊಸೆಯನ್ನು ಮನಸಾರೆ ಆಶೀರ್ವ ದಿಸಿದರು... ಸೊಸೆಯತ್ತ ಪರೀಕ್ಷೆಯಾಗಿ ನೋಡಿದರು. ಆತನ ಕಂಗಳಲ್ಲಿ... ಮರುಕ, ನೋವು ಗೂಡುಕಟ್ಟಿಕೊಂಡಿರುವಂತೆ ತೋಚಿತು ವಳ್ಳಿಗೆ

ಭಯದಿಂದ ಶಯ್ಯಾಗೃಹ ಪ್ರವೇಶಿಸಿದ ವಳ್ಳಿ... ಊಹೂಂ... ವರಲಕ್ಷ್ಮಿ... ಎಳೆ ಮಗುವಿನಂತಹ ಮುಗ್ಧ ಗಂಡನನ್ನು ನೋಡಿ ಮರುಕ ಮೂಡಿ ಬಂದಿತು! ಮುಗ್ಧತೆಯಿಂದ ಕೂಡಿದ ಅವನ ಅನಾಗರಿಕತೆಯನ್ನು ಸಹಿಸಿ ದಳು! ಮದುವೆ, ಹೆಂಡತಿ ಬಗ್ಗೆ ಅರ್ಥ ಕೂಡಾ ತಿಳಿಯದ ಅವನ ಮಗುವಿನಂತ ಮುಗ್ಧ ಮನ ಸ್ಸಿಗೆ ಕೈ ಎತ್ತಿ ಮುಗಿದಳು. ಕೋಣೆಯಲ್ಲಿ ಚಾಪೆ ಹಾಸಿಕೊಂಡು ನಿಶ್ಚಿಂತೆಯಾಗಿ ಮಲಗಿ- ದಳು. ಏನೊಂದೂ ಅರಿಯದ ಗಂಡ ಮಾಧ ವನ ಪೋಷಣೆಯಲ್ಲಿ, ತನ್ನ ಜೀವನ ಕಳೆದು ಹೋದರೆ ಸಾಕೆಂದುಕೊಂಡಳು.

•

ಎರಡು ತಿಂಗಳು ಕಳೆಯುವ ಹೊತ್ತಿಗೆ, ವರಲಕ್ಷ್ಮಿಗೆ ಆ ಮನೆಯಲ್ಲಿನ ಎಲ್ಲ ಮಂದಿ ಅವರ ಮನಸ್ಸುಗಳು ಕನ್ನಡಿಯಲ್ಲಿ ಕಂಡಂತೆ

ಸ್ಪಷ್ಟವಾಗಿ ಅರ್ಥವಾಗಿತ್ತು. ವರಲಕ್ಷ್ಮಿಯ ಅತ್ತೆ ಲಕ್ಷ್ಮಮ್ಮ ಪರಮ ಭಾಗವತೋತ್ತಮಳಂತೆ ಕಾಣಿಸುತ್ತಾಳೆ. ಬೆಳಗಿನ ಜಾವವೇ ಎದ್ದು, ತಣ್ಣೀರಿನಲ್ಲಿ ಸ್ನಾನವಮಾಡಿ, ಮಡಿಯುಟ್ಟು, ಪೂಜೆ ಪುನಸ್ಕಾರ ಮಾಡಿ, ಸೊಸೆಯರಿಗೆ ಕೆಲಸ ಹಚ್ಚುತ್ತ ಅಡಿಗೆ ಮಾಡುತ್ತಾಳೆ. ಹತ್ತು ಗಂಟೆಗೆಲ್ಲಾ ದೊಡ್ಡ ಭಾವ ಸೀತಾರಾಮಯ್ಯ, ಎರಡನೆ ಭಾವ ನಾಗೇಶ್ವರ, ಊಟ ಮಾಡಿ ಒಬ್ಬ ತಾಲೂಕು ಆಫೀಸಿಗೂ, ಇನ್ನೊಬ್ಬ ಕಲೆಕ್ಟರ್ ಆಫೀಸಿಗೂ ಹೊರಟುಹೋಗುತ್ತಾರೆ. ಮಾಧವ ಕುಡಿಯುವ ನೀರನ್ನು ಹೊತ್ತು ತರುತ್ತಾನೆ, ತಂದೆಯ ಮಡಿಬಟ್ಟೆಗಳನ್ನು ಒಗೆದು ಒಣಹಾಕುತ್ತಾನೆ, ಅಲ್ಲಲ್ಲಿ ತಾನು ಆಯ್ದು ತಂದ ಸಿನಿಮಾ ಚಿತ್ರಗಳನ್ನು ಮನೆಯ ಗೋಡೆಯ ತುಂಬಾ ಅಂಟಿಸುತ್ತಾ, ತನ್ನಷ್ಟಕ್ಕೆ ತಾನೇ ನಗುತ್ತ, ಗೊಣಗಿಕೊಳ್ಳುತ್ತ ಕುಳಿತುಕೊಂಡಿರುತ್ತಾನೆ. ಮಾವ ಪ್ಲೀಡರ್ ಗುಮಾಸ್ತ. ಬೆಳಿಗ್ಗೆ ಬೇಗನೆ ಎದ್ದು ಹೋಗಿ, ಕೆಲಸ ಮುಗಿಸಿಕೊಂಡು ಬಂದು, ಹತ್ತು ಗಂಟೆಗೆಲ್ಲಾ ದೇವರ ಪೂಜೆ ಮುಗಿಸಿ, ಮಕ್ಕಳಿಬ್ಬರೂ ಆಫೀಸಿಗೆ ಹೊರಟೊಡನೆ, ಬಂದು ಕುಳಿತು ಊಟ ಮಾಡಿ ಮತ್ತೆ ಹೊರಡುತ್ತಾನೆ. ಮಾಧವನನ್ನು ಕರೆದರೆ ಕೆಲವೊಮ್ಮೆ ಊಟಕ್ಕೆ ಬರುತ್ತಾನೆ. ಕೆಲವು ಬಾರಿ ಬರುವುದಿಲ್ಲೆಂದು ಹಠ ಮಾಡುತ್ತಾನೆ. "ಅವನಿಗೆ ಇಷ್ಟ ಬಂದಾಗ ಬಂದು ತಿಂತಾನೇಳು ಹುಚ್ಚು ಮುಂಡೇದು!" ಎಂದು ಸ್ವಲ್ಪ ಹೊತ್ತು ಬೈದು, ಮೂವರು ಸೊಸೆಯರಿಗೂ ಬಡಿಸಿ, ತಾನೂ ತಿನ್ನುತ್ತಾಳೆ. ಅನಂತರ ಆ ಬೀದಿಯಲ್ಲಿನ ಹೆಂಗಳೆಯರು ಅದರಲ್ಲೂ ಮುಖ್ಯವಾಗಿ ಕೆಲಸವಿಲ್ಲದ ಮುತ್ತೈದೆಯರು, ವಿಧವೆಯರು, ಲಕ್ಷ್ಮಮ್ಮನ ಸುತ್ತಲೂ ಕೂರುತ್ತಾರೆ. ವ್ಯಾಸ ಪೀಠದ ಮುಂದೆ ಕುಳಿತು, ಭಾರತವನ್ನೋ, ಭಾಗವತವನ್ನೋ ಓದಿ ಹೇಳುತ್ತಾಳೆ. ಆ ಗ್ರಂಥದಲ್ಲಿನ ಅರ್ಥ ಹೇಗಿದ್ದರೂ, ತನಗೆ ಇಷ್ಟವಾದ ಅರ್ಥವನ್ನು ವಿವರಿಸುತ್ತಾಳೆ ಲಕ್ಷ್ಮಮ್ಮ.

ಇನ್ನು ಸಾಯಂಕಾಲ ಆಕೆ ಯಾವ ಕೆಲಸವನ್ನೂ ಮುಟ್ಟುವುದಿಲ್ಲ. ಎಲ್ಲವನ್ನು ಸೊಸೆಯರೆ ನೋಡಿಕೊಳ್ಳಬೇಕು. ವರಲಕ್ಷ್ಮಿ ಬಂದ ಒಂದು ವಾರ ಹತ್ತು ದಿನ ಮಾತ್ರ ಹಿರಿಯ ಸೊಸೆಯರಾದ ಅನಸೂಯ, ಸಾವಿತ್ರಿ ನೋಡಿಕೊಳ್ಳುತ್ತಿದ್ದರು. ಅನಂತರ "ನೋಡು ವರಲಕ್ಷ್ಮಿ! ಅವರು ಆಫೀಸಿನಿಂದ ಬರೋಹೊತ್ತಾಯ್ತು; ಅಡಿಗೆ ಮನೇಲಿದ್ರೆ ಅವರು ಉರಿದುಬೀಳ್ತಾರೆ! ಈ ಮಲ್ಲಿಗೆ ಹೂವು ದಂಡೆಕಟ್ಟಿ ಮುಡಿದು ಬರ್ತೀನಿ...ಆ ಅಡಿಗೆ ಕೆಲ್ಸ ಸ್ವಲ್ಪ ನೋಡ್ಕೊ!" ಎಂದು ಇಬ್ಬರೂ ತಪ್ಪಿಸಿಕೊಳ್ಳಲು ಪ್ರಾರಂಭಿಸಿದರು. "ನೀನು ಬಂದ್ಮೇಲೂ ಅವನು ಕುಡಿಯೋ ನೀರು ಹೊತ್ತುತರೋದು ಅಷ್ಟು ಸರಿಕಾಣೋಲ್ಲ, ಕಣೇ ವರ!...ನಿನಗೆ ಹೇಗೂ ತೌರು ಮನೇಲಿ ನೀರು ಹೊತ್ತು ಅಭ್ಯಾಸವಿದೆ. ಇವತ್ತಿಂದ ಆ ಕೆಲಸನೂ ನೀನೇ ನೋಡಿಕೋ!" ಅಂದಿದ್ದಳು ಅತ್ತೆ ಲಕ್ಷಮ್ಮ.

ಮೂರು ತಿಂಗಳು ಉರುಳುತ್ತಿದ್ದಂತೆಯೇ ಆ ಮನೆಯಲ್ಲಿನ ಚಾಕರಿಯೆಲ್ಲಾ ವರಲಕ್ಷ್ಮಿಯ ಪಾಲಿಗೆ ಬಿದ್ದಿತ್ತು.

ವರಲಕ್ಷ್ಮಿಗೆ ಮೂರು ಜನ ನಾದಿನಿಯರು; ಮೂವರೂ ವಿಚಿತ್ರ ವ್ಯಕ್ತಿಗಳು. ಸರದಿಯ ಪ್ರಕಾರ ಮೂವರೂ ತೌರು ಮನೆಗೆ ಹತ್ತು ದಿನಕ್ಕೊಮ್ಮೆ ಬರುತ್ತಾರೆ. ಮೂವರಿಗೂ ನಿಶ್ಶಕ್ತಿ. ಅದೇನು ಕಾಯಿಲೆಯೋ ಯಾರಿಗೂ ಗೊತ್ತಿಲ್ಲ. ತೀರಾ ಅವರ ಗಂಡಂದಿರು ಬಂದು ಕರೆದುಕೊಂಡು ಹೋಗೋಣಾ ಅನ್ನುವ ಹೊತ್ತಿಗೆ ಮಂಚ ಹತ್ತಿ ಮಲಗುತ್ತಾರೆ! ಒಬ್ಬಳಿಗೆ ಡಾಕ್ಟರ್ ಹೇಳಿದರಂತೆ 'ಗಂಡನಿಗೆ ದೂರ ಇರಬೇಕು' ಅಂತ! ಎರಡನೆ ಆಕೆಗೆ ಅತ್ತೆ ಮನೆಯ ನೀರು ಮೈಗೆ ಒಗ್ಗಲಿಲ್ಲವಂತೆ! ಮೂರನೆ ಅವಳು ಶುದ್ಧ ಸುಕುಮಾರಿ, ಮದುವೆಯಾಗಿ ಇನ್ನೂ ಒಂದು ವರುಷ ಆಗಿತ್ತು. ಆದ್ದರಿಂದ ಅತ್ತೆಮನೆ ಇನ್ನೂ ಹೊಸದಂತೆ!

ವರಲಕ್ಷ್ಮಿಗೆ ಇದಾವುದರ ಪರಿವೆಯೂ ಇರಲಿಲ್ಲ, ಮಾಧವನಿಗೆ ಹೊತ್ತು ಹೊತ್ತಿಗೆ ಊಟ, ತಿಂಡಿ, ಸ್ನಾನ ಇತ್ಯಾದಿಗಳನ್ನು ಗಮನಿಸುವುದೂ ಮನೆಯ ಎಲ್ಲ ಕೆಲಸ ಮಾಡುವುದೂ, ಸ್ವಲ್ಪ ಬಿಡುವು ದೊರೆತರೆ, ತೆಲುಗು ಮಾತು,

ಅಕ್ಷರ ಕಲಿಯುವುದೇ—ಇವಳ ದಿನಚರಿಯಾಗಿತ್ತು. ಈ ಜೀವನ ಅಷ್ಟಾಗಿ ಕಷ್ಟವೆನಿಸಲಿಲ್ಲ ವರಲಕ್ಷ್ಮಿಗೆ. ಆದರೆ ಚಿಕ್ಕ ಭಾವ ನಾಗೇಶ್ವರನ ವರ್ತನೆ ದಿನದಿನಕ್ಕೂ ಶ್ರುತಿ ತಪ್ಪಿದ ಆಲಾಪನೆಯಾದಾಗ ಮಾತ್ರ ವ್ಯಥೆ ಎನ್ನಿಸಿತು, ತೃಷೆಯ ನೋಟ, ಮಾತಿನ ಧಾಟಿ. ಈ ಎಲ್ಲವನ್ನೂ ಮೀರಿ ಒಂದು ದಿನ ಥಟ್ಟನೆ ಕೈ ಹಿಡಿದುಕೊಂಡಿದ್ದ...ಹಿಡಿದ ಕೈಯನ್ನು ರಝಾಡಿಸಿ ಬಿಡಿಸಿಕೊಂಡಿದ್ದಳು.

"ಹಠ ಮಾಡ್ಬೇಡ ವರ! ಇಲ್ಲಿ ಏನೇನೂ ನಡಿಯೋಲ್ಲ! ತಪ್ಪಿಸಿಕೊಂಡು ಎಲ್ಲಿಗೂ ಹೋಗಲಾರೆ!" ಅಂದಿದ್ದ ಕೋಪದಿಂದ.

ವರಲಕ್ಷ್ಮಿ ದಿಗ್ಭ್ರಮೆಗೊಂಡಳು. ಈ ವಿಷಯ ಯಾರಲ್ಲಿ ಹೇಳುವುದು.

ಸಾಯಂಕಾಲ ಹಾಲು ಕೊಡಲು ಬಂದ ನಾಗಮ್ಮ ವರಾಂಡಾದಲ್ಲಿ ನಿಂತು, ಎಲ್ಲರ ಮುಂದು ಗಟ್ಟಿಯಾಗಿ ಹೇಳುತ್ತಿದ್ದಳು. ತನ್ನ ಮೈದುನ, ತನ್ನನ್ನೇನೋ ಕೀಳಾಗಿ ಕಂಡು ಮಾತನಾಡಿಸಿದನಂತೆ; ತನ್ನ ಗಂಡ ದೇಶಾಂತರ ಹೋಗಿದ್ದಾನಂತೆ; ಅಷ್ಟೇ, ತಾನು ಕೋಪಿಸಿಕೊಂಡು ತೌರುಮನೆಗೆ ಹೊರಟು ಹೋದಳಂತೆ! ತನ್ನ ಅಣ್ಣತಮ್ಮಂದಿರು ಬಂದು ಅತ್ತೆ ಮೇಲೆ ಉರಿದುಬಿದ್ದರಂತೆ! ತನ್ನ ಮೈದುನನಿಗೆ ನಾಲಕ್ಕು ಬಿಸಿ ಮುಟ್ಟಿಸಿದರಂತೆ! ತನ್ನ ಅತ್ತೆ, ಮಾವ, ಭಾವಮಂದಿರು, ಎಲ್ಲರೂ ತನ್ನ ಹತ್ತಿರಕ್ಕೆ ಬಂದು ಕ್ಷಮಾಪಣೆ ಕೇಳಿ, ಮತ್ತೆ ಕರೆತಂದರಂತೆ! ಕೇಳಿಸಿಕೊಂಡ ವರಲಕ್ಷ್ಮಿಗೆ, ತನ್ನ ಪರಿಸ್ಥಿತಿ ಅರಿವಾಯಿತು. ತನಗೂ ತಂದೆತಾಯಿ ಇದ್ದಾರೆ. ಆದರೆ ಆಪತ್ತಿನಲ್ಲಿ ಆದರಿಸುವವರಲ್ಲ...ಇದ್ದರೂ ಇಲ್ಲದಂತೆಯೇ! ಗಂಡ ಅಪ್ರಯೋಜಕ...ಹೋಗ್ಲಿ ಅತ್ತೆಗೆ ಹೇಳಿದರೆ! ದೊಡ್ಡವರು! ಎಲ್ಲ ತಿಳಿದ ಜ್ಞಾನಿ! ಮಗನನ್ನು ಬೈಯಬಹುದು...ಬುದ್ಧಿವಾದ ಹೇಳಬಹುದು.

ಮರುದಿವ ಮಧ್ಯಾಹ್ನ ಅತ್ತೆಗೆ ವ್ಯಾಸಪೀಠ ತಂದಿಡುತ್ತ—ಮೆಲ್ಲಗೆ ಹೇಳಿದಳು ವರಲಕ್ಷ್ಮಿ.

"ಓಹೋ! ಇಷ್ಟೇನಾ ರಹಸ್ಯ! ಇನ್ನೇನೋ ಅಂದ್ಕೊಂಡೆ ನಾನು. ಮಾಧವನೇ ಅಂದು ಕೊಂಡ್ರೆ, ನೀನೂ ಹುಚ್ಚೀನೇ ಸಿಕ್ಕಿದ್ಯಲ್ಲಮ್ಮ! ಇಂಥಾದ್ದೆಲ್ಲಾ ಹೀಗೆ ಹೇಳಬಹುದೆ? ಮಾಧವನ ಮಾಗೂ ಅಂತ ಇಲ್ದೆ ಹೋದ್ರೆ, ನಾಳೆ ನಿನ್ ಮನೆ ನಿಲ್ಲೋದು ಹೇಗೆ? ಹೋಗು... ಹೋಗು...ನಿನ್ ಕೆಲ್ಸ ನೀನು ನೋಡೂ ... ನನ್ನ ಮಾತಾಡಿಸ್ಬೇಡ...ಇವತ್ತು ಭಾಗವತ ಪೂರ್ತಿ ಮುಗಿಸಬೇಕು..."

ಮೊಟ್ಟ ಮೊದಲಬಾರಿಗೆ ವರಲಕ್ಷ್ಮಿಗೆ, ತಾನಿರುವ ಮನೆ ಮೇಲ್ಛಾವಣಿ ಮುರಿದು ತನ್ನ ನೆತ್ತಿಯ ಮೇಲೆ ಬಿದ್ದಂತೆ ಭಾಸವಾಯಿತು.

"ನಾ ಹೇಳ್ಲಿಲ್ವೇ ವರ?! ಉಗುರಿನಿಂದ ಹೋಗೋದಕ್ಕೆ ಕೊಡಲಿಯಾಕೆ ಹುಡುಕ್ತೀಯಾ" ಅಂದ ನಾಗೇಶ್ವರ್ ನಗುತ್ತ. ಆ ಕ್ಷಣ ತಿಳಿಯಿತು ವರಲಕ್ಷ್ಮಿಗೆ ತನ್ನ ಸುತ್ತೆಲ್ಲ ಇರುವುದು ಮನುಷ್ಯ ರೂಪದಲ್ಲಿರುವ ಕ್ರೂರ ಮೃಗಗಳೆಂದು! ಅವೆಲ್ಲ ತನ್ನನ್ನೂ, ತನ್ನ ಜೀವನವನ್ನೂ ಹಂಚಿಕೊಂಡು, ನಂಜಿಕೊಂಡು ತಿನ್ನಲು ಹಾತೊರೆಯುತ್ತಿರುವುದಾಗಿ! ವರಲಕ್ಷ್ಮಿಯ ಬೆಣ್ಣೆಯಂತಹ ಮನಸ್ಸು—ಮಣ್ಣನಂತಾಯಿತು!

-

ಕಾಲದ ಚಕ್ರಭ್ರಮಣದಲ್ಲಿ ಏಳು ವರುಷ ಸಂದಿತು. ವರಲಕ್ಷ್ಮಿ ಮೂರು ಮಕ್ಕಳ ತಾಯಿ ಆದಳು. ಇಬ್ಬರು ಭಾವಂದಿರಲ್ಲಿ ಮುಂಚಿನ ಮರೆಯಿಲ್ಲದೆ, ಸುತ್ತಲೂ ಎಷ್ಟೇ ಮಂದಿ ಇದ್ದರೂ ಸಂಕೋಚವಿಲ್ಲದೆ ಸರಾಗವಾಗಿ—ಸರಳವಾಗಿ ಮಾತನಾಡುತ್ತಾಳೆ. ಆದರೆ ಅವರಿಬ್ಬರಿಗೆ ಇದು ನುಂಗಲಾರದ ತುತ್ತಾಗಿದೆ. ವರಲಕ್ಷ್ಮಿ, ಅವಳ ಮಕ್ಕಳು, ಅವರ ಬಾಧ್ಯತೆ ಇದರಿಂದ ಬಿಡಿಸಿಕೊಳ್ಳುವುದು ಹೇಗೆ? ಯೋಚಿಸುತ್ತಿದ್ದರು ಇಬ್ಬರು ಭಾವಂದಿರು.

ಮಾವ ಇಹದ ಯಾತ್ರೆ ಮುಗಿಸಿದರು. ಅನಸೂಯಾ, ಸಾವಿತ್ರಿಯರಿಗೆ ವರಲಕ್ಷ್ಮಿಯ ಮುಖ ಕಂಡರೆ ಆಗುವುದಿಲ್ಲ. ಅವರ ಮಧ್ಯೆ ಹಸಿಹುಲ್ಲು ಹಾಕಿದರೆ ಭಗ್ಗನೆ ಹತ್ತಿ ಉರಿಯುತ್ತದೆ. ಇಬ್ಬರು ಭಾವಂದಿರೂ ಪಾಪ, ರಾತ್ರಿ ಹೊತ್ತು ಮನೆಯಲ್ಲಿ ಇರುವುದಿಲ್ಲ. ಅವರ ಈ ಬದಲಾವಣೆಗೆ ಕಾರಣ ವರಲಕ್ಷ್ಮಿ ಅಂತ ಬಹಿರಂಗವಾಗಿ ಪ್ರಚಾರ ಮಾಡಿದರು

ವರಲಕ್ಷ್ಮಿಗೆ ಮೊದಲಿಗೆ ಬಹಳ ವ್ಯಥೆ ಎನಿಸಿತು. ಬಹಳವಾಗಿ ನೊಂದುಕೊಂಡಿದ್ದಳು. ದಿನ ಕಳೆದಂತೆಲ್ಲ ಈ ಬಗ್ಗೆ ತನ್ನಲ್ಲಿ ತಾನೇ ನಕ್ಕು ಬಿಡುತ್ತಿದ್ದಳು. 'ಹಸುಗೂಸಿನಂತ ತಮ್ಮನ್ನ; ತಂಗೀ ಸಮಾನಳಾದ ನಾದಿನಿಯನ್ನು ನಾಶಮಾಡಿದವರು—ಮನುಷ್ಯರೂಂತ, ಅವರಲ್ಲಿ ಅದೇನೋ 'ಮಾನವತೆ,' 'ನೀತಿ' ಇದೇ ಅಂತ. ಅದೇನೋ ತನ್ನಿಂದ ಕೆಟ್ಟಿತೂ ಅಂತ ನೀವ್ಯಾಕೆ ತಿಳ್ಕೊಂತೀರಾ ಅಕ್ಕಾ!' ಎಂದು ಒಂದು ದಿನ ಅಂದೇ ಬಿಟ್ಟಳು.

ಭಾವಂದಿರು ಇಬ್ಬರು ಬೇರೆ ಊರಿಗೆ ಟ್ರಾನ್ಸ್‌ಫರ್ ಮಾಡಿಸಿಕೊಂಡು ಹೊರಟು ಹೋದರು. ಅತ್ತೆಗೆ ಲಕ್ವ ಹೊಡೆಯಿತ್ತು, ಮಂಚದಲ್ಲಿ ಬಿದ್ದುಕೊಂಡಿದ್ದಾಳೆ.

"ವರ, ನೀನು ದೇವತೆ ಕಣೇ; ರೆಕ್ಕೆ ಬಂದ ಪಕ್ಷಿಗಳೆಲ್ಲಾ ಹಾರಿಹೋದವು. ಶಕ್ತಿ ಉಡುಗಿದ ನನ್ನ, ಆ ಹುಚ್ಚನ್ನ ನೀನೇ ಕಾಪಾಡ್ಬೇಕು—ದಡ ಸೇರಿಸಬೇಕು" ಎಂದು ಹಲುಬುತ್ತಾಳೆ ಲಕ್ಷ್ಮಮ್ಮ. ಹಾಗೆ ಆಕೆ ಹೇಳಿದಾಗ ಮಣ್ಣಿನಂತೆ ಬದಲಾದ ಮನಸ್ಸು ಕಲ್ಲಿನಂತೆ ಗಟ್ಟಿಗೊಂಡಿತ್ತು. ಹೊಗಳಿಕೆ-ತೆಗಳಿಕೆಗೆ ಓಗೊಡದ ಸ್ಥಿತಿಗೆ ಬಂದಿದ್ದಳು.

ಈಗ ವರಲಕ್ಷ್ಮಿಯನ್ನು ಕಾಡುತ್ತಿರುವ ಸಮಸ್ಯೆ ಒಂದೇ. ಸಂಪಾದಿಸಲಾಗದ ಗಂಡ, ಬೆಳೆಯುತ್ತಿರುವ ಮೂರು ಮಕ್ಕಳು. ತಮ್ಮ ಪಾಲಿಗೆ ಬಂದ ಎರಡು ಕೋಣೆಗಳು, ಬಾಡಿಗೆಗೆ ಕೊಟ್ಟರೂ ಇಪ್ಪತ್ತರ ಮೇಲೆ ಬರೋಲ್ಲ; ಮುಂದಣ ಭವಿಷ್ಯ ಹೇಗೆ? ಈಗಾಗಲೇ ಮನೆಯವರೇ ಅಲ್ಲದೆ—ಹೊರಗಿನವರೂ ಕೂಡ ತನ್ನನ್ನು ಅಪರಾಧಿಯಂತೆ ಕಾಣುವುದೇ ಅಲ್ಲದೆ ಹುಚ್ಚುನಾಯಿ ಮೇಲೆ ಕಲ್ಲು ಬೀರಿ ಅಟ್ಟಿಸಿಕೊಂಡು ಬರುವಂತೆ ಧಾವಿಸಿ ಬರುತ್ತಾರೆ. ಈ ಮುದುಕೀನೂ ಸತ್ತುಹೋದರೆ! ಇನ್ನು ತನಗೆ ರಕ್ಷಣೆ ಎಲ್ಲಿ? ಆಶ್ರಯ ಎಲ್ಲಿ? ಒಂದೇ ಸಮನೆ ಒಳಗೊಳಗೇ ಚಿಂತಿಸಿ ಕೃಶಳಾಗುತ್ತಿರುವ—ಹೃದಯ ಬಿರಿಯುತ್ತಿರುವ ಸಮಯದಲ್ಲಿ, ಕರೆಯದ ಅತಿಥಿಯಾಗಿ ಬಂದಿದ್ದ ಸುಂದರಯ್ಯ. ವಯಸ್ಸು ಸಂದಿದ್ದರೂ ಮಾಂಭೆ ಸರಿಯದ-ಸಾಯದ ಮುದಿಗೂಬೆ; ಹೇರಳವಾದ ಆಸ್ತಿ ಇದೆ. ಪರಿಮಿತಿ ಇಲ್ಲದ ಜೀವನ ಸಾಗಿಸುತ್ತಿರುವ ದೊಡ್ಡ ಮನುಷ್ಯ. ಸಾಲಾಗಿ ಇಬ್ಬರು ಪತ್ನಿಯರನ್ನು ಸ್ವರ್ಗಕ್ಕೆ ಕಳುಹಿಸಿ, ಮೂರನೇ ಮಡದಿಗಾಗಿ ಅನ್ವೇಷಣೆ ನಡೆಸಿರುವ-ವರ! ಲಕ್ಷ್ಮಮ್ಮನಿಗೆ ಸಾಕ್ಷಾತ್ ಚಿಕ್ಕಮ್ಮನ ಮಗ!

"ಅಕ್ಕಾ; ಈ ಹುಡ್ಗೀನೇ ಅಲ್ವೇ ನಿನ್ನ ಚಿಕ್ಕ ಸೊಸೆ? ಒಳ್ಳೆ ಚುರುಕು ಹುಡ್ಗಿ ಅಂತ ಕೇಳಿದ್ದೇನೆ. ಯಾವ ದೇಶ ಆದ್ರೇನು? ಒಳ್ಳೆ ಗುಣ, ಮರ್‍ಯಾದೆ, ಇರ್ಬೇಕು...ಅಂದ್ಹಾಗೆ ಹೆಸರೇನಂದೆ?" ಅಂದ ಸುಂದರಯ್ಯ ಉಪೋದ್ಘಾತವಾಗಿ. ಆತನನ್ನು ನೋಡುತ್ತಿದ್ದರೆ ತನ್ನ ಚಿಕ್ಕಂದಿನಲ್ಲಿ ತೀರಿಕೊಂಡ ತಾತಯ್ಯ ನೆನಪಿಗೆ ಬಂದಿದ್ದ ವರಲಕ್ಷ್ಮಿಗೆ.

"ನಿಜವಾದ ಹೆಸರು ಏನೋ ಇದೆ...ನಾವು ವರಲಕ್ಷ್ಮೀ ಅಂತ ಬದಲಾಯಿಸಿದೆವು!" ಅಂದಳು ಲಕ್ಷ್ಮಮ್ಮ—ತಮ್ಮನ ಊಹೆಯನ್ನು ಓದಲು ಪ್ರಯತ್ನಿಸುತ್ತ.

"ಬಂಗಾರದಂಥ ಹೆಸರು...ಅಂದ್ಹಾಗೆ ನೀವು ಇಲ್ಯಾಕೆ ಇರ್ಬೇಕು ಅಕ್ಕಾ! ನನ್ ಜೊತೆ ಬಂದ್ಬಿಡಿ. ದೊಡ್ಡ ಮನೆ; ಹೊತ್ಕೊಂಡೋಗೋ ಅಷ್ಟು ಆಸ್ತಿ, ಯಾವುದಕ್ಕೂ ಏನೂ ಕೊರತೆಯಿಲ್ಲ...ಮನೇಲಿ ದೀಪ ಹಚ್ಚೋ ಜನ ಇರ್ದ ಅಳ್ತಾ ಇದ್ದೀನಿ...ಕಾಲೂ-ಕೈಯಿ ಇರೋವಾಗ, ನಂಬಿ ಯಾರ ಕೈ ಕೊಡ್ಲಿಕ್ಕೆ ಮನಸ್ಸು ಬರುತ್ತಿಲ್ಲ. ಹೋಗ್ಲಿ! ಬೇರೆ ಯಾರೋ ಯಾಕೆ ತಿನ್ಬೇಕು ಆಸ್ತಿನಾ? ಮದ್ವೆ ಆಗೋಣಾಂದ್ರೆ...ಈ ವಯಸ್ಸಲ್ಲಿ ಮದ್ವೆ ಯಾಕೇ ಅನ್ಸುತ್ತೆ...ಸೀತಾರಾಮು...ನಾಗೇಶ್ವರ್—ಅವರ ಹೆಂಡತಿಯರ ಮೇಲೆ ನನಗೆ ನಂಬಿಕೆಯಿಲ್ಲ....ಬರೀ ಸ್ವಾರ್ಥಿಗಳು! ಇನ್ನು ಉಳಿದಿರೋರು ನೀನೂ ನಿನ್ನ ಚಿಕ್ಕ ಸೊಸೆ—ಏನೂ ತಿಳಿಯದ ಮಾಧವ...ಅವನದೇನಿದೆ ಪಾಪ! ನೀವು 'ಊ' ಅಂದ್ರೆ ನೀವು ನನ್ನಲ್ಲೇ ಇರ್ಬಹುದು...ನಂದೇನೂ ಅಭ್ಯಂತರವಿಲ್ಲ... ನಾನು ಇಟ್ಕೊಂತೀನಿ...ನೀವೇನೂ ನನಗೆ ಭಾರ ಅನ್ನಿಸೊಲ್ಲ...! ಎಷ್ಟಾದರೂ ರಕ್ತ-

ಪಾಪ ನಿನಗಿರುತ್ತೆ...ವರಲಕ್ಷ್ಮಿ ಬುದ್ಧಿವಂತಳು; ನನ್ನ ನಂತರ ಆಸ್ತಿ ಮಾಧವನಿಗೆ, ಅವನ ಮಕ್ಕಳಿಗೆ ಆಗುತ್ತೆ... ಏನಂತೀಯಮ್ಮಾ?" ಎಂದ ಸುಂದರಯ್ಯ.

"ಅದಕ್ಕಿಂತಲೂ ನಮಗೆ ಬೇಕಾದ್ದು ಏನಿದೆಯೋ ಸುಂದರೂ! ಈ ಘಟ ಹೊರಟ್ಹೋದ್ಮೇಲೆ ಇವರಿಗೆ ನೀವೇ ದಿಕ್ಕಾಗ್ಬೇಕು!" ಎಂದಳು ಲಕ್ಷ್ಮಮ್ಮ. ವರಲಕ್ಷ್ಮಿಗೆ ನಿಧಿ ಸಿಕ್ಕಿದಂತಾಗಿತ್ತು; ವಿಶಾಲವಾದ ದೊಡ್ಡಮನೆ; ಸುಂದರಯ್ಯನ ಮಡದಿಯರು ಬಿಟ್ಟುಹೋದ ಒಡವೆ-ವಸ್ತ್ರ ನೋಡಿದ ಮೇಲೆ...ಇನ್ನು ತನ್ನ ಭವಿಷ್ಯತ್ತಿಗೆ ಒಂದು ರಕ್ಷಣೆ, ಮಕ್ಕಳ ಜೀವನಕ್ಕೆ ಹೂವಿನ ಹಾದಿಯಾಯಿತೆಂದು ಹಾಯಾಗಿ ನಿಡುಸುಯ್ದಳು. ಮಕ್ಕಳಿಗೆ, ಹೆಚ್ಚಿನ ವಿದ್ಯಾಭ್ಯಾಸ...ಆಕೆಯ ಕಣ್ಣು ಮುಂದೆ ಅಂದವಾದ ಕಾಮನಬಿಲ್ಲು ಅರಳಿತು.

ಆದರೆ ಅದು ಮಾಯವಾಗಲಿಕ್ಕೆ ಬಹಳ ಕಾಲ ಹಿಡಿಸಲಿಲ್ಲ.

ವಯಸ್ಸಿನಲ್ಲಿ ತಾತ; ವರಸೆಯಲ್ಲಿ ತಂದೆ ಸಮಾನ ಸುಂದರಯ್ಯ." ಹೆಡ್ಡಿ! ಇಷ್ಟೊಂದು ಆಸ್ತಿ, ಇಷ್ಟೆಲ್ಲ ಒಡವೆ-ಸುಮ್ಮಸುಮ್ನೆ ಬರುತ್ತೆ ಅದೊಂಡ್ಯಾ?...ಚೆನ್ನಾಗಿ ಯೋಚ್ನೆ ಮಾಡಿನೋಡು! ನಿನ್ನ ಮಕ್ಕಳು ಶ್ರೀಮಂತರಂತೆ ಬಾಳಬೇಕೋ? ಭಿಕಾರಿಗಳಂತೆ ಭಿಕ್ಷೆ ಎತ್ತಬೇಕೋ? ಹೇಗೂ ನಿನಗೆ ಒಳ್ಳೆ ಹೆಸರಿಲ್ಲ; ಹಣವಾದ್ರೂ ಇದ್ರೆ ಅದನ್ನ ಮುಚ್ಚಿಸಬಹುದು! ಅದೂ ಇಲ್ಲಾಂದ್ರೆ ನಿನ್ನ ಅತ್ತೆ ಸತ್ಮೇಲೆ ನಾಯಿ ಹರಿದ ಎಲೆಯಾಗುತ್ತೆ ನಿನ್ನ ಜೀವನ...ಇಷ್ಟರ ಮೇಲೆ ನಿನ್ನಿಷ್ಟ!" ಅಂದಿದ್ದ ಕೂವೆಯಾಗಿ?

ಕಲ್ಲಾಗಿದ್ದ ವರಲಕ್ಷ್ಮಿಯ ಮನಸ್ಸು—ಕಠಿಣ ಶಿಲೆಯಾಗಿ ಉಳಿದುಬಿಟ್ಟಿತು.

ಇವೆಲ್ಲಾ ನಡೆದಾಗಲೇ ಐದಾರು ವರ್ಷಗಳಾದುವು. ಈಗ ವರಲಕ್ಷ್ಮಿಯನ್ನು ಹುಚ್ಚ ಮಾಧವನ ಹೆಂಡತಿ ಅನ್ನೋದನ್ನ ಜನ ಮರೆತಿದ್ದಾರೆ, ಮುದುಕ ಸುಂದರಯ್ಯನ ಸೂಳೆಯಾಗಿ ಮಾತ್ರ ನೆನಪಿಟ್ಟುಕೊಂಡಿದ್ದಾರೆ, ಅದರೇನು? ಆಕೆಯ ಮೈಮೇಲಿನ ಒಡವೆ, ಸುಂದರಯ್ಯನಿಂದ ಬರಲಿರುವ ಭೂಮಿ—ರಾಜಭವನದಂಥಹ ಮನೆ...ಸುಖವಾಗಿ ಬೆಳೆಯುತ್ತಿರುವ ಮಕ್ಕಳು. ಆಕೆಯ ಎದುರು ಯಾರೂ ತುಟಿ ಎರಡಾಗಿಸದಂತೆ ಯಾವುದೋ ಮೋಡಿ ಹಾಕುತ್ತಿದೆ. ಮದುವೆ ಮನೆಗಳಲ್ಲಿ, ಹಬ್ಬಹಾಡಿಗಳಲ್ಲಿ ಆಕೆಗೊಂದು ಪ್ರತ್ಯೇಕ ಸ್ಥಾನವಿದೆ. ಸಮಯದಲ್ಲಿ ಹತ್ತು ರೂಪಾಯಿ ಸಾಲ ಕೊಡಬಲ್ಲ ವ್ಯಕ್ತಿಮಾತ್ರ: ಸುಮ್ನೆ ಬೇಕಾದರೂ ನಾಲ್ಕು ರೂಪಾಯಿ ಕೊಡುವ ಸಾಮರ್ಥ್ಯವಿದೆ ಆಕೆಗೆ. ಸುಂದರಯ್ಯ ಪ್ರಸ್ತುತಕ್ಕೆ ಮಂಚದಲ್ಲಿದ್ದಾನೆ. ಆತ ಆಸ್ತಿಯ ಹಕ್ಕು-ಪತ್ರ ಆಕೆಯ ಹೆಸರಿಗೆ ಬರೆದಿದ್ದಾನೆ ಅಂತ ... ಬಂಧುವರ್ಗಕ್ಕೆಲ್ಲಾ ಅಸೂಯೆ; ಅವನು ಸ್ವಲ್ಪ ಗೊಟಕ್ಕೆಂದರೆ, ಆಕೆಯೇ ಸರ್ವಾಧಿಕಾರಿಣಿಯಾಗುತ್ತಾಳೆ. ತಮಗೆ ಅಂಥಹ ತಿಳುವಳಿಕೆ ಇಲ್ಲದೆ ಹೋಯಿತಲ್ಲಾ ಅಂತ ಪರಿತಪಿಸಿದರು ಕೆಲವರು ಗೃಹಸ್ಥರು, ಗೃಹಿಣಿಯರು!

"ನನಗೆ ಗೊತ್ತು ವಳ್ಳಿ! ನಿನ್ನ ಮುಖದಲ್ಲಿ

"ನಾನು ಎಮ್.ಬಿ. ಬಿ. ಎಸ್. ಇಂಟರ್‌ವ್ಯೂಗೆ ಹೋಗೋಲ್ಲಪ್ಪ. ಎಲ್ಲಾದರೂ ಸೀಟು ಸಿಕ್ಕಿ, ಡಾಕ್ಟರಾಗಿ ಕೊಟ್ಟದ್ದು ಖೋಟಾ ಔಷಧಿಯಾದರೆ ಅರೆಸ್ಟ್ ಆದೀತು."

ಮಹಾರಾಣಿ ಕಳೆಯಿದೆ; ಅವತ್ತು ನಿನಗೆ ಬರಿ ಐನೂರು ತೆಗೆದುಕೊಂಡೆ! ನ್ಯಾಯವಾಗಿ ಇಂಥ ಅದೃಷ್ಟ ಜಾತಕಳಿಗೆ ಐದು ಸಾವಿರ ತೆಗೆದುಕೊಂಡರೂ ತಪ್ಪಿಲ್ಲ– ಹೆಚ್ಚೇನಲ್ಲ. ಅದಕ್ಕೆ, ನಿನ್ನ ತಂಗಿಗೆ ಎಂಟು ನೂರು ಕೊಡಿ.ವಿ ಅಂತ ಬಂದ್ರೆ, ಬೇಡ ಹೋಗೂ ಅಂದೆ; ಏನೋ! ಅವಳು ಅಂತಹ ಅದೃಷ್ಟ ಜಾತಕಳೋ? ಯಾರು ಕಂಡಿದ್ದಾರೆ! ನಿನ್ನ ಅತ್ತೆ ಸತ್ತು ಹೋದರಂತೆ; ನಿನ್ನನ್ನು ಆದರಿಸಿದ ಮಾವ ದುಕ ಕೂಡಾ ಸಾಯೋ ಸ್ಥಿತಿಯಲ್ಲಿದ್ದಾನಂತೆ, ನಿಮ್ಮ ಊರಿನ ಆಸಾಮಿಯೊಬ್ಬ ಮಾತಿನ ಮಧ್ಯೆ ಹೇಳಿದ!

ಅಷ್ಟೊಂದು ಆಸ್ತೀನ ನೀನೊಬ್ಬಳೇ ನೋಡಿಕೊಳ್ಳಲು ಸಾಧ್ಯವೇ? ಏನೋ! ಹೆಣ್ಣೆಂಗಸು; ಎಲ್ಲಿ ಯಾರು ಮೋಸ ಮಾಡ್ತಾರೋ ಅಂತ ನಮ್ಮ ಭಯ. ನಿಮ್ಮ ಅಮ್ಮ, ನಾನೂ, ನಿನ್ನ ತಮ್ಮ–ತಂಗಿಯರೂ ನಿನ್ನ ಜೊತೆ ಇರ್ತೀವಿ. ಇದು ನಿನ್ನ ಒಳ್ಳೇದಕ್ಕೆ ತಂಗಿಗೆ ಒಳ್ಳೆ ಬೆಲೆ ನೋಡಿ ನೀನೇ ಮದ್ವೆ ಮಾಡುವೆಯಂತೆ...... ನಮಗೆ ನಿನ್ನನ್ನು ನೋಡಬೇಕೆಂದು ಬಹಳ ಆಸೆ ಆಗಿದೆ.

ನೀನು ಚಾರ್ಜಿಗೆ ಹಣ ಕಳುಹಿಸಿದರೆ ನಾವು ಬರುತ್ತೇವೆ...

ನಿನ್ನ ತಂದೆ
ಸ್ವಾಮಿನಾಥನ್

ಆ ಕಾಗದ ಕಂಡ ವರಲಕ್ಷ್ಮಿಗೆ ಬಿದ್ದು ಬಿದ್ದು ನಗಬೇಕೆನಿಸಿತು. ಹುಚ್ಚಿಯಂತೆ ಅಳಬೇಕೆನ್ನಿಸಲಿಲ್ಲ. ಆಕೆಯ ಮನದಲ್ಲಿ ಯಾವುದೋ ಮೂಲೆಯಲ್ಲಿ ಮಿಣುಕ್ ಮಿಣುಕ್ ಅನ್ನುತ್ತಿದ್ದ ಮಮತೆ-ಮಾನವತೆ... ಥಟ್ಟನೆ ಆರಿಹೋಯಿತು.

ಆಕೆ ಈಗ ತೋರಿಕೆಗಷ್ಟೇ ವರಲಕ್ಷ್ಮಿ.

ಆಕೆಯ ಒಳಗಿನ ರೂಪವೇ ಬೇರೆ...... ಮನುಷ್ಯರೆಂದರೆ ಅಸಹ್ಯ. ತನ್ನ ಸುತ್ತಲೂ ಇರುವವರೆಲ್ಲಾ ಮನುಷ್ಯರೇ ಅಲ್ಲವೆಂದೂ... ತಾನು, ನಾಗರೀತೆ ಹೊದ್ದುಕೊಂಡ ಒಂದು ಕಾಡಿನಲ್ಲಿ... ಕ್ರೂರ ಮೃಗಗಳ ಮಧ್ಯೆ ಅವುಗಳಲ್ಲಿ ಒಬ್ಬಳಾಗಿ–ಒಗ್ಗಿಹೋಗಿ ಬದುಕುತ್ತಿರುವುದಾಗಿ ದೃಢನಂಬಿಕೆ ಏರ್ಪಟ್ಟಿದೆ.

*

"ಅದೇನೇ ಹಾಗೆ ಗರಬಡಿದವಳಂತೆ ಕೂತುಬಿಟ್ಟಿದ್ದೀಯಾ ವರಲಕ್ಷ್ಮಿ? ಕವರ್ಗ ತಿಂಗಳು ತಪ್ಪಿಲ್ಲಾ ತಾನೆ? ಮುಖ ಎಲ್ಲಾ ಬಾಡೋಗಿದಲ್ಲೆ? ಮೈ ಉಷಾರಿಲ್ಲೇನು?"– ಸಲಿಗೆಯಿಂದ ವಿಚಾರಿಸುತ್ತಿರುವ ಮೀನಾಕ್ಷಮ್ಮನ ಕಂಠಧ್ವನಿ ಕಿವಿ ಹತ್ತಿರ ಕೇಳಿಸಿತು... ಬೆಚ್ಚಿ ಎಚ್ಚೆತ್ತಳು ವರಲಕ್ಷ್ಮಿ. ಕಣ್ಣುಬಿಟ್ಟು ಸುತ್ತಲೂ ನೋಡಿದಳು- ಮದುವೆ ಪೂರ್ಣಗೊಂಡಿತ್ತು- ಒಂದೇ ಒಂದು ಗಂಟೆಯಲ್ಲಿ... ಕೆಲವು ವರ್ಷಗಳ ಗತವನ್ನು ನೆನಪಿಗೆ ತಂದುಕೊಂಡಿದ್ದಳು ತಾನು. ತಾನು ಈಗ ಹಣವಿರುವ ಬಂಗಾರದ ಗಣಿ... ಛೀ.. ಛೀ...ಈ ಮುಂಕುತನ ಒಳ್ಳೆಯದಲ್ಲ... ಎದ್ದು ನಿಂತುಕೊಂಡಳು ವರಲಕ್ಷ್ಮಿ.

"ಯಾಕೋ! ಸ್ವಲ್ಪ ಸಣ್ಣ ಜೊಂಪು ಹತ್ತಿತ್ತು!" ಎನ್ನುತ್ತಲೇ ಅನುಸರಿಸಿದಳು.

ಆ ರಾತ್ರಿ ಮರಕತಳನ್ನು ಕೋಣೆಯವರೆವಿಗೂ ಬಿಟ್ಟು ಬಂದು... ಅವಳಿಗೆ ಧೈರ್ಯ ಹೇಳಿದ್ದಳು ವರಲಕ್ಷ್ಮಿ.

ಆದರೂ ಆಕೆಯ ಮನಸ್ಸು ಮಾತ್ರ ಸಣ್ಣಗೆ ಕಂಪಿಸಿತು.

"ಮರಕತ ಮನುಷ್ಯರಿಗೂ ಮಣ್ಣಿಗೂ ಬಹಳ ಸಂಬಂಧವಿದೆ- ನಾವೆಲ್ಲಾ ಮಣ್ಣಿನಲ್ಲಿ ಹುಟ್ಟಿಬೆಳೆದ ಮನುಷ್ಯರು...

ನನ್ನ ಮಟ್ಟಿಗೆ, ನನ್ನ ನೋಡು... ಹೇಗೆ ತಯಾರಾದೆನೋ... ಶಿಲೆಯಾಗಿ ಬದಲಾಗಿಬಿಟ್ಟೆ...

ನೀನು ಮರಕತ... ಮರಕತಳಾಗಿಯೇ ಉಳಿದುಬಿಡಬೇಕೆಂದೂ ನಿನ್ನ ಜೀವನ ಮಣಿಯಂತೆಯೇ ಬೆಳಕುಬೀರಬೇಕೆಂದೂ ಮನಸಾರೆ ಹಾರೈಸುತ್ತೇನೆ—ಕೋರುತ್ತೇವೆ. ಇನ್ನು ನೀನು ಮಣ್ಣಾಗಿ ಮಾರುವೆಯೋ ಗಟ್ಟಿಗೊಂಡು ಶಿಲೆಯಾಗಿ ರೂಪುಗೊಳ್ಳುವೆಯೋ... ಕಾಲವೇ ನಿರ್ಣಯಿಸಬೇಕಾಗಿದೆ..."

ಯಾವ ಭಾವವೆಯೂ ಇಲ್ಲದ, ನಿರ್ಲಿಪ್ತತೆಯಿಂದ ಹಿಂದಿರುಗಿ, ತನಗಾಗಿ ಬಂದ ಕಾರಿನಲ್ಲಿ ಕುಳಿತಳು ವರಲಕ್ಷ್ಮಿ. ★

ನಿಮ್ಮ ಮುಖಕಾಂತಿಯ ಪ್ರಶಂಸಕರು
ಅನೇಕ ಜನ...
ನಿಮ್ಮ ತ್ವಚೆಯ ವೈರಿಗಳೂ ಅನೇಕರು.
ಪಾಂಡ್ಸ್ ವ್ಯಾನಿಶಿಂಗ್ ಕ್ರೀಮ್
ಸದಾ ನಿಮ್ಮ ಬಳಿಯಲ್ಲಿರಲಿ

ಪಾಂಡ್ಸ್ ವ್ಯಾನಿಶಿಂಗ್ ಕ್ರೀಮ್ ನಿಮ್ಮ ತ್ವಚೆಯನ್ನು ಗಾಳಿ, ಧೂಳು ಮತ್ತು ಹವಾಮಾನದ ದುಷ್ಪರಿಣಾಮಗಳಿಂದ ರಕ್ಷಿಸುತ್ತದೆ. ನಿಮ್ಮ ತ್ವಚೆಯ ತೇವವನ್ನು ಕಾಳಿಸುವ ವಿಶೇಷವಾದ ಹ್ಯುಮೆಕ್ಟೆಂಟ್‌ನ್ನು ಒಳಗೊಂಡಿರುವ ಅದು ನಿಮಗೆ ನಯವಾದ, ಆದರೂ ಎಣ್ಣೆಯ ಪಸೆಯಿಲ್ಲದ ಮುಖಕಾಂತಿಯನ್ನು ನೀಡುತ್ತದೆ. ಅದನ್ನು ಪರಿಪೂರ್ಣವಾದ 'ಪೌಡರ್ ಬೇಸ್' ಆಗಿಯೂ ಉಪಯೋಗಿಸಿರಿ. ಅದು ನಿಮ್ಮ 'ಮೇಕ್-ಅಪ್'ನ್ನು ಗಂಟೆಗಟ್ಟಳೆ ಸುಂದರವಾಗಿಡುತ್ತದೆ. ಅದನ್ನು ಸಂಪೂರ್ಣವಾದ 'ಮೇಕ್-ಅಪ್' ಆಗಿಯೂ ಬಳಸಬಹುದು. ನೆನಪಿಡಿರಿ. ನಿಮ್ಮ ಚರ್ಮಕ್ಕೆ ತುಂಬಾ ಪ್ರೀತಿಪೂರ್ಣ ರಕ್ಷಣೆ ಬೇಕು—ನಿಮ್ಮಂತೆಯೇ.

# ಪಾಂಡ್ಸ್ ವ್ಯಾನಿಶಿಂಗ್ ಕ್ರೀಮ್ —ಉತ್ತಮ ಪೌಡರ್ ಬೇಸ್




ಚೀಸ್‌ಬ್ರೋ-ಪಾಂಡ್ಸ್ ಇನ್ಕಾರ್ಪೊರೇಟೆಡ್
(ಯು.ಎಸ್.ಎ.ಯಲ್ಲಿ ಸೀಮಿತ ದಾಯಿತ್ವದೊಡನೆ ಸಂಘೀಕರಿಸಲ್ಪಟ್ಟಿದೆ)

ಅಮೃತವೂ
ವಿಷವಾಗಬಲ್ಲದೆಂಬುದಕ್ಕೆ
ಸ್ಪಷ್ಟ ನಿದರ್ಶನ

ಈ ರೋಗ ಬಂದಾಗ ಅಸ್ಥಿಮಜ್ಜೆ ನಾಶವಾಗಿ ದಪ್ಪವಾದ ಅಂಗಾಂಶ ಆ ಸ್ಥಳದಲ್ಲಿ ಬೆಳೆಯುತ್ತದೆ. ರಕ್ತಕಣಗಳು ನಾಶವಾಗುತ್ತವೆ. ರಕ್ತನಾಳಗಳು ಅಲ್ಲಲ್ಲಿ ಒಡೆದು ರಕ್ತ ಚರ್ಮದ ಕೆಳಗೆ ಸೇರಿಕೊಳ್ಳುತ್ತದೆ: ಅಪ್ಲಾಸ್ಟಿಕ್ ಅನೀಮಿಯು ಕ್ಷ ಕಿರಣಗಳು ಶರೀರದಲ್ಲಿ ಹೆಚ್ಚು ಪ್ರಮಾಣದಲ್ಲಿ ಸೇರಿಕೊಳ್ಳುವುದರಿಂದಾದರೂ ಬರಬಹುದು. ಕೆಲ ಔಷಧಗಳನ್ನು ಅಗತ್ಯಕ್ಕಿಂತ ಹೆಚ್ಚು ಸೇವಿಸುವುದರಿಂದಲೂ ಬರಬಹುದು. ಇಂಥಾ ಔಷಧಿಗಳ ಪೈಕಿ ಕ್ಲೋರಾಂಫೆನಿಕಾಲ್ ಒಂದು. ರಕ್ತ ಸಂಕ್ರಮಣ ಹಾಗೂ ಸ್ಟಿರಾಯ್ಡ್ ಜಾತಿಗೆ ಸೇರಿದ ಔಷಧಿಗಳನ್ನು ಸೇವಿಸಿ ಈ ರೋಗದಿಂದ ಪಾರಾಗಬಹುದು. ಆದರೆ ಇವುಗಳನ್ನುಪಯೋಗಿಸಿದಾಗಲೂ ಪಾರಾಗದ ದುರ್ದೈವಿಗಳಿದ್ದಾರೆ. ಅಂಥವರ ಪೈಕಿ ಶೀತ-ನೆಗಡಿಗಾಗಿ ಡಾಕ್ಟರರ ಬಳಿ ಕ್ಲೋರಾಂಫೆನಿಕಾಲ್ ಪಡೆದುಕೊಂಡ ಆ ಹನ್ನೆರಡು ವರ್ಷದ ಬಾಲಕಿಯೂ ಒಬ್ಬಳು.

# ಎಚ್ಚರಿಕೆ! ಪ್ರತಿಜೈವಿಕಗಳು ಕೊಲ್ಲಲೂಬಹುದು

ಹನ್ನೆರಡು ವರ್ಷದ ಬಾಲಿಕೆಯೊಬ್ಬಳು ಶೀತವಾಗಿದೆಯೆಂದು ಡಾಕ್ಟರರ ಬಳಿ ಹೋದಾಗ ಅವರು ಅನುಮಾನವಿಲ್ಲದೆ ಕ್ಲೋರಾಂಫೆನಿಕಾಲ್ ಎಂಬ ಪ್ರತಿಜೈವಿಕ (ಆ್ಯಂಟಿಬಯೊಟಿಕ್)ವನ್ನು ವಿಧಿಸಿದರು.

ಚಿಕ್ಕಪುಟ್ಟ ಕಾಯಿಲೆಗಳಿಗೂ ಕ್ಲೋರಾಂಫೆನಿಕಾಲ್ ವಿಧಿಸುವುದು ವಾಡಿಕೆಯಾದದ್ದರಿಂದಲೇ ಡಾಕ್ಟರರು ಕ್ಲೋರಾಂಫೆನಿಕಾಲ್ ಅನ್ನು ಅವಳಿಗೆ ಕೊಟ್ಟಿದ್ದು. ಆದರೆ ಪರಿಣಾಮ ವಿಪರೀತಕ್ಕಿಟ್ಟುಕೊಳ್ಳುವುದೆಂದು ಅವರು ಕನಸು ಮನಸಿನಲ್ಲಿಯೂ ಭಾವಿಸಿರಲಿಕ್ಕಿಲ್ಲ. ದುರ್ದೈವವಶಾತ್ ಕ್ಲೋರಾಂಫೆನಿಕಾಲ್ ಅನ್ನು ತೆಗೆದುಕೊಳ್ಳಲು ಪ್ರಾರಂಭಿಸಿದ ಕೆಲ ದಿನಗಳಲ್ಲೇ ಅಪ್ಲಾಸ್ಟಿಕ್ ಅನೀಮಿಯಾ ಆ ಬಾಲಕಿಯಲ್ಲಿ ಕಾಣಿಸಿಕೊಂಡಿತು.

ಇನ್ನೊಬ್ಬ ಇಪ್ಪತ್ತೈದು ವರ್ಷದ ತರುಣ. ಗಂಟಲ ಕೆರೆತಕ್ಕೆಂದು ಡಾಕ್ಟರರಿಂದ ಕ್ಲೋರಾಂಫೆನಿಕಾಲ್ ಪಡೆದುಕೊಂಡು ಒಂಭತ್ತು ದಿನಗಳವರೆಗೆ ಸೇವಿಸಿದ. ಇದಾದ ಎರಡು ತಿಂಗಳಲ್ಲೇ ಅಪ್ಲಾಸ್ಟಿಕ್ ಅನೀಮಿಯು ಅವನಿಗೆ ತಗಲಿಕೊಂಡಿತು. ಮುಂದೆ ನಾಲ್ಕು ತಿಂಗಳಲ್ಲಿ ಆತ ಸತ್ತು ಹೋದ.

೪೯ ವರ್ಷದ ವ್ಯಕ್ತಿಯೊಬ್ಬ ಕಿವಿ ಶೂಲೆಗಾಗಿ ಡಾಕ್ಟರರ ಬಳಿ ಹೋದಾಗ ಅವರು ಅವನಿಗೆ ಕ್ಲೋರಾಂಫೆನಿಕಾಲ್ ಕೊಟ್ಟರು; ಪರಿಣಾಮ ಆತ ಎರಡು ತಿಂಗಳಲ್ಲೇ ಅಪ್ಲಾಸ್ಟಿಕ್ ಅನೀಮಿಯಾದಿಂದ ಸತ್ತು ಹೋದ.

ಆಥರ್ ಫ್ರೇಸರ ಲೇಖನದಿಂದ

ಕ್ಲೋರಾಂಫೆನಿಕಾಲ್‌ನಿಂದ ಒದಗುವ ದುಷ್ಪರಿಣಾಮಗಳನ್ನು ಕುರಿತು ಹೀಗೆಯೇ ಉದಾಹರಣೆಗಳನ್ನು ಬೆಳೆಸುತ್ತಾ ಹೋಗಬಹುದು. ವೈಜ್ಞಾನಿಕ ಪತ್ರಿಕೆಗಳಲ್ಲಿ ಕಳೆದ ಇಪ್ಪತ್ತೈದು ವರ್ಷಗಳಿಂದ ಈ ಬಗ್ಗೆ ವರದಿಗಳು ಬರುತ್ತಿದ್ದರೂ ಅನೇಕ ಜನ ಡಾಕ್ಟರರು ಈ ಔಷಧಿಯನ್ನು ಜಾಗ್ರತೆಯಿಂದ ಉಪಯೋಗಿಸುತ್ತಿಲ್ಲ. ಪರಿಣಾಮವಾಗಿ ಪ್ರತಿವರ್ಷ ನೂರಾರು ಜನ ಪ್ರಾಣ ಕಳೆದುಕೊಳ್ಳುತ್ತಿದ್ದಾರೆ. ಅಮೇರಿಕದಲ್ಲಿ ಡಾಕ್ಟರರು ಮೇಲಿಂದ ಮೇಲೆ ವಿಧಿಸುವ ಪ್ರತಿಜೈವಿಕಗಳ ಪೈಕಿ ಕ್ಲೋರಾಂಫೆನಿಕಾಲ್ ಒಂದು ಎಂದು ಅರ್ಥರ್ ಫ್ರೀಸ್ ಹೇಳುತ್ತಾರೆ. ಅಲ್ಲಿ ಈ ಔಷಧಿಯನ್ನು ಹೇಗೆ ಉಪಯೋಗಿಸಲಾಗುತ್ತದೆಂಬ ಬಗ್ಗೆ ಒಂದು ಸಮೀಕ್ಷೆಯನ್ನು ಕೈಕೊಂಡಾಗ ಡಾಕ್ಟರರು ಯಾವುದೇ ಬಗೆಯ ತಾರತಮ್ಯವಿಲ್ಲದೆ ಕ್ಲೋರಾಂಫೆನಿಕಾಲ್ ಉಪಯೋಗಿಸಿದ್ದು ದೃಢಪಟ್ಟಿತು. ನಾಲ್ವತ್ತು ಲಕ್ಷ ಪ್ರಕರಣಗಳ ಪೈಕಿ ಎರಡು ಲಕ್ಷ ಪ್ರಕರಣಗಳಲ್ಲಿ ಮಾತ್ರ ಕ್ಲೋರಾಂಫೆನಿಕಾಲ್ ಅವಶ್ಯವಾಗಿತ್ತೆಂದು ಸಮೀಕ್ಷೆ ನಡೆಸಿದ ತಜ್ಞರ ತಂಡ ತೀರ್ಮಾನಿಸಿತು. ನಮ್ಮ ದೇಶದಲ್ಲಿ ಈ ಔಷಧಿಯನ್ನುಪಯೋಗಿಸುವ ಪ್ರಮಾಣ ಇದಕ್ಕಿಂತ ಹೆಚ್ಚಾಗಿರಬಹುದು. ಆದ್ದರಿಂದಲೇ, ರೋಗಿ ಮಾರಣಾಂತಿಕ ಸ್ಥಿತಿಯನ್ನು ತಲುಪಿದಾಗ ಮಾತ್ರ ಇಂತಹ ಔಷಧಿಗಳನ್ನುಪಯೋಗಿಸಬೇಕೆಂದು ವೈದ್ಯಕೀಯ ತಜ್ಞರು ಹೇಳತೊಡಗಿದ್ದಾರೆ.

ಉಳಿದ ಪ್ರತಿಜೈವಿಕಗಳಾದರೂ ಪ್ರಮಾಣ ಮೀರಿ ಉಪಯೋಗಿಸಿದಾಗ ಕಡಿಮೆ ಮಾರಕವಾಗಿಲ್ಲ. ನಾಲ್ವತ್ತೇಳು ವರ್ಷದ ಮಹಿಳೆಯೊಬ್ಬಳು ಗಂಟಲು ನೋವಿಗಾಗಿ ಡಾಕ್ಟರ ಬಳಿ ಬಂದಾಗ ಅವಳಿಗೆ ಪೆನಿಸಿಲಿನ್ ಕೊಡಲಾಯಿತೆಂದೂ ಮುಂದೆ ಮೂರು ದಿನಗಳಲ್ಲಿ ಮೈಮೇಲೆಲ್ಲಾ ಕಲೆಗಳು ಕಾಣಿಸಿಕೊಂಡವಲ್ಲದೆ ಮೂತ್ರ ವಿಸರ್ಜನೆಯು ಅವಳಿಗೆ ಕಠಿಣವಾಗತೊಡಗಿತೆಂದೂ ವೈದ್ಯಕೀಯ ಉಪಚಾರದಿಂದ ಯಾವ ಪ್ರಯೋಜನವೂ ಆಗದೆ ಆ ಮಹಿಳೆ ಮುಂದೆ ಸತ್ತುಹೋದಳೆಂದೂ 'ಅಮೇರಿಕನ್ ಮೆಡಿಕಲ್ ಅಸೋಸಿಯೇಶನ್'ನ ಪತ್ರಿಕೆಯ ಮೇ ಸಂಚಿಕೆಯಲ್ಲಿ ಉಲ್ಲೇಖಿಸಲಾಗಿದೆ. ಅಮೇರಿಕದಲ್ಲಿಂದು ಪ್ರತಿವರ್ಷ ಸುಮಾರು ಇಪ್ಪತ್ತರಿಂದ ಐವತ್ತು ಟನ್ನುಗಳಷ್ಟು ಪೆನ್ಸಿಲಿನ್ನನ್ನು ತಯಾರಿಸಲಾಗುತ್ತದೆಂದೂ ಇದರ ಪೈಕಿ ಶೇಕಡಾ ಹತ್ತರಷ್ಟು ಮಾತ್ರ ಯೋಗ್ಯವಾಗಿ ಉಪಯೋಗಿಸಲ್ಪಡುತ್ತದೆಂದೂ ಡಾ. ಬೆಂಜಾಮಿನ್ ಕಾಗನ್ ಹಾಗೂ ಡಾ. ಶರ್ಲಿ ಫ್ಯಾನಿನ್ ಎಂಬ ವೈದ್ಯಕೀಯ ತಜ್ಞರು ಹೇಳುತ್ತಾರೆ.

ಶೀತ, ನೆಗಡಿ, ಗಂಟಲ ಕೆರೆತ ಮುಂತಾದ ಸಾಮಾನ್ಯ ವ್ಯಾಧಿಗಳಿಗಾಗಿ ಡಾಕ್ಟರರು ಯಾವ ಬಗೆಯ ಔಷಧಿಗಳನ್ನುಪಯೋಗಿಸುತ್ತಾರೆಂಬ ಬಗ್ಗೆ ನಡೆದ ಒಂದು ಸಮೀಕ್ಷೆಯಲ್ಲಿ ಶೇಕಡಾ ೬೬ ರಷ್ಟು ಸಂದರ್ಭಗಳಲ್ಲಿ ಅವರು ಪ್ರತಿಜೈವಿಕಗಳನ್ನು ವಿಧಿಸುತ್ತಿದ್ದುದು ವ್ಯಕ್ತವಾಯಿತು. ಆದರೆ ಮೇಲೆ ಹೇಳಿದ ವ್ಯಾಧಿಗಳು ವೈರಸ್ಸುಗಳಿಂದ ಬರುತ್ತವೆಯೇ ಹೊರತು ರೋಗಾಣುಗಳಿಂದಲ್ಲ. ಆದ್ದರಿಂದ ಇಂಥ ಪ್ರಸಂಗಗಳಲ್ಲಿ ಪ್ರತಿಜೈವಿಕಗಳನ್ನು ಉಪಯೋಗಿಸಿದಾಗ ಅವು ಈ ವ್ಯಾಧಿಗಳನ್ನು ಗುಣಪಡಿಸುವುದಿಲ್ಲವಷ್ಟೇ ಅಲ್ಲ, ದುಷ್ಪರಿಣಾಮಗಳಿಗೆಡೆಗೊಡಲು ಕಾರಣವಾಗುತ್ತವೆ.

ಅಲ್ಲದೆ ಪ್ರತಿಜೈವಿಕಗಳನ್ನು ಹೀಗೆ ಸಿಕ್ಕಾಪಟ್ಟೆಯಾಗಿ ಬಳಸುತ್ತ ಹೋಗುವುದರಿಂದ ರೋಗಾಣುಗಳು ಪ್ರತಿರೋಧಕ ಶಕ್ತಿಯನ್ನು ಬೆಳೆಸಿಕೊಳ್ಳುವ ಸಂಭವವೂ ಉಂಟು. ಹೀಗಾದಾಗ ಹೆಚ್ಚು ಪ್ರಮಾಣದಲ್ಲಿ ಪ್ರತಿಜೈವಿಕಗಳನ್ನು ಸೇವಿಸಿದರೂ ರೋಗದಿಂದ ಗುಣಮುಖವಾಗುವ ಸಾಧ್ಯತೆ ಕಡಿಮೆ. ಅಲ್ಲದೆ ಇವುಗಳ ಉಪ ಪರಿಣಾಮಗಳೂ ಸಾಕಷ್ಟು ಹಾನಿಕರವಾಗಿವೆ. ಸ್ಟ್ರೆಪ್ಟೋಮೈಸಿನ್ನನ್ನು ಹೆಚ್ಚು ಪ್ರಮಾಣದಲ್ಲಿ ತೆಗೆದುಕೊಂಡು ಶ್ರವಣಶಕ್ತಿಯನ್ನು ಶಾಶ್ವತವಾಗಿ ಕಳೆದುಕೊಂಡ ಜನರಿದೇನೂ ಕೊರತೆಯಿಲ್ಲ. ರೋಗಾಣುಗಳು ಪ್ರತಿರೋಧಕ ಶಕ್ತಿಯನ್ನು ಹೆಚ್ಚಿಸಿಕೊಂಡಿದ್ದರಿಂದ ಪೆನಿಸಿಲಿನ್ ಕೂಡ ಕೆಲವೇಳೆ ಉಪಯೋಗಬೀಳುವುದಿಲ್ಲ.

ಇದರರ್ಥ ಪ್ರತಿಜೈವಿಕಗಳನ್ನು ಸೇವಿಸ

ಬಾರದೆಂದೇನೂ ಅಲ್ಲ. ಚಿಕ್ಕ ಪುಟ್ಟ ರೋಗಗಳ ಸಲುವಾಗಿ ಅವುಗಳನ್ನು ಪಯೋಗಿಸಿದರೆ ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವನ್ನು ಉಪಯೋಗಿಸಿದಂತೆಯೇ ಸರಿ. ಆದ್ದರಿಂದ ಪ್ರತಿಜೈವಿಕಗಳನ್ನು ಡಾಕ್ಟರರೂ ರೋಗಿಗಳೂ ಜಾಗ್ರತೆಯಿಂದ ಉಪಯೋಗಿಸಬೇಕು. ಪ್ರತಿಜೈವಿಕಗಳಿಂದೊದಗಬಹುದಾದ ಗಂಡಾಂತರಗಳನ್ನು ನಿವಾರಿಸಲು ನೀವು ಈ ಕೆಳಗಿನ ಅಂಶಗಳನ್ನು ಗಮನದಲ್ಲಿರಿಸಿಕೊಳ್ಳುವುದು ಒಳ್ಳೆಯದು.

* ಯಾವ ಪ್ರತಿಜೈವಿಕಗಳು ನಿಮಗೆ ಒಗ್ಗುವುದಿಲ್ಲವೆಂಬುದನ್ನು ಡಾಕ್ಟರರಿಗೆ ಮೊದಲೆ ತಿಳಿಸಿಬಿಡಿ.

* ಡಾಕ್ಟರರು ಪ್ರತಿಜೈವಿಕಗಳನ್ನು ವಿಧಿಸಿದಾಗ ಅದನ್ನು ಎಷ್ಟು ಸಲ, ಯಾವ ಪ್ರಮಾಣದಲ್ಲಿ ತೆಗೆದುಕೊಳ್ಳಬೇಕು, ಊಟಕ್ಕಿಂತ ಮೊದಲು ತೆಗೆದುಕೊಳ್ಳಬೇಕೋ ಅಥವಾ ನಂತರ ತೆಗೆದುಕೊಳ್ಳಬೇಕೋ, ಹಾಲಿನೊಂದಿಗೆ ತೆಗೆದುಕೊಳ್ಳಬೇಕೋ ಅಥವಾ ನೀರಿನೊಂದಿಗೆ ತೆಗೆದುಕೊಳ್ಳಬೇಕೋ ಎಂಬುದನ್ನು ಅವರಿಂದ ಖಚಿತಪಡಿಸಿಕೊಳ್ಳಿ.

* ಬೇರಾವುದೇ ಬಗೆಯ ಔಷಧಿಗಳನ್ನು ನೀವು ಈಗಾಗಲೆ ಸೇವಿಸುತ್ತಿದ್ದರೆ ಈ ಬಗ್ಗೆ ಡಾಕ್ಟರರಿಗೆ ಮಾಹಿತಿ ಕೊಡಿ. ಇಲ್ಲವಾದರೆ ಪ್ರತಿ ಜೈವಿಕಗಳೊಡನೆ ಈ ಔಷಧಿಗಳು ಸೇರಿಕೊಂಡು ದುಷ್ಪರಿಣಾಮವನ್ನುಂಟು ಮಾಡಬಹುದು.

* ಡಾಕ್ಟರು ಹೇಳಿದಷ್ಟು ಕಾಲ ಪ್ರತಿಜೈವಿಕಗಳನ್ನು ಸೇವಿಸಿರಿ. ಅರ್ಧಕ್ಕೇ ಬಿಟ್ಟುಬಿಡಬೇಡಿ.

* ಡಾಕ್ಟರರ ಸಲಹೆಯಿಲ್ಲದೆ ಯಾವ ಪ್ರತಿಜೈವಿಕವನ್ನೂ ಸೇವಿಸಬೇಡಿ, ಹಾಗೆಯೇ ಪ್ರತಿ-ಜೈವಿಕಗಳಿಂದ ಯುಕ್ತವಾದ ಯಾವ ಮುಲಾಮನ್ನೂ ಡಾಕ್ಟರರು ಹೇಳದ ಹೊರತು ಉಪಯೋಗಿಸಬೇಡಿ.

* ಡಾಕ್ಟರರ ಚೀಟಿಯಿಲ್ಲದೆ ಎಷ್ಟೋ ಔಷಧಿಗಳು ಪೇಟೆಯಲ್ಲಿ ಮುಕ್ತವಾಗಿ ದೊರೆಯುತ್ತಿವೆ. ಅಂತಹ ಔಷಧಿಗಳನ್ನೇನಾದರೂ ಉಪಯೋಗಿಸುತ್ತಿದ್ದರೆ ಪ್ರತಿಜೈವಿಕಗಳನ್ನುಪಯೋಗಿಸುವ ಮೊದಲು ಆ ಬಗ್ಗೆ ಡಾಕ್ಟರರಿಂದ ಸಲಹೆ ಪಡೆಯಿರಿ.

* ಶೀತ, ನೆಗಡಿ, ಕೆಮ್ಮುಗಳಂತಹ ಚಿಕ್ಕ ಪುಟ್ಟ ವ್ಯಾಧಿಗಳಿಗಾಗಿ ಪ್ರತಿಜೈವಿಕಗಳನ್ನು ಸೇವಿಸಬೇಡಿ. ಇವು ವೈರಸ್ ಮೂಲದ್ದಿದ್ದು ಯಾವುದೇ ಪ್ರಯೋಜನವನ್ನೀಯುವುದಿಲ್ಲ. ಯಾವ ಪ್ರತಿರೋಧಕವೂ ವೈರಸ್ಸನ್ನು ವಿರೋಧಿಸುವುದಿಲ್ಲ.

* ಸಾಧ್ಯವಿದ್ದ ಮಟ್ಟಿಗೆ ಪ್ರತಿಜೈವಿಕಗಳನ್ನು ಸೇವಿಸಬೇಡಿ ಮೇಲಿಂದ ಮೇಲೆ ಅವುಗಳನ್ನು ಸೇವಿಸಿದರೆ ಶರೀರ ಅವುಗಳಿಗೆ ಸೂಕ್ಷ್ಮಸಂವೇದಿ (Sensitive) ಯಾಗಬಹುದು. ರೋಗಾಣುಗಳು ಪ್ರತಿರೋಧಕಶಕ್ತಿಯನ್ನು ಬೆಳೆಸಿಕೊಳ್ಳಬಹುದು, ಅಲ್ಲದೆ ಈ ಔಷಧಿಗಳಿಂದ ವಿಷಮವಾದ ಪ್ರತಿಕ್ರಿಯೆಗಳು ತಲೆದೋರುವ ಸಂಭವವೂ ಇದೆ. ❀



ನಾವು ಪ್ರೀತಿಸುವ ದೇಶ, ಶಾಂತಿ ಹಾಗು ಸಮೃದ್ಧಿಯ ನವ ಕ್ಷಿತಿಜದತ್ತ ಇಡೀ ಮಾನವಕೋಟಿಯನ್ನು ಮುನ್ನಡೆಸಿಯೇ ತೀರಬೇಕೆಂಬ ನಿರ್ಧಾರದಿಂದ ನಾವು ಹೆಜ್ಜೆ ಇಡೋಣ.

ಜಾನ್. ಎಫ್. ಕೆನಡಿ

ರಕ್ತ ಮತ್ತು ಕಬ್ಬಿಣ ಇವುಗಳಿಂದಲೆ ನಮ್ಮ ಸಮಸ್ಯೆಗಳು ಪರಿಹಾರವಾಗುವುದು; ಸೂಚನೆಗಳಿಂದಲ್ಲ ನಿರ್ಣಯಗಳಿಂದಲ್ಲ.

—ಬಿಸ್ಮಾರ್ಕ್

## "ದಗ್ಧರು"

ದೇಗುಲದ ಬಾಗಿಲಲಿ
ಸಾಲಾಗಿ ಕುಳಿತಿರುವ
ಎಲುವು ತೊಗಲಿನ ಗುಂಪೆ
ಮೌನವೇಕೆ?

ಬಲವಿಲ್ಲವೆ ನಿಮ್ಮ
ನಾಲಿಗೆಯ ನರಗಳಲಿ
ಭಗ್ನ ಜೀವನ ಪಯಣ
ನಿಮ್ಮ ಸಾಕೆ?

ಅರಿ ಅಂಗಾರಾದ
ಆಶೆ ಬತ್ತಿಗೆ ತುಸುವೆ
ತೈಲವೆರೆದಿದೆಯೇನು
ಹಸಿವೆ ಹಣತೆ?

ಅಂಗಲಾಚುತ ಅವರ
ಅಂಗಣದಿ ನಿಂದಾಗ
ನೀಡಲಿಲ್ಲಪ ಅಗುಳ
ಈ ಭಕ್ತಜನತೆ?

ಗರ್ಭಗುಡಿ ಪೀಠದಲಿ
ಕಣ್ಮುಚ್ಚಿ ಕುಳಿತಿರುವ
ಕಲ್ಲುದೇವರು ನಿಮಗೆ
ನೀಡಬೇಕೆ?

ಫಲಪುಷ್ಪ ಪಕ್ವಾನ್ನ
ನೈವೇದ್ಯ ತಂದಿರುವ
ಇವರ ಎದೆಯಲಿ ಕರುಣೆ
ಮಿಡಿಸಬೇಕೆ?

—ಮುಹಮದಲಿ ಗೋಗೇರಿ

## ವಿಕ್ಷೇಪ

ಗಲ್ಲಕ್ಕೆ ಕೈ ಹೊತ್ತು ಕೂತರೆ ಬುದ್ಧನಂತೆ
ತಲೆಯಲಿದ್ದುದು ಪೆನ್ನಿಗೆ ಇಳಿದು
ಕಾಗದದ ಮೇಲೆ ಮೂಡುವುದಿಲ್ಲ.
ವಿಕ್ಷೇಪ...
ಅನುಕರಣೆಯ ಅಂಟು ರೋಗ
ಅಸ್ತವ್ಯಸ್ತ ಮನದ ಒಡಕು
ವಿಚಾರ ಭಾವಗಳ ತೊಡಕು
ವೃಥಾ ಕಾಲಕ್ಷೇಪ.
ಚಪಲ
ಇಲ್ಲದುದ ಬೇಕೆಂಬ
ಹುಂಬತನ
ಮುಖದ ಮೇಲೆ ಕಳೆಯಿಲ್ಲ
ಕಣ್ಣಿನಲಿ ಹೊಳಪಿಲ್ಲ
ಕಪ್ಪು ವರ್ತುಲ
ಕೂದಲು ತುಂಬಿದ ಗಲ್ಲ
ಕತ್ತು,
ನೀನು ಜಾತಿ ಹಿಪ್ಪಿ ಅಲ್ಲ
ಆ ಹೆಣ್ಣಿನ ಅಗಲವಾದ
ಬರಿದು ಸೊಂಟವ ನೋಟ
ಕಣ್ಣಿನ ಹಸಿವ ತಣಿಸು
ಪರೀಕ್ಷೆ ಬರೆವ ತಲೆ ನಿನಗಿಲ್ಲ;
ವಿದ್ಯೆ ನಿನ್ನ ಸೊತ್ತಲ್ಲ
ವಿದ್ಯಾಲಯಕೆ ದಾಳಿಯ ಹೂಡು
ಗಾಜು, ಕುರ್ಚಿ, ಶಿಕ್ಷಕನ
ತಲೆ ಒಡೆ, ನಕಲು ಹೊಡೆ
ಡಿಗ್ರಿಯ ಕಾಗದ ನಿನಗೆ ಬೇಕಲ್ಲ...
ಕಾಗದದ ಮೇಲೆ ಪೆನ್ನಿನ ಮಸಿ
ಬೀಳುವುದು
ಅಲ್ಲ ವಿಚಾರ ವಸ್ತು
ಅದು ತಲೆಯೊಳಗಿನ ಕಸರತ್ತು
ತಲೆ ನಿನಗಿಲ್ಲ —ವಿಶ್ವನಾಥ್ ಕಾರ್ನಾಡ್

# ಮಲ್ಲಿನಾಥ ಸೂರಿ

ಡಾ. ನಿಗಮ ಶರ್ಮಾ

ಕವಿಯ ಅಂತರಂಗವನ್ನು ಅರಿತುಕೊಂಡು ಇತರರಿಗೆ ಅದನ್ನು ಶ್ರುತಪಡಿಸುವ ರೀತಿಯಲ್ಲಿ ವ್ಯಾಖ್ಯಾನಿಸುವುದು ಕಠಿಣಕಾರ್ಯ. ಇಂಥದರಲ್ಲಿ ಸಿದ್ಧಿ ಪಡೆದವರು ಕೇವಲ ಬೆರಳೆಣಿಕೆಯ ಮೇಲಿನಷ್ಟು ಜನ. ಸಂಸ್ಕೃತ ಸಾಹಿತ್ಯದಲ್ಲಿಯ ಇಂಥ ಒಬ್ಬ ಪ್ರತಿಭಾಶಾಲಿ ಟೀಕಾಕಾರನೆಂದರೆ ಮಹಾಮಹೋಪಾಧ್ಯಾಯ ಕೋಲಾಚಲ ಮಲ್ಲಿನಾಥ ಸೂರಿ ಎಂದೆನ್ನಬೇಕು.

ಕವಿಯ ಕೃತಿಗಳಿಗೆಲ್ಲ ಸೂಕ್ತ ಸುವ್ಯವಸ್ಥಿತ ಟೀಕೆ ಬರೆದು, ಆ ಕೃತಿಗಳ ಅಂತರಂಗವನ್ನೇ ಬಿಚ್ಚಿಡುವುದು ಟೀಕಾಕಾರನ ಕರ್ತವ್ಯವಾಗಿರುತ್ತದೆ. ಅಂತೇ ಪತಂಜಲಿಯು "ಕೇವಲ ಚರ್ಚೆ ಎಂದರೆ ವ್ಯಾಕರಣವಲ್ಲ; ಮೂಲ ಸೂತ್ರಗಳನ್ನು ಪರಾಂಬರಿಸಿ ಇಷ್ಟಾರ್ಥವನ್ನು ಕಂಡು ಹಿಡಿಯುವುದೆ ಮುಖ್ಯ. ಶಂಕೆ ಕುಶಂಕೆಗಳನ್ನು ನಿವಾರಿಸಿ ಮೂಲದ ಪುಷ್ಟಿ ಸಾಧಿಸುವುದು ಅಗತ್ಯ" ಎಂದು ಹೇಳಿದ್ದಾನೆ. ಕೆಲವೊಮ್ಮೆ ಪೂರ್ವಗ್ರಹ ದೂಷಿತ ದೃಷ್ಟಿಯಿಂದ ಬರೆಯಲಾಗುವ ವ್ಯಾಖ್ಯಾನ (ಟೀಕೆ)ಗಳಲ್ಲಿ ಅರ್ಥವು ಮೂಲಕ್ಕೆ ವಿಪರೀತವಾಗಿಬಿಡುತ್ತದೆ. ಅಂತೇ ಸುವಿಖ್ಯಾತ ಅರ್ಥಶಾಸ್ತ್ರಜ್ಞ ಚಾಣಕ್ಯನು ತನ್ನ ಕೃತಿಗಳಿಗೆ ತಾನೇ ಟೀಕೆ ಬರೆಯುವುದು ಉತ್ತಮ ಎಂದು ಭಾವಿಸಿದ್ದಾನೆ. ತಾನು ಮಾಡಿದ್ದು ಉತ್ತಮ ಎಂಬ ಜಾಣ್ನುಡಿ ಇಲ್ಲವೆ ?

ಮಲ್ಲಿನಾಥನು ಈ ಯಾವ ದೋಷಗಳನ್ನೂ ತನ್ನ ಹತ್ತಿರ ಸುಳಿಯಗೊಟ್ಟಿಲ್ಲ. "ನಾಮೂಲಂ ಲಿಖ್ಯತೇ ಕಿಂಚಿನ್ನಾನಪೇಕ್ಷಿತಮುಚ್ಯತೇ" (ಮೂಲಕ್ಕೆ ವಿರುದ್ಧವಾಗಿ ಅಥವಾ ಮೂಲಕ್ಕೆ ಅನಿಷ್ಟವಾದುದನ್ನು ಹೇಳುವದಿಲ್ಲ) ಎಂದು ಮಲ್ಲಿನಾಥ ಸಾರಿಬಿಟ್ಟಿದ್ದಾನೆ. ಈ ಮಹಾಪ್ರತಿಜ್ಞೆಯನ್ನು ಆತ ಚಾಚೂ ತಪ್ಪದೆ ಪಾಲಿಸಿದ್ದಾನೆ.

ಇಷ್ಟಾಗಿ ಅವನ ಕೃತಿಗಳೂ ಹೇರಳವಾಗಿವೆ, ಕಾಳಿದಾಸನ ರಘುವಂಶ, ಕುಮಾರ ಸಂಭವ, ಮೇಘದೂತ ಈ ಕಾವ್ಯಗಳಿಗೆ ಮಲ್ಲಿನಾಥನು 'ಸಂಜೀವಿನಿ' ಎಂಬ ಹೆಸರಿನ ಟೀಕೆ ಬರೆದಿದ್ದಾನೆ, ಅಲ್ಲದೆ ಭಾರವಿಯ ಕಿರಾತಾರ್ಜುನೀಯ ಕಾವ್ಯಕ್ಕೆ ಘಂಟಾಪಥ, ಮಾಘನ ಶಿಶುಪಾಲವಧಕ್ಕೆ ಸರ್ವಂಕಷ, ಶ್ರೀ ಹರ್ಷನ ನೈಷಧಚರಿತಕ್ಕೆ ಜೀವಾತು, ಭಟ್ಟಿಕಾವ್ಯಕ್ಕೆ ಸರ್ವಪಥೀನಾ ಎಂಬ ಹೆಸರುಗಳಿಂದ ಟೀಕೆಗಳನ್ನು ಬರೆದಿದ್ದಾನೆ. ಇದಲ್ಲದೆ ತಂತ್ರವಾರ್ತಿಕಕ್ಕೆ ಸಿದ್ಧಾಂಜನ ಟೀಕೆ, ತಾರ್ಕಿಕರಕ್ಷೆಗೆ ನಿಷ್ಕಂ ಟೀಕಾಟೀಕೆ, ಪ್ರಶಸ್ತಪಾದ ಟೀಕೆಗಳನ್ನೂ

ಮಲ್ಲಿನಾಥನೇ ಬರೆದನೆಂದೂ ಹೇಳಲಾಗುತ್ತಿದೆ. ಅಲಂಕಾರ ಶಾಸ್ತ್ರಗ್ರಂಥ 'ಏಕಾವಲಿ'ಗೆ ಈತನು ತರಲಾ ನಾಮಕ ಟೀಕೆ ಬರೆದಿದ್ದಾನೆ. ಸ್ವರಮಂಜರಿಗೆ ಪರಿಮಲ ಟೀಕೆ ಬರೆದಿದ್ದಾನೆಂಬ ಉಲ್ಲೇಖವು 'ತರಲಾ'ದಲ್ಲಿದೆ. ಮಲ್ಲಿನಾಥ ಸೂರಿಯ ಸ್ವತಂತ್ರಕೃತಿ 'ರಘುವೀರ ಚರಿತ' ವನ್ನು ತಿಳಿದವರು ಬಹಳ ಕಡಿಮೆ ಜನ.

ಮಲ್ಲಿನಾಥನು ವಿಕ್ರಮಶಕೆ ಹದಿನೈದನೇ ಶತಮಾನದಲ್ಲಿದ್ದನೆಂದು ನಂಬಲಾಗಿದೆ. ಪೆದ್ದ ಭಟ್ಟ ಆತನ ಹೆಸರು. ಈತ ಕನ್ನಡಿಗನೊ ತೆಲುಂಗನೊ ಹೇಳುವುದು ಕಷ್ಟ. ಈತನೂ ಕಾಲಿದಾಸನಂತೆ ಚಿಕ್ಕವನಿದ್ದಾಗ ಪೆದ್ದನೇ ಆಗಿದ್ದನೆಂದೂ ಈತನ ಗುರುವು ಈತನಿಗೆ ತುಪ್ಪದ ಬದಲು ಬೇವಿನ ಎಣ್ಣೆಯನ್ನು ಊಟಕ್ಕೆ ನೀಡುತ್ತಿದ್ದನೆಂದೂ ಈ ಪ್ರಯೋಗದಿಂದಲೇ ಮುಂದೆ ಈತನಿಗೆ ಸರಸ್ವತಿಯು ಒಲಿದಳೆಂದೂ ದಂತಕಥೆಯೊಂದು ಪ್ರಚಾರದಲ್ಲಿದೆ. ನಂತರ ಈತನು ವಾರಾಣಸಿಗೆ ತೆರಳಿ ಅಲ್ಲಿ ವಿದ್ಯಾಭ್ಯಾಸ ಮಾಡಿದ. ಈತನು ವಿದ್ಯಾಪಾರಂಗತನಾದ ನಂತರ ಈತನ ಹೆಸರಿನ ಮುಂದೆ ಭಟ್ಟ ಉಪಾಧಿಯನ್ನು ಜೋಡಿಸಲಾಯಿತು. ಹೀಗಾಗಿ ಈತನು ಪೆದ್ದಭಟ್ಟನಾದ. ಈತನ ಹಿರಿಯ ಮಗನೂ ಪೆದ್ದಮಾರ್ಯ, ಪೆದ್ದ ಎಂಬ ಹೆಸರಿನಿಂದ ಪ್ರಸಿದ್ಧ ವಿದ್ವಾಂಸನಾಗಿದ್ದನು. ಎರಡನೆ ಮಗ ಕುಮಾರಪಾಲ ಸ್ವಾಮಿಯು ಪ್ರತಾಪರುದ್ರ ಯಶೋಭೂಷಣ ಎಂಬ ಅಲಂಕಾರ ಗ್ರಂಥಕ್ಕೆ ಟೀಕೆ ಬರೆದಿದ್ದಾನೆಂದೂ ತಿಳಿದು ಬರುತ್ತದೆ.

ಮಲ್ಲಿನಾಥನ ತಂದೆಯ ಹೆಸರು ದೇವಮಾರ್ಯ ಎಂದು ಕೆಲ ಸಂಶೋಧಕರು ಹೇಳುತ್ತಾರೆ. ಈತನು ಹುಟ್ಟಿದ್ದು ಆಂಧ್ರದ ರಾಜಮಹೇಂದ್ರಿ ಮಂಡಲದಲ್ಲಿ ಎಂದು ಹೇಳಲಾಗುತ್ತಿದೆ. (ಕನ್ನಡದ ಆದಿಕವಿ ಪಂಪನೂ ವೆಂಗಿಮಂಡಲದವನಲ್ಲವೇ) ಈತ ಬ್ರಾಹ್ಮಣನೆಂದೂ ನಂಬಲಾಗಿದೆ. ಆದರೆ ಉತ್ತರ ಭಾರತದಲ್ಲಿ ಈ ಯಾವ ವಿವರಗಳೂ ಲಭ್ಯವಿಲ್ಲ.

ಮಲ್ಲಿನಾಥ ಜೈನ ಎಂದು ಕೆಲವರು ಹೇಳುತ್ತಾರೆ. ಆದರೆ ಇದಕ್ಕೆ ಪ್ರಮಾಣಗಳಿಲ್ಲ. ಆದರೆ ಈತನ ಗ್ರಂಥಗಳ ಅಂತರ್ಗತ ಪುರಾವೆಗಳಿಂದ ಈತನು ವೈದಿಕ ಹಿಂದೂ ಎಂದು ಸಿದ್ಧವಾಗುವಂತಿದೆ. ಈತನ ಕೃತಿಗಳಲ್ಲಿ ವೇದ, ಶಾಸ್ತ್ರ, ಪುರಾಣಗಳ ಉಲ್ಲೇಖಗಳು ಅನೇಕ ಕಡೆಗಳಲ್ಲಿ ಬರುತ್ತವೆ. ಶಂಕರ, ಪಾರ್ವತಿ, ಗಣೇಶ, ಶಾರದಾ, ವಿಷ್ಣು, ಸ್ಕಂದ, ಕೃಷ್ಣ, ಆದಿ ದೇವತೆಗಳ ಪ್ರಸ್ತಾಪವೂ ಸಾಕಷ್ಟು ಬರುವುದುಂಟು. ಅಲ್ಲದೆ ಈತನು ಟೀಕೆಗಳನ್ನು ಬರೆದುದು ವೈದಿಕ ಪರಂಪರೆಯ ಕವಿಗಳ ಕೃತಿಗಳನ್ನು ಕುರಿತು ಎಂಬುದನ್ನು ಲಕ್ಷಿಸಬೇಕು.

ಮಲ್ಲಿ ಅಥವಾ ಮಲ್ಲಿದೇವಿ ಪಾರ್ವತಿಗೆ ಇನ್ನೊಂದು ಹೆಸರು. ಆದ್ದರಿಂದ ಮಲ್ಲಿನಾಥ ಎಂದರೆ ಶಂಕರ, ಶಿವ ಎಂದಾಗುತ್ತದೆ. ಮಲ್ಲಿನಾಥನ ಕೃತಿಗಳಲ್ಲಿ ಶಿವನ ಬಗ್ಗೆ ಆದರ ನಿಷ್ಠೆಗಳು ಕಂಡು ಬರುತ್ತವೆ. ಕೋಲಾಚಲ ಗ್ರಾಮವು ಮಲ್ಲಿನಾಥನಿಗೆ ಉಂಬಳಿಯಾಗಿ ದೊರೆತ ಗ್ರಾಮವಾಗಿತ್ತು. ಪ್ರಾಚೀನ ಕಾಲದಲ್ಲಿ ಸೂರ್ಯೋಪಾಸಕರಾದ ವಿದ್ವಾಂಸರಿಗೆ 'ಸೂರಿ' ಎಂದು ಕರೆಯಲಾಗುತ್ತಿತ್ತು. ಸೂರಿ ಎಂದರೆ ಕವಿ ಎಂದೂ ಇದೆ. 'ಸ ಧ್ವನಿಃ ಇತಿ ಸೂರಿಭಿಃ ಕಥಿತಃ' ಎಂದು ಆನಂದ ವರ್ಧನನ ಕೃತಿಯಲ್ಲಿ ಬಂದಿದೆ.

ಈ ಮಲ್ಲಿನಾಥನಿಗಿಂತ ಮೊದಲು ಅನೇಕ ಟೀಕಾಕಾರರು ಕಾಲಿದಾಸನ ಗ್ರಂಥಗಳಿಗೆ ತಮಗೆ ತಿಳಿದಂತೆ ಟೀಕೆಗಳನ್ನು ಬರೆದು ಅಪಾರ್ಥ ಬರುವಂತೆ ಪ್ರಚಾರ ಮಾಡಿದ್ದರಂತೆ. ಆದ್ದರಿಂದ ಈಗ ತಾನು ಆ ಅಪಚಾರವನ್ನೆಲ್ಲ ತೊಡೆದು ಹಾಕಿ ಸಂಜೀವಿನಿ ಟೀಕೆಯಿಂದ ಕಾಲಿದಾಸ ಸರಸ್ವತಿಯನ್ನು ಉಜ್ವಲವಾಗಿಸುತ್ತೇನೆ ಎಂಬ ಅರ್ಥದ ಶ್ಲೋಕವೊಂದು ಸಿಗುತ್ತದೆ.

ಭಾರತಿ ಕಾಲಿದಾಸಸ್ಯ ದುರ್ವ್ಯಾಖ್ಯಾ
ವಿಷಮೂರ್ಛಿತಾ
ಏಷಾ ಸಂಜೀವಿನಿಟೀಕಾ
ತಾಮದ್ಯೋಜ್ಜೀವ ಯಿಷ್ಯತಿ

ಕೆಲ ಟೀಕಾಕಾರರು ಅಜ್ಞಾನದಿಂದ ಮೂಲ ಪಾಠದಲ್ಲಿ ಮಾರ್ಪಾಡುಗಳನ್ನು ಮಾಡಿದ್ದರು

ಮಲ್ಲಿನಾಥನು ಅವರ ಎಲ್ಲ ತಪ್ಪುಗಳನ್ನು ತನ್ನ ಬುದ್ಧಿ ಕೌಶಲದಿಂದ ತಿದ್ದಿದ್ದಾನೆ. ಅಲ್ಲದೆ ಮೂಲದ ಸೌಂದರ್ಯವನ್ನು ಎತ್ತಿ ತೋರಿದ್ದಾನೆ. ರಘುವಂಶದ ಮೂರನೆ ಸರ್ಗದ ೧೨ ನೇಶ್ಲೋಕದಲ್ಲಿ 'ಗರ್ಭಭರ್ಮಣಿ' ಎಂಬ ಶಬ್ದ ಇದೆ. ಇದನ್ನು ಕೆಲವರು 'ಗರ್ಭಕರ್ಮಣಿ' ಎಂದು ಪಾಠಾಂತರಿಸಿದರು. ಇದರಿಂದ ಶಬ್ದಕ್ಕೆ ಗರ್ಭಾಧಾನದ ಅರ್ಥ ಉಂಟಾಗಿ ಔಚಿತ್ಯಭಂಗ ವಾಗುತ್ತದೆ. ಮೂಲದಲ್ಲಿ ಇದ್ದುದೇ ಸರಿ ಎಂದು ಮಲ್ಲಿನಾಥನ ಸ್ಪಷ್ಟೀಕರಣ. ಅದರಂತೆ ಮೇಘದೂತದ ಪೂರ್ವಾರ್ಧ ೪೭ನೇ ಶ್ಲೋಕದಲ್ಲಿ "ಕುವಲಯಂ ದಲಪ್ರಾಪಿ" ಎಂದಿರುವುದನ್ನು ಶ್ರೀನಾಥನು "ಕುವಲಯದಲಕ್ಷೇಪಿ" ಎಂದು ಬದಲಿಸಿದೆ. ಆದರೆ ಮಲ್ಲಿನಾಥನಿಗೆ ಮೂಲವೇ ಸರಿ ಎಂದು ತೋರಿದೆ.

ಕಾಳಿದಾಸನ ಕೃತಿಗಳನ್ನು ಅರ್ಥೈಸುವಲ್ಲಿಯೂ ಮಲ್ಲಿನಾಥನು ಅಪೂರ್ವ ನಿಷ್ಠೆಯನ್ನು ಪ್ರದರ್ಶಿಸಿದ್ದಾನೆ. ರಘುವಂಶದ ೪ನೇ ಸರ್ಗ ೨೮ನೇ ಶೋಕದಲ್ಲಿ "ಪ್ರಾಚೀನ ಬರ್ಹಿ" ಎಂಬ ಪದ ಬರುತ್ತದೆ. ಇದು ಯಾವನೋ ಒಬ್ಬ ರಾಜನ ಹೆಸರಿರಬೇಕು ಎಂದು ಕೆಲವರ ಅಭಿಮತ. ಆದರೆ ಮಲ್ಲಿನಾಥನು 'ಪ್ರಾಚೀನ ಬರ್ಹಿ' ಎಂದರೆ ಇಂದ್ರ ಎಂದು ಕಾಳಿದಾಸನಿಗೆ ಇಷ್ಟವಾದ ಅರ್ಥವನ್ನೇ ಹೇಳಿದ್ದಾನೆ.

ಮಲ್ಲಿನಾಥನು ಕೆಲ ಟೀಕಾಕಾರರನ್ನು ಹೆಸರಿಸಿಯೆ ಖಂಡಿಸಿದ್ದಾನೆ. ಮೇಘದೂತ ಉತ್ತರಾರ್ಧದ ೩೮ ನೇ ಶ್ಲೋಕ "ತಾಮಾಯುಷ್ಮನ್" ಕ್ಕೆ ಶ್ರೀನಾಥನು ಹೇಳಿದ ಅರ್ಥ ಒಪ್ಪದ ಮಲ್ಲಿನಾಥನು "ನಾಥ ವಚನಂ ಅನಾಥ ವಚನಮೇವ" ಎಂದು ಖಂಡಿಸಿದ್ದಾನೆ. ಅದೇ ಮೇಘದೂತಕ್ಕೆ ಟೀಕೆ ಬರೆದ ನಿರುಕ್ತಕಾರ ಎಂಬ ಟೀಕಾಕಾರನು ಉನ್ಮತ್ತ ಪ್ರಲಾಪಿ ಇದ್ದಾನೆಂದೂ ಮಲ್ಲಿನಾಥನ ಅಭಿಮತ

ಮಲ್ಲಿನಾಥ ಬಹು ಶ್ರುತಜ್ಞ. ಪ್ರಕಾಂಡ ಪಂಡಿತ. ಅಮರ, ವಾಮನ, ಕೇಶವ, ಹಲಾಯುಧ, ಯಾದವ, ವಿಶ್ವಸಜ್ಜನ, ಪಾಲಕಾಪ್ಯ, ಶಬ್ದಾರ್ಣವ, ರುದ್ರ ಮುಂತಾದ ಕೋಶಗಳ ಉಲ್ಲೇಖದಿಂದ ತನ್ನ ಅರ್ಥವನ್ನು







ಸಮರ್ಥಿಸಿಕೊಳ್ಳುತ್ತಾನೆ ಮಲ್ಲಿನಾಥ. ಆತನು ಮನು, ಗೌತಮ, ಕಾಮಂದಕ, ಚಾಣಕ್ಯ, ವರಾಹಸಂಹಿತಾ, ದಂಡನೀತಿ, ಚಾಕ್ಷುಷ ಮುಂತಾದ ನೀತಿಕಾರರ ಕೃತಿಗಳ ಉಲ್ಲೇಖಗಳನ್ನೂ ನೀಡುತ್ತಾನೆ. ನೃತ್ಯ ಸರ್ವಸ್ವ, ದಶರೂಪಕ, ಶಂಭುರಹಸ್ಯ, ರತಿರಹಸ್ಯ, ಮಂದಿರಾರ್ಣವ, ಸಿದ್ಧಯೋಗ ಸಂಗ್ರಹ, ಮೃಗಚರ್ಮಿಣೀಯ ಮುಂತಾದ ಪ್ರಸಿದ್ಧ ಗ್ರಂಥಗಳನ್ನೂ ಆತ ಹೇಳದೆಬಿಟ್ಟಿಲ್ಲ. ಕಾಶಿಕಾ, ನ್ಯಾಸ, ಮಹಾಭಾಷ್ಯ, ಚಾಂದ್ರ ವ್ಯಾಕರಣಗಳನ್ನೂ ಆತ ಚನ್ನಾಗಿ ಅರಗಿಸಿಕೊಂಡಿದ್ದ ಎಂಬುದೂ ಆತನ ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ.

ಹೀಗೆ ಪ್ರಕಾಂಡ ಪಂಡಿತನಾಗಿದ್ದುದರಿಂದಲೇ ಮಲ್ಲಿನಾಥನಿಗೆ ಕವಿಯ ಅಂತರಂಗ ಅರಿಯುವ ಸಾಮರ್ಥ್ಯ ಪ್ರಾಪ್ತವಾಗಿತ್ತು. ರಘುವಂಶದ ೩ ನೇ ಸರ್ಗದ ೩೩ ನೇ ಶ್ಲೋಕದಲ್ಲಿ "ಅಥಾಸ್ಯ ಗೋದಾನ ವಿಧಿರನಂತರಂ" ಎಂಬ ಪದಪ್ರಯೋಗ ಬರುತ್ತದೆ. ಗೋ ಶಬ್ದಕ್ಕೆ ವೀಣಾ, ವಾಣಿ, ಬಿದಿರು, ಬಾಣ, ವಣಿಕ, ಸ್ವರ, ಶಬ್ದ, ಚಂದ್ರ, ಸೂರ್ಯ, ಪೃಥ್ವಿ, ಕಿರಣ ಸೋಮ ಹೀಗೆ ಅನೇಕ ಅರ್ಥಗಳಿವೆ. ಆದರೆ ಮಲ್ಲಿನಾಥನು ಇಲ್ಲಿ ಗೋ ಅಂದರೆ ಕೇಶ ಎಂದು ಅರ್ಥ ಮಾಡಿದ್ದಾನೆ. ಅಂದರೆ ವಿದ್ಯಾರ್ಥಿಯು ಗುರುಕುಲದಿಂದ ಮನೆಗೆ ಹಿಂತಿರುಗಿದ ನಂತರ ವಿದ್ಯಾರ್ಥಿ ಜೀವನ ಮುಕ್ತಾಯಗೊಳಿಸಿ ಸಾಂಸಾರಿಕ ಜೀವನ ಪ್ರವೇಶಿಸುವ ಕಾಲಕ್ಕೆ ಕೇಶಾಂತ ಸಂಸ್ಕಾರ ನಡೆಯುತ್ತಿತ್ತು. ಅದನ್ನು ಮಲ್ಲಿನಾಥನು ಉದಾಹರಿಸಿ ತನ್ನ ಪ್ರತಿಪಾದನೆಯನ್ನು ಸಮರ್ಥಿಸಿಕೊಂಡಿದ್ದಾನೆ ಅವರ ಪ್ರತಿಪಾದನೆ ಎಷ್ಟೊಂದು ಮನಂಬುಗುವಂತಿದೆ.

ಇದರಂತೆ ಆಶೀವಿಷ (ಹಲ್ಲುಗಳಲ್ಲಿ ವಿಷವಿದ್ದವರು), ಮಲಾಪಹಕ (ಪಾರೀಣಾಂ ಪಾತಕಃ), ಕ್ಷತ್ರ (ಕ್ಷತಾತ್ ತ್ರಾಯತೇ ಇತಿ) ಹೀಗೆ ಅನೇಕ ಶಬ್ದಗಳಿಗೆ ಮನೋಹರವಾಗಿ ಅರ್ಥ ಹೇಳಿದ್ದಾನೆ.

ಮಲ್ಲಿನಾಥನ ಟೀಕೆಗಳನ್ನು ಪರಿಶೀಲಿಸುವದರಿಂದ ಅನೇಕ ವಿಧದ ಚಾರಿತ್ರಿಕ ಭೌಗೋಲಿಕ ಜ್ಞಾನವೂ ಉಂಟಾಗುತ್ತದೆ. ನಿಚುಲ ಎಂಬ ಕವಿ ಕಾಲಿದಾಸನ ಪ್ರಾಣದ ಗೆಳೆಯನಾಗಿದ್ದ, ದಿಙ್ನಾಗನು ಕಾಲಿದಾಸನ ವಿರೋಧಿಯಾಗಿದ್ದ. ರಾಜಾಪ್ರದ್ಯೋತ, ರಂತಿದೇವ, ಉದಯನ ಮುಂತಾದವರ ಕಥೆಗಳನ್ನು ಆತ ತಿಳಿದಿದ್ದ ಎಂಬೆಲ್ಲ ವಿಷಯಗಳು ಗೊತ್ತಾಗುತ್ತವೆ.

ಭಾರತದ ಪರಿಚಯವನ್ನು ಕಾಲಿದಾಸನಷ್ಟೇ ಮಲ್ಲಿನಾಥನು ಹೊಂದಿದ್ದ. ರಘು ದಿಗ್ವಿಜಯವನ್ನು ಬಣ್ಣಿಸುವ ಕವಿ ಕಾಲಿದಾಸನು ಭಾರತದ ಒಂದೊಂದು ಅಂಗುಲ ಭೂಮಿಯ ಬಗ್ಗೆ ತನ್ನ ಪ್ರೇಮಾದರಗಳನ್ನು ವ್ಯಕ್ತಪಡಿಸಿದ್ದಾನೆ. ಮಲ್ಲಿನಾಥ ಕೂಡ ಕಾಲಿದಾಸನ ಹೆಜ್ಜೆಯಲ್ಲಿ ಹೆಜ್ಜೆ ಇಟ್ಟೇ ಸಾಗಿದ್ದಾನೆ. ರಘುವಿನ ಪಶ್ಚಿಮ ದಿಗ್ವಿಜಯ ಕಾಲಕ್ಕೆ ಕಾಲಿದಾಸನು ಅರಬ್ಬಿ ಕುದುರೆಗಳನ್ನು "ವನಾಯುದೇಶಾಃ" ಎಂದು ಕರೆದಿದ್ದಾನೆ. ಮಲ್ಲಿನಾಥನು ಹಲಾಯುಧನ ಆಧಾರ ಕೊಟ್ಟು 'ವನಾಯು ದೇಶ' ಎಂದರೆ ಅರಬ್ಬಿ (ಪಾರಸಿಕ) ದೇಶ ಎಂದು ಸಮರ್ಥಿಸಿ ಕಾಲಿದಾಸನನ್ನು ಎತ್ತಿ ಹಿಡಿದಿದ್ದಾನೆ.

'ಭಾರವೇರರ್ಥಗೌರವಂ' ಎಂಬ ಖ್ಯಾತಿ ಪಡೆದ ಭಾರವಿಯ "ಕಿರಾತಾರ್ಜುನೀಯ" ಕಾವ್ಯಕ್ಕೂ ಮಲ್ಲಿನಾಥ ಟೀಕೆ ಬರೆದಿದ್ದಾನೆ. ಭಾರವಿಯದು "ನಾರೀಕೇಲ ಫಲಸನ್ನಿಭಂ ವಚಃ" (ನಾರೀ ಕೇಳ ಪಾಕ) ಎಂದು ಮಲ್ಲಿನಾಥ ಬಣ್ಣಿಸಿದ್ದಾನೆ. ಟೆಂಗಿನ ಚಿಪ್ಪನ್ನು ಒಡೆದ ನಂತರವೇ ಒಳಗಿನ ಮಧುರಸಪಾನ ಸಾಧ್ಯ ಎಂಬಂತೆ ಭಾರವಿಯ ಕಾವ್ಯರಸಾಸ್ವಾದನೆ ಎಂದು ಹೇಳಬೇಕಾಗಿದೆ ಅವನಿಗೆ. ಮಾಘನ ಶಿಶುಪಾಲ ವಧಕ್ಕೂ ಮಲ್ಲಿನಾಥನ ಟೀಕೆ ಇದೆ.

ಅಲಂಕಾರ ಶಾಸ್ತ್ರದಲ್ಲಿಯೂ ಮಲ್ಲಿನಾಥ ಪಾರಂಗತ. ಆತ ಹೆಚ್ಚಾಗಿ ಅನುಸರಿಸುವುದು ವಿದ್ಯಾಧರನ 'ಏಕಾವಲಿ'ಯನ್ನು. ಈತನ 'ತರಲಾ' ಟೀಕೆ ವಿದ್ಯಾರ್ಥಿ ವಿದ್ವಾಂಸರಿಬ್ಬ

ರಿಗೂ ಸಮಾನ ಉಪಯುಕ್ತವಿದೆ, ತನ್ನ ಈ ಟೀಕೆಯಲ್ಲಿ ಸ್ವಸಮರ್ಥನೆಗಾಗಿ ಮಲ್ಲಿನಾಥನು ದಂಡಿ, ಮಮ್ಮಟ, ವಿದ್ಯಾಧರ, ರುಯ್ಯಕ ಮುಂತಾದ ಪ್ರಾಚೀನರನ್ನು ಎಳೆತರದೆ ಬಿಟ್ಟಿಲ್ಲ.

ಮೂಲ ಕವಿಯ ಅಭಿಪ್ರಾಯ ದೃಷ್ಟಿಕೋನಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು ಮತ್ತು ಅವನ್ನು ಪರಿಣಾಮಕಾರಿಯಾಗಿ ಪ್ರಸಿದ್ಧಿಸಬೇಕು ಎಂದು ಷಡ್‌ದರ್ಶನ ಟೀಕಾಕಾರ ವಾಚಸ್ಪತಿ ಮಿಶ್ರರು ಹೇಳುತ್ತಿದ್ದರು; ಮಲ್ಲಿನಾಥನ ಪದ್ಧತಿಯೂ ಇದೇ ಆಗಿದ್ದಿತು; ಪಕ್ಷಪಾತದಿಂದ ದುರೂಹ್ಯ ಶಾಸ್ತ್ರಾರ್ಥಗಳನ್ನು ಆತ ಪ್ರತಿಪಾದಿಸುತ್ತಿರಲಿಲ್ಲ ಅಲ್ಲದೆ ಮೂಲ ಕವಿಗಳನ್ನು ನಿಂದಿಸುತ್ತಲೂ ಇರಲಿಲ್ಲ. ಈತ 'ಧ್ವನಿ'ಕಾರರನ್ನು ಆದರಿಸುವವನಾಗಿದ್ದ; ಅಲ್ಲದೆ ಆತನು ಸ್ವತಃ ಶ್ರೇಷ್ಠ ಕವಿಯಾಗಿದ್ದ ಎಂಬುದು ಆತನ ರಘುವೀರಚರಿತ ಕಾವ್ಯದಿಂದ ಗೊತ್ತಾಗುತ್ತದೆ.

ಕಾವ್ಯವೆಂದರೆ ಚತುರ್ವರ್ಗ ಚಿಂತಾಮಣಿ ಎಂದು ಮಲ್ಲಿನಾಥನ ಪ್ರತಿಪಾದನೆ. ಕಟಾಕ್ಷ ವೀಕ್ಷಣ ಮಂದಹಾಸ ಮಧುರ ಭಾಷಣಗಳಿಂದ ರಮಣಿಯು ಪುರುಷನನ್ನು ಕಾರ್ಯೋನ್ಮುಖನನ್ನಾಗಿಸುವಂತೆ ಕಾವ್ಯವು ಶಬ್ದಾರ್ಥೋಭಯ ಶಕ್ತಿ ಮೂಲಾ ವ್ಯಂಜನಾ ವೃತ್ತಿಯಿಂದ ಸಹೃದಯರನ್ನು ಆಹ್ಲಾದಗೊಳಿಸಿ ಚಮತ್ಕಾರವನ್ನುಂಟುಮಾಡುತ್ತದೆ ಎಂದು ಮಲ್ಲಿನಾಥನ ಅಭಿಮತ. ಕವಿಯ ಶಬ್ದ ಎಂದರೆ ಸಾಣೆಗೆ ಹಿಡಿದ ವಜ್ರದಂತೆ ಪ್ರಕಾಶವಾಗಿರುತ್ತದೆ, ಹಾಗಿಲ್ಲದಿದ್ದರೆ ಅದು ಕಾವ್ಯವಲ್ಲ– ಕರ್ಣ ಕೋಲಾಹಲ ಮಾತ್ರವಾಗುತ್ತದೆ.

ಕಾವ್ಯಜ್ಞಾನದಷ್ಟೇ ಕಾವ್ಯ ಸಮೀಕ್ಷೆಯೂ ಅತ್ಯಾವಶ್ಯಕ ಎಂದೂ ಮಲ್ಲಿನಾಥನ ಅಭಿಪ್ರಾಯ, "ಕಾವ್ಯಂ ಕರ್ತುಂ ವಿದಂತಿ ಜಾನಂತಿ ತೇ ಕವಯಃ ಕಾವ್ಯಂ ವಿಂದತೇ ವಿಚಾರಯಂತಿ ತೇ ಕಾವ್ಯಪರೀಕ್ಷಕಾಃ" ಇದರಿಂದ ಕವಿಯು ಕಾರಯಿತ್ರಿ ಮತ್ತು ಭಾವಯಿತ್ರಿ ಪ್ರತಿಭೆಗಳ ಪರಿಚಯವಾಗುತ್ತದೆ. ಕವಿ ಕಲ್ಪನೆಗಳ ದಿವ್ಯ ದರ್ಶನಕ್ಕೆ ಕಾರಯಿತ್ರಿ ಪ್ರತಿಭೆ ಕಾರಣವಾದರೆ ಕವಿಯ ರುಚಿ ಪ್ರವೃತ್ತಿಗಳನ್ನು ಭಾವಯಿತ್ರೀ ಪ್ರತಿಭೆ ರೂಪಿಸುತ್ತದೆ. ಕಾವ್ಯವಿದರು ಎಂಬಲ್ಲಿಯ 'ವಿದ್' ಶಬ್ದದಲ್ಲಿ ಜ್ಞಾನ ವಿಚಾರಗಳೆರಡೂ ಅಡಕವಾಗಿರುತ್ತವೆಂದು ಮಲ್ಲಿನಾಥನ ನಂಬಿಕೆ.

ಕಾವ್ಯ ನಿರ್ಮಾಣದಷ್ಟೇ ಅದರ ಪರಿಶೀಲನವೂ ಅಗತ್ಯ ಎಂಬುದಾಗಿ ಮಲ್ಲಿನಾಥ ಹೇಳುತ್ತಾನೆ. ಕಾವ್ಯ ಪರಿಶೀಲನೆಯಿಂದ ಕವಿಯ ಕೃತಿಗೆ ಪರಿಪಕ್ವಾವಸ್ಥೆ ಉಂಟಾಗುತ್ತದೆ. ರಸೋಚಿತ ಪದಾರ್ಥ ಗುಂಫನದಲ್ಲಿ ಶ್ರವಣಸುಧಾ ನಿಸ್ಯಂದಿನಿ ಪದಾವಲಿ ಓತಪ್ರೋತವಾಗಿ ಕೂಡಿ ಬರುತ್ತದೆ. ರಸಾಸ್ವಾದಕ್ಕಾಗಿ ಉಚಿತ ಶಬ್ದ ನಿಷ್ಪತ್ತಿ ತಂತಾನೆ ಆಗುತ್ತದೆ. ಕಾಲಿದಾಸನ ಕಾವ್ಯಗಳಲ್ಲಿ ಇಂಥ ಪ್ರಸಾದಿಕ ರಮಣೀಯತೆ ಗುಣವನ್ನು ಯಥೇಚ್ಛವಾಗಿ ಕಾಣಬಹುದು. ಇದನ್ನೇ ಮಲ್ಲಿನಾಥನು 'ಮೈತ್ರೀಶಯ್ಯಾ' ಎಂದು ಕರೆದಿದ್ದಾನೆ.

ಮಾಘನ ಕಾವ್ಯವನ್ನು ಓದಿ ಕೃತಕೃತ್ಯನಾದೆ ಎಂದು ಹೇಳಿಕೊಂಡಿದ್ದಾನೆ ಮಲ್ಲಿನಾಥ ಕವಿ. ಸಂಸ್ಕೃತ ಮಹಾ ಕವಿಗಳ ಕಾವ್ಯಗಳಿಗೆ ಮಲ್ಲಿನಾಥನು ಬರೆದಿರುವ ಟೀಕೆಗಳನ್ನು ಓದಿ ಜನ ಮೂಲ ಕೃತಿಗಳ ರಸಾಸ್ವಾದ ಮಾಡಲು ಸಮರ್ಥರಾದರೆ ಮಲ್ಲಿನಾಥನು ಧನ್ಯನೆಂದೇ ಹೇಳಬೇಕು. ಇದರಲ್ಲಿ ಅಸ್ವಾಭಾವಿಕವಾದುದೇನೂ ಇಲ್ಲ. ✲

(ಕೃಪೆ: 'ನವನೀತ' ಹಿಂದೀ ಡೈಜೆಸ್ಟ್)



# ಸಸ್ಯ ಪ್ರಪಂಚದ ಕೆಲವು ಸೋಜಿಗಗಳು

ವಿಶಾಲ ಬ್ರಹ್ಮಾಂಡದಲ್ಲಿ ನಾವು 'ಇಂದು ಕಂಡು ತಿಳಿದಂತೆ ನಮ್ಮ ಭೂಮಿಯಲ್ಲಿ ಮಾತ್ರ ಜೀವಿಗಳಿವೆ; ಇದಕ್ಕಿಂತ ಹೆಚ್ಚಾಗಿ ವಿವಿಧ ಬಗೆಯ ಅನಂತವಾ ವೈವಿಧ್ಯದ ಜೀವಿಗಳಿವೆ. ಸಸ್ಯಗಳಿವೆ, ಪ್ರಾಣಿಗಳಿವೆ; ಸೂಕ್ಷ್ಮ ಜೀವಿಗಳಿವೆ ಸಸ್ಯ ಪ್ರಪಂಚದಲ್ಲೇ ಸಾಧಾರಣ ನಾಲ್ಕು ಲಕ್ಷಗಳಷ್ಟು ಜಾತಿಯ ಜೀವಿಗಳಿವೆಯಂತೆ. ಒಂದೊಂದು ಜಾತಿಗೂ ತನ್ನದೇ ವೈಶಿಷ್ಟ್ಯ. ಇಂತಹ ಸಸ್ಯ ಪ್ರಪಂಚದಲ್ಲಿ ಅದ್ಭುತವೆನಿಸಬಹುದಾದ ಕೆಲವು ವಿಷಯಗಳನ್ನು ಇಲ್ಲಿ ನಿರೂಪಿಸಿದ್ದೇನೆ.

## ಮುಪ್ಪಿಲ್ಲದ, ಸಾವಿಲ್ಲದ ಜೀವಿಗಳು :

ಹುಟ್ಟಿದ ಪ್ರತಿಯೊಂದು ಜೀವಿಗೂ ಮುಪ್ಪು ಸಾವು ತಪ್ಪಿದ್ದಲ್ಲ ಎಂದು ನಾವು ಹೇಳುವುದಿದೆ ಆದರೆ ಕೆಲವು ಬ್ಯಾಕ್ಟೀರಿಯಾ ಮುಪ್ಪು ಸಾವುಗಳೆರಡನ್ನೂ ಜಯಿಸಿ ಅಮರವಾಗಿವೆ. ಒಂದು ನಿರ್ದಿಷ್ಟ ಬೆಳವಣಿಗೆಯನ್ನು ಪಡೆದ ಕೂಡಲೇ ಒಂದು ಜೀವಿ ಒಡೆದು ಎರಡಾಗುವುದು. ಅವು ಬೆಳೆದು ಪ್ರಬುದ್ಧವಾದಾಗ ಒಡೆದು ನಾಲ್ಕಾಗುವುದು. ಇದು ಹೀಗೆಯೇ ಮುಂದುವರಿಯುವುದು. ವಾತಾವರಣದ ಪ್ರತಿಕೂಲ ಪರಿಸ್ಥಿತಿಯಿಂದ ಅವು ಸಾಯಬೇಕೇ ವಿನಾ ಇತರ ಜೀವಿಗಳಂತೆ ಇವಕ್ಕೆ ಮುಪ್ಪೂ ಇಲ್ಲ! ಸಾವೂ ಇಲ್ಲ.

## ಜೀವನ್ಮೃತ ಜೀವಿಗಳು :

ನೆಗಡಿ ಶೀತದಿಂದ ತೊಡಗಿ ಪೋಲಿಯೋ ಸಿಡುಬು, ಹುಚ್ಚು ನಾಯಿ ಕಡಿತ ರೋಗಗಳಿಗೆ ಕಾರಣವಾದ ವೈರಸ್‌ಗಳ ಹೆಸರನ್ನು ನೀವು ಕೇಳಿರಬಹುದು. ಇವುಗಳೇ ಜೀವನ್ಮೃತ ಜೀವಿಗಳು. ಜೀವಿಗಳಂತೆಯೂ ನಿರ್ಜೀವಿಗಳಂತೆಯೂ ಇವು ಇರಬಲ್ಲವು. ಬೇರೆ ಜೀವಿಯ ಜೀವಕೋಶ ಹೊಕ್ಕಾಗ ಇವು ಜೀವಿಗಳು. ಹೊರ ಬಂದಾಗ ನಿರ್ಜೀವಿಗಳು. ಜೀವ-ನಿರ್ಜೀವ ಜಗತ್ತಿಗೆ ಹಾಕಿದ ಸೇತುವೆ ಇವು. ಜಡಚೇತನಗಳ ಮಧ್ಯೆ ತೊಯ್ದಾಡುವ ಜೀವಿಗಳು. ಸೂಕ್ಷ್ಮದರ್ಶಕನ ಕಣ್ಣಿಗೂ ಸಿಗದಷ್ಟು ಸೂಕ್ಷ್ಮ. ಇಲೆಕ್ಟ್ರಾನ್ ಸೂಕ್ಷ್ಮ ದರ್ಶಕದಲ್ಲಿ ಒಂದು ಲಕ್ಷ ಪಾಲು ವಿಶಾಲಿಸಿದಲ್ಲಿ ಮಾತ್ರ ಇವನ್ನು ಕಾಣಬಹುದು

## ನೃತ್ಯ ಪ್ರದರ್ಶನ

ಕೊಳೆಯುತ್ತಿರುವ ವಸ್ತುಗಳಿಂದ ಒಂದು ಬಿಂದುವನ್ನು ತೆಗೆದುಕೊಂಡು ಸೂಕ್ಷ್ಮದರ್ಶಕದಲ್ಲಿ ನೋಡಿರಿ. ಅಣು ಜೀವಿಗಳ ಧರ್ಮಾರ್ಥವಾದ ನೃತ್ಯ ಪ್ರದರ್ಶನವನ್ನು ಕಂಡು ಆನಂದ ಪಡೆಯಿರಿ. ಬ್ಯಾಕ್ಟೀರಿಯಾ ಹಾಗೂ ಇತರ ಸೂಕ್ಷ್ಮ ಜೀವಿಗಳು ಬ್ರೌನಿಯನ್ ಚಲನೆಯನ್ನು ತೋರಿಸುವುವು ಇದುವೇ ಇವುಗಳ ನೃತ್ಯ.

## ನಿಮ್ಮ ದೇಹದೊಳಗೆ

ನೀವು ನಿಮ್ಮನ್ನು ಒಬ್ಬರೇ ಎಂದು ತಿಳಿದರೂ ನಿಮ್ಮ ದೇಹದೊಳಗೆ ನಿಮ್ಮಲ್ಲಿ ಒಂದಾಗಿ ನಿಮ್ಮನ್ನವಲಂಬಿಸಿರುವ ಸೂಕ್ಷ್ಮಾತಿ ಸೂಕ್ಷ್ಮ ಜೀವಿಗಳಿವೆ. ಒಂದು ನಿಮ್ಮ ಬಾಯಿಯ ಜೊಲ್ಲು ರಸದಲ್ಲಿ ಸಾವಿರಗಟ್ಟಲೆ ಬ್ಯಾಕ್ಟೀರಿಯಾ ಇವೆ. ನಿಮ್ಮ ಅನ್ನ ನಾಳದಲ್ಲಿ ಸಾಧಾರಣ ೨೦೦ ಜಾತಿಯ ಬ್ಯಾಕ್ಟೀರಿಯಾಗಳಿರಬಹುದು. ಇವುಗಳ ಸಂಖ್ಯೆ ಅಪಾರ. ನಮ್ಮ ನಿಮ್ಮ ಬಾಯಿ, ಹೊಟ್ಟೆ ಅವುಗಳ ಬೆಳವಣಿಗೆಗೆ ಯೋಗ್ಯವಾದ ಸ್ಥಾನ! ಹಾಗೆಯೇ ಒಂದು ಹಿಡಿ ತೋಟದ ಮಣ್ಣಿನಲ್ಲಿರುವ ಜೀವಿಗಳ ಸಂಖ್ಯೆಗಿಂತ ಒಂದು ಬಿಂದು ಕೊಳಚೆ ನೀರಿನಲ್ಲಿರುವ ಜೀವಿಗಳ ಸಂಖ್ಯೆ ಅತ್ಯಪಾರ!

## ಸಮುದ್ರದ ಹುಲ್ಲುಗಾವಲು :

ಸಮುದ್ರದ ಜೀವಿಗಳ ಪೈಕಿ ಡಯಾಟಮ್‌ಗಳೆಂಬ ಏಕಕಣ ಪಾಚಿ ಸಸ್ಯಗಳು ಅತ್ಯಂತ ಪ್ರಾಮುಖ್ಯವಾದುವು. ಸಸ್ಯ ಪ್ರಪಂಚದಲ್ಲಿ ತಯಾರಾಗುವ ಒಟ್ಟು ಆಹಾರದ ಪೈಕಿ ೮೦% ಇವುಗಳಿಂದಲೇ ನಡೆಯುವುದು. ನಾವು ಉಸಿರಾಡುವ ವಾಯುವಿನ ಹೆಚ್ಚಿನ ಆಮ್ಲಜನಕವೂ ಇವುಗಳಿಂದಲೇ ಬಂದದ್ದು ಎಂದರೆ ತಪ್ಪಿಲ್ಲ. ಒಂದು ಬಿಂದು ಸಮುದ್ರ ನೀರಿನಲ್ಲಿ ನಾಲ್ಕು ಕೋಟಿ ಡಯಾಟಮ್‌ಗಳಿರಬಹುದು. ಭೂಮಿಯ ¾ ಅಂಶ ಸಮುದ್ರವೆಂದ ಮೇಲೆ ಒಟ್ಟು ಡಯಾಟಮ್‌ಗಳ ಸಂಖ್ಯೆಯನ್ನು ಯೋಚಿಸಿ. ಸಮುದ್ರದಲ್ಲಿರುವ ವೈವಿಧ್ಯಮಯ ಪ್ರಾಣಿ ಪ್ರಪಂಚಕ್ಕೆ ಇವು ಆಹಾರ. ಆದಕ್ಕೇ ಡಯಾಟಮ್‌ಗಳನ್ನು ಸಮುದ್ರದ ಹುಲ್ಲು ಗಾವಲುಗಳು ಎನ್ನುವುದಿದೆ.

## ಸೃಷ್ಟಿಕರ್ತನ ಕಲಾಪ್ರಜ್ಞೆ :

ಹೆಂಗಸರ ಸೀರೆಗಳಿಗೆ, ಗಂಡಸರ ಶರ್ಟು ಗಳಿಗೆ, ಮೇಜು ಬಟ್ಟೆಗಳಿಗೆ, ಕಿಟಕಿ ಪರದೆಗಳಿಗೆ ಡಿಸೈನುಗಳಿಗಾಗಿ ಪರದಾಡಬೇಡಿ. ಸಸ್ಯ ಪ್ರಪಂಚಕ್ಕೆ ಬನ್ನಿ. ಸೃಷ್ಟಿಕರ್ತ ಒಬ್ಬ ಕಲಾಕಾರ. ಡಯಾಟಮ್ ಪಾಚಿಗಳ ಜೋರವೈಯಲ್ಲಿ ಸೃಷ್ಟಿಕರ್ತನ ಅಪಾರವಾದ ಕಲಾಕೌಶಲ್ಯವನ್ನು ಕಾಣಬಹುದು. ದೋಣಿಯಾಕಾರ, ಪೆಟ್ಟಿಗೆಯಾಕಾರ, ಶಂಕು, ಉಂಗುರ, ಕೋಳಿ ಮೊಟ್ಟೆ ಇಷ್ಟೇಕೆ ವಿಷ್ಣು ಚಕ್ರವನ್ನೇ ಹೋಲುವ ಆಕೃತಿಗಳೂ ಅಲಂಕಾರ ಶೃಂಗಾರಗಳೂ ಇವುಗಳಲ್ಲಿವೆ. ನಾಸ್ಟಾಕ್ ಎಂಬ ಪಾಚಿ ಒಂದು ಒಳ್ಳೆಯ ಮುತ್ತಿನ ಹಾರದಂತಿದೆ. ವಾಲ್ವಾಕ್ಸ್ ಎಂಬ ಪಾಚಿಯನ್ನು ಸೂಕ್ಷ್ಮದರ್ಶದಲ್ಲಿ ನೋಡಿದರೆ ಸೌಂದರ್ಯ ನಿಧಿಯನ್ನೇ ಕಾಣಬಹುದು. ಬ್ಯಾಟ್ರಕೊಸ್ಪರ್ಮ್ ಎಂಬ ಪಾಚಿ ಒಂದು ನೆಕ್ಲೇಸ್‌ನಂತಿದೆ. ಪೈನಸ್ ಎಂಬ ನಗ್ನ ಬೀಜ ಸಸ್ಯದ ಕಾಂಡದ ಅಡ್ಡಛೇದ ಬಟ್ಟೆಗಳಿಗೆ ಉತ್ತಮ ಡಿಸೈನುಗಳನ್ನು ಕೊಡಬಲ್ಲುವು.

## ರಾಕ್ಷಸೀ ಪ್ರತ್ಯುತ್ಪಾದಕರು :

ಸೂಕ್ಷ್ಮ ಜೀವಿಯನ್ನು ತೆಗೆದುಕೊಂಡು ಅನುಕೂಲ ವಾತಾವರಣ ಕಲ್ಪಿಸಿಕೊಟ್ಟರೆ ಒರೇ ೪೮ ಗಂಟೆಗಳ ಅವಧಿಯಲ್ಲಿ ಅವರ ಸಂಖ್ಯೆ ೪೯೦೦೦ ೦೦೦೦೦೦ ೦೦೦ ೦೦೦ ೦೦೦ ಗಳಷ್ಟು ಆಗಬಲ್ಲುದು. ಇದು ಹೀಗೇ ಮುಂದುವರಿದರೆ ಒಂದು ವಾರದಲ್ಲಿ ಉಂಟಾದ ಒಟ್ಟು ಬ್ಯಾಕ್ಟೀರಿಯಾದ ಭಾರ ಭೂಮಿಯ ಒಟ್ಟು ಭಾರಕ್ಕಿಂತಲೂ ಹೆಚ್ಚಾಗಬಹುದು! ಸಾಮಾನ್ಯವಾಗಿ ಎಲ್ಲೆಂದರಲ್ಲಿ ಬೆಳೆಯುವ ಅಣಬೆ ಇದೆಯಲ್ಲ. ಆ ಒಂದು ಅಣಬೆ ೧೮,೦೦೦, ೦೦೦,೦೦೦ ಬೀಜಾಣುಗಳನ್ನುತ್ಪಾದಿಸುವುದು. ಈ ಬೀಜಾಣುಗಳೆಲ್ಲ ಬದುಕಿ, ಬೆಳೆದು ಪುನಃ ಅಣಬೆಗಳನ್ನುಂಟು ಮಾಡಿ ಬೀಜಾಣುಗಳನ್ನುತ್ಪಾದಿಸಿ ಅವೂ ಬೆಳೆದು... ಹೀಗೆ ಇದು ಮುಂದುವರಿದರೆ ಕೆಲವೆ ದಿವಸಗಳಲ್ಲಿ ನಮ್ಮ ಭೂಮಿ ಅಣಬೆಗಳಿಂದಲೇ ತುಂಬಿ ಹೋಗಬಹುದು. ಆದರೆ ಪ್ರತಿಕೂಲ ವಾತಾವರಣ, ಜೀವಿಗಳೊಳಗಣ ಸ್ಪರ್ಧೆಯಿಂದ ಈ ಪರಿಸ್ಥಿತಿ ಎಂದೂ ಉಂಟಾಗುವುದಿಲ್ಲ. ಐದು ಸೆ. ಮೀ ಉದ್ದ ಬೆಳೆಯುವ ಚೆಂಡಿನಾಕಾರದ ಲೈಕೋಪರ್‌ಡಾನ್ ಎಂಬ ಇನ್ನೊಂದು ಶಿಲೀಂಧ್ರ ೭ ೦೦೦ ೦೦೦ ೦೦೦,೦೦೦ ಬೀಜಾಣುಗಳನ್ನುಂಟು ಮಾಡುವುದು. ಪಕ್ಷಿನೀಯಾ

ಎಂಬ ರೋಗಕಾರಕ ಶಿಲೀಂಧ್ರವೂ ಹೀಗೆಯೇ.

## ಡಯಾಟಂ ಅರ್ತ್‌ಗಳು :

ಮಿಲಿಯಗಟ್ಟಲೆ ವರ್ಷಗಳ ಮೊದಲು ಜೀವಿಸುತ್ತಿದ್ದ ಡಯಾಟಂ ಸೂಕ್ಷ್ಮ ಜೀವಿಗಳ ಕೋಶಭಿತ್ತಿಯು ಸಂಗ್ರಹಗೊಂಡು ಪರ್ವತಗಳು ನಿರ್ಮಾಣವಾಗಿವೆ. ಕ್ಯಾಲಿಫೋರ್ನಿಯಾದ ಲಾಂಪಕ್ ಎಂಬಲ್ಲಿ ೧೨ ಚದರ ಮೈಲು ವಿಶಾಲಕ್ಕೂ ೩೦೦೦ ಅಡಿ ಎತ್ತರಕ್ಕೂ ವ್ಯಾಪಿಸಿದ ಡಯಾಟಂ ಮೃತ್ತಿಕೆ ಇದೆ. ಒಂದು ಡಯಾಟಂವನ್ನು ನೋಡಬೇಕಾದರೆ ಸೂಕ್ಷ್ಮದರ್ಶಕಬೇಕು. ಡಯಾಟಂ ಮೃತ್ತಿಕೆಗಳ ನಿರ್ಮಾಣದಲ್ಲಿ ಎಷ್ಟು ಡಯಾಟಂಗಳು ಪಾಲುಗೊಂಡಿರಬಹುದೆಂದು ಯೋಚಿಸಿ.

## ಪಾಚಿಸಸ್ಯಗಳಲ್ಲೂ ಪ್ರಣಯ :

ಪ್ರಣಯವು ಪ್ರಾಣಿ ಪ್ರಪಂಚಕ್ಕಷ್ಟೇ ಸೀಮಿತವಲ್ಲ. ಸಸ್ಯ ಪ್ರಪಂಚದಲ್ಲೂ ಅಲ್ಲಲ್ಲಿ ಇದಕ್ಕೆ ಉದಾಹರಣೆಗಳಿವೆ. ಸ್ಪೈರೋಗೈರಾ, ಕಾಸ್ಮೇರಿಯಂ, ಜೈಗ್ನೀಮಾ ಮೊದಲಾದ ಕೊಳಚೆ ನೀರಿನ ಪಾಚಿಗಳಲ್ಲಿ ಗಂಡು ಹೆಣ್ಣು ಪಾಚಿ ಎಳೆಗಳು ಸಮಾನಾಂತರವಾಗಿ ನಿಂತು ಮ್ಯೂಸಿಲೇಜ್ ಎಂಬ ಅಂಟುದ್ರವದ ಹೊದಿಕೆ ಹಾಕಿಕೊಂಡು ಪ್ರತ್ಯುತ್ಪಾದನೆ ನಡೆಸುವವು. ಎಕ್ಟೋಕಾರ್ಪಸ್ ಎಂಬ ಸಮುದ್ರ ಪಾಚಿಯಲ್ಲಿ ಒಂದು ಹೆಣ್ಣು ಬೀಜಾಣುವನ್ನು ಅನೇಕ ಗಂಡು ಲಿಂಗಾಣುಗಳು ಸುತ್ತುವರಿಯುವವು, ಹೆಣ್ಣು ಬೀಜಾಣು ಒಂದು "ಇಂಟರ್‌ವ್ಯೂ" ವನ್ನೇ ನಡೆಸಿ ಒಂದು ಲಿಂಗಾಣುವನ್ನು ಆರಿಸಿಕೊಳ್ಳುವುದು, ತಿರಸ್ಕರಿಸಲ್ಪಟ್ಟ ಗಂಡು ಲಿಂಗಾಣುಗಳು ಬೇರೆ ಹೆಣ್ಣು ಲಿಂಗಾಣುಗಳ "ಇಂಟರ್‌ವ್ಯೂ"ನಲ್ಲಿ ಭಾಗವಹಿಸಲು ತೆರಳುವವು.

## ಸರ್ಗಾಸಂ ಸಮುದ್ರಗಳು :

ನಮ್ಮ ನೆಲದಲ್ಲಿ ಹೇಗೆ ದಟ್ಟವಾದ ಕಾಡುಗಳಿವೆಯೋ ಹಾಗೆಯೇ ಸಮುದ್ರದಲ್ಲೂ ಕಾಡುಗಳಿವೆ. ಇವು ಪಾಚಿಗಳ ಕಾಡುಗಳು. ಉದಾಹರಣೆಗೆ ಫ್ಲೋರಿಡಾ ಮತ್ತು ವೆಸ್ಟ್ ಇಂಡೀಸ್‌ನ ಪೂರ್ವಕ್ಕೆ ಸರ್ಗಾಸಂ ನಟನ್ಸ್ ಎಂಬ ಜಾತಿಯ ಸಮುದ್ರ ಕಳೆ ೨೫ ಸಾವಿರ ಚದರ ಮೈಲು ವಿಸ್ತಾರಕ್ಕೆ ವ್ಯಾಪಿಸಿ ಅರಣ್ಯವನ್ನು ಹೋಲುತ್ತದೆ. ೧೪೯೨ ರಲ್ಲಿ ಕೊಲಂಬಸ್ ಈ ಸಮುದ್ರವನ್ನು ಹಾದು ಬಂದನಂತೆ.

## ದೈತ್ಯ ಪುಷ್ಪ

ರೆಫ್ಲೆಸಿಯಾ ಅರ್ನೋಲ್ಡಿಯಾ ಎಂಬುದು ಸಸ್ಯಪ್ರಪಂಚದಲ್ಲಿ ಅತಿ ದೊಡ್ಡ ಹೂಗಳನ್ನು ಬಿಡುವ ಸಸ್ಯ ಜಾತಿ. ಅರಳಿದ ಹೂ ೯೦ ಸೆ. ಮೀ. ಗಿಂತಲೂ ಹೆಚ್ಚು ವ್ಯಾಸದಿಂದಿದ್ದು ಒಂದು ದೊಡ್ಡ ಹೆಡಿಗೆಯನ್ನು ಹೋಲುವುದು, ಒಂದು ಹೂ ಹತ್ತು ಕಿಲೋ ಭಾರವಾಗಿದೆ. ಈ ಹೂ ಎರಡು ಮೂರು ದಿವಸಗಳಲ್ಲಿ ಬಾಡಿಹೋಗುವುದು. ವಿಚಿತ್ರವೆಂದರೆ, ಈ ಸಸ್ಯಕ್ಕೆ ಕಾಂಡ, ಎಲೆ, ಬೇರುಗಳಿಲ್ಲ. ಆದರೆ ಹೂ ಮಾತ್ರ ಬಹಳ ದೊಡ್ಡದು. ಇಡಿಯ ಸಸ್ಯ ದೇಹ ಬಹಳ ಸೂಕ್ಷ್ಮವಾಗಿದ್ದು ಶಿಲೀಂಧ್ರ (Fungus) ದೇಹದಂತೆ ಕೆಲವೇ ಕೆಲವು ರೋಮತಂತುಗಳಂತಹ ಜೀವಕೋಶಗಳಿಂದ ಮಾಡಲ್ಪಟ್ಟಿದ್ದು ಇದು ಇತರ ಸಸ್ಯಗಳ ಬೇರುಗಳಿಂದ ಆಹಾರವನ್ನು ಕಬಳಿಸಿ ತಿನ್ನುವುದು.

## ಅಣೋರಣೀಯಾನ್

ಗಾತ್ರದಲ್ಲಿ ಸಸ್ಯಗಳನ್ನೂ ಪ್ರಾಣಿಗಳನ್ನೂ ಹೋಲಿಸಿದರೆ ಸಸ್ಯ ಪ್ರಪಂಚ ಎದ್ದು ನಿಲ್ಲುವುದು. ಒಂದು ಕಡೆಯಲ್ಲಿ ಸಾವಿರ ಪಾಲು ದೊಡ್ಡದು ಮಾಡಿ ನೋಡಿದರೂ ಒಂದು ಚುಕ್ಕೆಯಂತೆ ಕಾಣುವ ಬ್ಯಾಕ್ಟೀರಿಯಾ ಇವೆ. ಇನ್ನೊಂದು ಕಡೆಯಲ್ಲಿ ೪೦೦ ಅಡಿ ಎತ್ತರದ ಅನೇಕ ಟನ್‌ಗಳ ಭಾರದ ಭೇತಾಳ ವೃಕ್ಷಗಳಿವೆ. ಅಮೇರಿಕದಲ್ಲಿ ಬೆಳೆಯುವ ಸಿಕೋಯಾ ಎಂಬ ವೃಕ್ಷಗಳು ಗಗನಚುಂಬನಕ್ಕೆ ಹಂಬಲಿಗಳಾಗಿವೆ. ೪೦೦ ಅಡಿಗಳಿಗಿಂತಲೂ ಹೆಚ್ಚು ಎತ್ತರಕ್ಕೆ ಊರ್ಧ್ವಾಭಿಮುಖವಾಗಿ ಬೆಳೆಯುವ ಈ ವೃಕ್ಷಗಳು ಸಸ್ಯಪ್ರಪಂಚದ ಅದ್ಭುತಗಳೆನಿಸಿವೆ.

ಈ ವೃಕ್ಷಗಳ ಹತ್ತಿರ ಮನುಷ್ಯ ನಿಂತರೆ ತನ್ನ ಕಣ್ಣಿನ ನೋಟಕ್ಕೂ ನಿಲುಕದ ಭವ್ಯ ವೃಕ್ಷಗಳ ಮುಂದೆ ಅಲ್ಪ ಜೀವಿಗಳಂತೆ ಕಾಣುವನು. ಒಂದೊಂದು ಮರದ ಕಾಂಡದ ಅಗಲ ೪೦ ಅಡಿಗಳಷ್ಟಾಗಬಹುದು. ಮರದ ಕಾಂಡವನ್ನು ಕೊರೆದು ಮಾರ್ಗವನ್ನು ರಚಿಸಿದ್ದಾರೆ. ವೃಕ್ಷವಿನ್ನೂ ಜೀವಿಸುತ್ತಿರುವಾಗಲೇ ವಾಹನಗಳು ವೃಕ್ಷಗಳನ್ನು ಹಾದು ಹೊರ ಬರುತ್ತಿವೆ. ಇನ್ನೊಂದು ಸೋಜಿಗವೆಂದರೆ ಇಂತಹ ಕೆಲವು ವೃಕ್ಷಗಳ ಪ್ರಾಯ ಸಾಧಾರಣ ೩,೦೦೦ ವರ್ಷಗಳಾಗಬಹುದೆಂದು ಲೆಕ್ಕಹಾಕಿದ್ದಾರೆ. ಅರ್ಧಕ್ಕಿಂತಲೂ ಹೆಚ್ಚು ಕಲಿಯುಗವನ್ನೂ ಶತಶತಮಾನಗಳಿಂದ, ತಲೆತಲೆಮಾರುಗಳ ಮಾನವ ಜನಾಂಗಗಳ ಏರಿಳಿತಗಳನ್ನೂ ಕಂಡ ಮೂಕ ಸಾಕ್ಷಿಗಳಿವು. ಆದರೆ ಒಂದು ವಿಷಯವನ್ನು ಇಲ್ಲಿ ಹೇಳಬೇಕು. ಇಡಿಯ ವೃಕ್ಷ ೩,೦೦೦ ವರ್ಷಗಳ ಬಾಳು ಬಾಳಿದರೂ ವೃಕ್ಷದ ಯಾವ ಜೀವಕೋಶವೂ ಕೆಲವು ತಿಂಗಳುಗಳಿಗಿಂತ ಹೆಚ್ಚಿನ ಬಾಳನ್ನು ಬಾಳಿಲ್ಲ.

ಕೆಲವು ಸಸ್ಯಶಾಸ್ತ್ರಜ್ಞರ ಪ್ರಕಾರ ಸೆಕೋಯಾ ವೃಕ್ಷಗಳಿಗಿಂತಲೂ ದೈತ್ಯಾಕಾರದ ಸಸ್ಯಗಳು ಸಮುದ್ರದಲ್ಲಿವೆ. ಇವು ಮೇಕ್ರೋ-ಸಿಸ್ಟಿಸ್' ಎಂಬ ಪಾಚಿ ಸಸ್ಯಗಳು. ಇದು ೬೦೦ ಅಡಿ ಉದ್ದ ಬೆಳೆಯಬಲ್ಲುದಂತೆ. ಈ ಪಾಚಿಯ ಒಂದೊಂದು ಎಲೆಯಂತಹ ರಚನೆ ಸಾಧಾರಣ ಐದು ಟನ್ ಭಾರವಿದ್ದು ಒಂದು ತರಗತಿಯಷ್ಟು ವಿಶಾಲವಾಗಿದೆ. ಸಮುದ್ರಪ್ರಾಂತರಾಳದಲ್ಲಿ ವಿಶಾಲವಾಗಿ ವ್ಯಾಪಿಸಿ ಬೆಳೆಯುವ ಸಸ್ಯಗಳಿವು.

ಕಲಕತ್ತೆಯ ಸಸ್ಯೋದ್ಯಾನವೊಂದರಲ್ಲಿ ಒಂದು ಆಲದ ಮರವಿದೆ. ಇದಕ್ಕೆ ೧,೦೦೨ ಬೀಳಲು ಆಧಾರ ಬೇರುಗಳಿವೆ. ಈ ಮರವು ವ್ಯಾಪಿಸಿದ ಜಾಗದ ಪರಿಧಿ ೧,೩೨೮ ಅಡಿಗಳಾಗಿದ್ದು ಕೆಲವು ಎಕರೆಗಳ ಜಾಗಕ್ಕೆ ಹಾಕಿದ ವಿಶಾಲವಾದ ಪ್ರಾಕೃತಿಕ ಚಪ್ಪರದಂತಿದೆ. ಮರದ ಪ್ರಾಯ ಸಾಧಾರಣ ೨೦೦ ವರ್ಷ. ವೃಕ್ಷವನ್ನು ದೂರದಿಂದ ನೋಡಿದರೆ ಒಂದು ದಟ್ಟ ಅರಣ್ಯದಂತೆ ಕಾಣುವುದು. ಸನಿಹಕ್ಕೆ ಬಂದಾಗ ಈ ಕಾಡು ಒಂದೇ ವೃಕ್ಷದ ಅದ್ಭುತ ವಿಸ್ತಾರವೆಂದು ಗೊತ್ತಾಗುವುದು. ಇಂತಹದೇ ವೃಕ್ಷ ಕರ್ನಾಟಕದ ಬೆಂಗಳೂರಿನ ಹತ್ತಿರವೂ ಇದೆ.

ದಕ್ಷಿಣ ಆಫ್ರಿಕಾದ ಕಲಹಾರಿ ಮರುಭೂಮಿಯಲ್ಲಿ ಮಾತ್ರ ಬೆಳೆಯುವ, ಕೆಲವೇ ಸಸ್ಯಗಳಿಂದ ಪ್ರತಿನಿಧಿಸಲ್ಪಟ್ಟು ಪಳೆಯುಳಿಕೆಯಾಗಲು ಹವಣಿಸುತ್ತಿರುವ ಒಂದು ಸಸ್ಯ ವೆಲ್ವಿಶ್ಚಿಯಾ ಮಿರಾಬಿಲಸ್'. ಈ ಗಿಡಕ್ಕೆ ಎರಡೇ ಎರಡು ಲಾಡಿಯಂತಹ ಎಲೆಗಳಿವೆ. ಈ ಎಲೆಗಳು ಕನಿಷ್ಟ ಪಕ್ಷ ನೂರು ವರ್ಷಗಳ ಕಾಲ ಬಾಳುವುವು. ಈ ಗಿಡಗಳನ್ನು ಕಡಿಯುವುದು ಆದೇಶದಲ್ಲಿ ನಿಷೇಧಿಸಲ್ಪಟ್ಟಿದೆ.

## ಮಾಂಸಭಕ್ಷಕ ಸಸ್ಯಗಳು:

ಸಸ್ಯಗಳನ್ನು ಪ್ರಾಣಿಗಳು ತಿನ್ನುವ ವಿಷಯ ನಮಗೆಲ್ಲಾ ತಿಳಿದೇ ಇದೆ. ಆದರೆ ಸಸ್ಯಗಳು ಪ್ರಾಣಿಗಳನ್ನು ತಿನ್ನುತ್ತವೆ ಎಂದರೆ ಆಶ್ಚರ್ಯವಾಗಬಹುದು. ಆದರೆ ಇದು ಸತ್ಯ. ನೆಪೆಂಥಸ್', ಡಯೋನಿಯಾ, ಯುಟ್ರಿಕ್ಯುಲೇರಿಯಾ, ಡ್ರೊಸಿರಾ, ಆಲ್ಡ್ರೋವಾಂಡಾ ಮೊದಲಾದವುಗಳು ಕೀಟಗಳನ್ನು ಹಿಡಿದು ಜೀರ್ಣಿಸಿಕೊಳ್ಳಬಲ್ಲವು. ಕೀಟಗಳನ್ನು ಹಿಡಿಯಲು ಇವಕ್ಕೆ ವಿಶೇಷ ರಚನೆಗಳಿವೆ. ಕೆಲವು ಗೊಂಡಾರಣ್ಯದಲ್ಲಿ ಮನುಷ್ಯ ಭಕ್ಷಕ ಸಸ್ಯಗಳಿವೆ ಎಂದು ಕೆಲವು ಪತ್ರಿಕೆಗಳು ವರದಿ ಮಾಡುತ್ತವೆ. ಇದು ಮಾತ್ರ ಸತ್ಯಕ್ಕೆ ದೂರವಾದ ವಿಚಾರ. ✻



# ನಗೆಮಲ್ಲಿಗೆ

ನಮ್ಮ ತಂದೆಗೆ ಸುರಪುರದಿಂದ ದೇವ ದುರ್ಗಕ್ಕೆ ವರ್ಗವಾಗಿತ್ತು. ನಾವು ದೇವ ದುರ್ಗಕ್ಕೆ ಬಂದ ಮರುದಿನವೇ ನಾನು ಸ್ಕೂಲಿಗೆ ಹೋದೆ. ಸ್ಕೂಲಿಗೆ ಹೋದೊಡನೆ ಇತರ ವಿದ್ಯಾರ್ಥಿಗಳು "ನೀನು ಎಲ್ಲಿಂದ ಬಂದೆ? ನಿನ್ನ ಹೆಸರೇನು? ಎಂದು ಕೇಳ ತೊಡಗಿದರು. ಅವರಿಗೆ ನಾನು ನನ್ನ ಹೆಸರು ಸುಧೀಂದ್ರನೆಂದೂ, ನಾನು ಸುರಪುರದಿಂದ ಬಂದವನೆಂದೂ ತಿಳಿಸಿದೆ- ಹಾಗೂ ನಾನು ಇತರರ ಹೆಸರುಗಳನ್ನು ಕೇಳಿ ತಿಳಿದುಕೊಂಡೆ.

ಅಂದು ಮೊದಲನೇ ಪೀರಿಯಡ್ ಹಿಂದಿ ಇತ್ತು. ಗುರುಗಳು ಬಂದು "ಶ್ರವಣ-ಕುಮಾರ" ಎಂಬ ಪದ್ಯವನ್ನು ಹೇಳತೊಡಗಿದರು. ಅದರಲ್ಲಿ "ಸುರಪುರ" ಎಂಬ ಶಬ್ದ ಬಂದಿತು. ಆಗ ಒಬ್ಬ ವಿದ್ಯಾರ್ಥಿ ಎದ್ದು ನಿಂತು "ಸುರಪುರ ಅದರ ಅರ್ಥವೇನು ಸಾರ್" ಎಂದು ಕೇಳಿದ.

ಆಗ ಗುರುಗಳು "ಸುರಪುರ ಇದರ ಅರ್ಥ ಸ್ವರ್ಗ" ಎಂದು ಹೇಳಿದರು. ಆಗ ಎಲ್ಲ ವಿದ್ಯಾರ್ಥಿಗಳು (ನನ್ನನ್ನು ಬಿಟ್ಟು) ನಕ್ಕಿದ್ದೇ ನಕ್ಕಿದ್ದು.

ಅದಕ್ಕೆ ಗುರುಗಳು ಕಾರಣ ಕೇಳಲು, ಒಬ್ಬ ವಿದ್ಯಾರ್ಥಿ ಎದ್ದು ನಿಂತು, ನನ್ನ ಕಡೆಕ್ಕೆ ಮಾಡಿ, "ಇವನು ಸ್ವರ್ಗದಿಂದ ಬಂದಿದ್ದಾನೆ ಸಾರ್!" ಅಂದಾಗ ನಮ್ಮ ಗುರುಗಳು ನನ್ನ ಕಡೆ ತಿರುಗಿ "ನೀನು ಸುರಪುರದಿಂದ ಬಂದಿರುವಿಯೇನು?" ಎಂದು ಕೇಳಿದರು.

ನಾನು "ಹೂಂ" ಎಂದೆ.

ಗುರುಗಳೂ ನಕ್ಕರು. ನಾನೂ ನಕ್ಕೆ.

---ಸುಧೀಂದ್ರ ಕುಲಕರ್ಣಿ

*

ಇಲ್ಲಿನ ಸ್ಥಳೀಯ ಸಂಸ್ಥೆಯೊಂದು 'ತೊಗಲು ಗೊಂಬೆಯಾಟ'ವನ್ನು ಏರ್ಪಡಿಸಿದ್ದಿತು. ಕಥೆ-"ಬಭ್ರುವಾಹನ ಕಾಳಗ'' ಕಾರ್ಯಕ್ರಮವು ಚೆನ್ನಾಗಿದ್ದು, ನೆರೆದ ಜನವೆಲ್ಲಾ ನಿಶ್ಶಬ್ದವಾಗಿ ಕುಳಿತು, ನೋಡುತ್ತಿದ್ದರು. ಬೊಂಬೆಗಳ ಪರವಾಗಿ, ಸಂಭಾಷಣೆಯನ್ನು ತೆರೆಯ ಹಿಂದೆ ಒದಗಿಸುತ್ತಿದ್ದ ಕಲಾವಿದರೂ ಕೂಡ, ಉತ್ತಮ ಮಟ್ಟದಲ್ಲಿ, ಹಳೆಗನ್ನಡದಲ್ಲಿ ಬಹಳ ಚೆನ್ನಾಗಿ ಮಾತನಾಡುತ್ತಿದ್ದರು. ಆದರೂ, ಪಾಪ (ಕಾಲ ಮಹಿಮೆ!) ಶ್ರೀಕೃಷ್ಣನು ಅರ್ಜುನನಿಗೆ ಉಪದೇಶ ಮಾಡುವ ಸಂದರ್ಭ ಬಂದಾಗ, ಶ್ರೀಕೃಷ್ಣನ ಪರವಾಗಿ ಮಾತನಾಡುತ್ತಿದ್ದಾತ, ಅರ್ಜುನನನ್ನು ಕುರಿತು, "ಲೋ ಅರ್ಜುನ, ಇದು ನಿನ್ನ duty ಅಲ್ಲವೇನೋ?" ಎಂದು ಕೇಳಿದಾಗ ಮಾತ್ರ, ಪ್ರೇಕ್ಷಕರೆಲ್ಲಾ ನಗೆಯ ಕಡಲಿನಲ್ಲಿ ಮುಳುಗಿದರು!

— ಶ್ರೀಮತಿ ಸಿ. ಮಾಲಿನಿ ವಾಮನರಾವ್

*

೧ನೇ ತರಗತಿಯ ಮಕ್ಕಳಿಗೆ 'ಕನ್ನಡಿ' ಎಂಬ ವಿಷಯದ ಬಗ್ಗೆ ಪಾಠ ಮಾಡುತ್ತಾ ಮೇಷ್ಟ್ರು ಒಬ್ಬ ಹುಡುಗನನ್ನು ನಿಲ್ಲಿಸಿ ಕೇಳಿದರು- "ರಾಮು, ನೀನು ಮುಖ ತೊಳೆದ ಬಳಿಕ ಮುಖ ಶುಚಿಯಾಗಿದೆಯೋ ಇಲ್ಲವೋ ಎಂದು ನೋಡಲು ಏನು ಮಾಡುತ್ತೀ?" ರಾಮು ಕೂಡಲೇ ಉತ್ತರಿಸಿದ. "ಮುಖ ಒರೆಸಿದ ಟವೆಲನ್ನು ನೋಡುತ್ತೇನೆ."

*

ನಾಟಕ ವಿಮರ್ಶಕನೊಬ್ಬ ಬಾಲ ಕಲಾವಿದರ ಬಗ್ಗೆ ತಾತ್ಸಾರ ತಳೆದಿದ್ದ. ನಟನಾ-ಕೌಶಲ್ಯ ಅನೇಕ ವರ್ಷಗಳ ಅನುಭವದ ನಂತರವೇ ಬರುವುದೆಂದು ಅವನ ಭಾವನೆಯಾಗಿತ್ತು. ಒಮ್ಮೆ ಇನ್ನೊಬ್ಬ ವಿಮರ್ಶಕ ಅವನ ಅಭಿಪ್ರಾಯವನ್ನು ಅಲ್ಲಗಳೆಯುತ್ತಾ "ಮಕ್ಕಳಲ್ಲಿ ನೂರಕ್ಕೆ ತೊಂಬತ್ತರಷ್ಟು ಜನ ಸ್ವಾಭಾವಿಕವಾಗಿಯೇ ನಟನಾ ಕೌಶಲ್ಯವನ್ನು ಹೊಂದಿರುತ್ತಾರೆ" ಎಂದು ವಾದಿಸಿದ.

ಆತ:- "ಎಂತಹ ದುರಾದೃಷ್ಟ" "ಆ ಉಳಿದ ಹತ್ತರಷ್ಟು ಜನ ಮಾತ್ರವೇ ರಂಗದ ಮೇಲೆ ಬರುತ್ತಾರೆ!"

•

ಅಪ್ಪ-ಹಾಗಾದರೆ ನೀನು ಜೀವ ವಿಜ್ಞಾನದಲ್ಲಿ ಕ್ಲಾಸಿನಲ್ಲೇ ಮೊದಲನೆಯವ ಅಲ್ಲವೇ?

ಮಗ– ಹೌದಪ್ಪಾ. ಆನೆಗೆ ಎಷ್ಟು ಕಾಲು ಎಂದು ಗುರುಗಳು ಕೇಳಿದರು, ನಾನು ಐದು ಎಂದುತ್ತರಿಸಿದೆ!

ಅಪ್ಪ– ಅದು ಹೇಗಾದೀತು. ಆನೆಗೆ ನಾಲ್ಕು ಕಾಲು ಅಲ್ಲವೇ?

ಮಗ– ಹೌದು. ಆದರೆ ಎಲ್ಲರೂ ಆರು ಕಾಲು ಎಂದು ಹೇಳಿದರು!

—ತುಕಾರಾಮ ಜಿ. ಸೆಟ್ಟಿ

•

ದೃಷ್ಟಿ ದೋಷವಿದ್ದ ಒಬ್ಬ ಹೇಳುತ್ತಿದ್ದ. "ನಿನ್ನೆ ಹೆದರಿಕೆಯಿಂದ ಸತ್ತೇ ಹೋಗಿದ್ದೆ. ಕಾಡಿನಲ್ಲಿ ನಡೆದು ಹೋಗುತ್ತಿದ್ದೆ. ಆಗ ಹಾವೊಂದನ್ನು ನೋಡಿದೆ..."

ಈತ– "ಹೌದೇ? ಆಗ ನೀನೇನು ಮಾಡಿದೆ?"

ಆತ– ಅದರ ಹತ್ತಿರ ಹೋಗಿ ಅದನ್ನು ಬಗ್ಗಿ ನೋಡಿದೆ; ಅದು ಹಾವಾಗಿರದೆ ಕೋಲಾಗಿತ್ತು."

ಈತ– "ಹಾಗಿದ್ದರೆ ಏಕೆ ಹೆದರಿ ಕೊಂಡಿದ್ದೆ?"

"ಏಕೆಂದರೆ ಆ ಹಾವನ್ನು ಕೊಲ್ಲುವ ಎಂದು ಎತ್ತಿಕೊಂಡಿದ್ದ ಕೋಲು ಹಾವಾಗಿತ್ತು."

•

"ಹೆದರಿಕೋ ಬೇಡ ಮರಿ. ಡಾಕ್ಟರ್ ನಿನ್ನನ್ನು ಏನೂ ಮಾಡೋಲ್ಲ"

–ದಂತ ವೈದ್ಯನಲ್ಲಿಗೆ ಮಗನ ಹುಳುಕು ಹಲ್ಲು ಕೀಳಿಸಲು ಬಂದಿದ್ದ ತಾಯಿ ಪುಟ್ಟಣ್ಣಿಗೆ ಧೈರ್ಯದ ಮಾತಾಡಿದಳು.

"ಅವರು ಏನೂ ಮಾಡದಿದ್ದರೆ ನಾವು ಇಲ್ಲಿಗೇಕಮ್ಮ ಬಂದ್ವಿ?"

–ಪುಟ್ಟಣ್ಣಿ ತನ್ನ ತಾಯಿಯನ್ನು ಪ್ರಶ್ನಿಸಿದ.

—ಎಸ್. ವಿಶ್ವನಾಥ

•

ಮ್ಯಾಜಿಸ್ಟ್ರೇಟ್: "ನಿನಗೆ ಮೂರು ತಿಂಗಳ ಕಠಿಣ ಸಜೆಯನ್ನು ವಿಧಿಸಲಾಗಿದೆ."

ಅಪರಾಧಿ: "ತುಂಬಾ ಸಂತೋಷ. ಸದ್ಯ ಇಬ್ಬರು ಹೆಂಡತಿಯರ ಗಂಡನಾಗುವ ಶಿಕ್ಷೆ ವಿಧಿಸಲಿಲ್ಲವಲ್ಲ."

ಮ್ಯಾಜಿಸ್ಟ್ರೇಟ್: "ಅದೇಕೆ!"

ಅಪರಾಧಿ: "ನೋಡಿ ಎಲ್ಲರೂ ಮಲಗಿದ್ದಾರೆಂದು ತಿಳಿದು ನಾನು ಸೋಮಪ್ಪನವರ ಮನೆಗೆ ಕಳ್ಳತನಕ್ಕೆಂದು ನುಗ್ಗಿದೆ. ಸೋಮಪ್ಪನವರಿಗೆ ಇಬ್ಬರು ಹೆಂಡತಿಯರು ಅಂತ ಕಾಣುತ್ತೆ. ಸೋಮಪ್ಪನವರನ್ನು ಒಬ್ಬಳು ತನ್ನ ಕೋಣೆಗೆ ಬಾ ಎಂದು ಎಳೆಯುತ್ತಿದ್ದರೆ, ಇನ್ನೊಬ್ಬಳು ನನ್ನ ಕೋಣೆಗೆ ಬಾ ಎಂದು ಎಳೆಯುತ್ತಿದ್ದಳು ಆಗ ಸೋಮಪ್ಪನವರ ಗೋಳಾಟವನ್ನು ನೋಡಲಾರದೆ ನಾನು ಬಂದಿರುವ ಕೆಲಸವನ್ನು ಮರೆತು ಜೋರಾಗಿ ನಕ್ಕು ಬಿಟ್ಟದ್ದರಿಂದ ಸಿಕ್ಕಿ ಬಿದ್ದೆ. ಆದರೆ ಇಂತಹ ಶಿಕ್ಷೆ ನನ್ನ ಶತ್ರುಗಳಿಗೂ ಬೇಡ."

•

ನವದಂಪತಿಗಳಿಬ್ಬರು ಮೃಗಾಲಯವನ್ನು ನೋಡಿ ನಗುನಗುತ್ತಾ ಮಾತನಾಡಿಕೊಂಡು ಬರುತ್ತಿದ್ದಾಗ ಗಂಡ ಹೇಳಿದ: "ಡಾರ್ಲಿಂಗ್ ಗೋರಿಲ್ಲಾಗೆ ತಿಂಡಿ ತೋರಿಸಿ ಕೊಡದೆ ಸತಾಯಿಸಿದಾಗ ಹೇಗೆ ಹಲ್ಲು ಕಿರಿದಿತ್ತು ನೋಡಿದೆಯಾ"

ಹೆಂಡತಿ: "ಅದೇನು ಮಹಾ ಬಿಡಿ ಡಿಯರ್. ನಮ್ಮ ಮೊದಲ ರಾತ್ರಿಯಂದು ನೀವು ಅದಕ್ಕಿಂತಲೂ ಹೆಚ್ಚಾಗಿ ಹಲ್ಲು ಬಿಟ್ಟಿದ್ದಿರಿ."

— ಎಸ್. ಎ. ಜಂಗಾವಿ

•

ನಮ್ಮ ಬೆಕ್ಕಿನ ಜೊತೆ ಇನ್ನೊಂದು ಬೆಕ್ಕು ಸೇರಿಕೊಂಡು ಎರಡೂ ಕೂಗಾಡಲಾರಂಭಿಸಿದವು. ನಾನು ಜಗಳ ಮಾಡುತ್ತಿರಬಹುದೆಂದು ಊಹಿಸಿದೆ. ಆದರೆ ಅಲ್ಲಿಯೇ ನಿಂತು ನೋಡುತ್ತಿದ್ದ ನನ್ನ ಏಳು ವರ್ಷದ ತಂಗಿ ಹೇಳಿದಳು. ಅದು 'ಜಗಳವಲ್ಲ, ಪ್ರೇಮದ ಆಟ' ಎಂದು. ನಾನು ತಕ್ಷಣ ಪ್ರಶ್ನಿಸಿದೆ "ಏನಮ್ಮ ನಮ್ಮ ಬೆಕ್ಕು ಹೆಣ್ಣೋ–ಗಂಡೋ" ಎಂದು.

ನನ್ನ ತಂಗಿ ಚುರುಕಾಗಿ ಉತ್ತರಿಸಿದಳು. "ನಮ್ಮ ಬೆಕ್ಕು ಮರಿ ಹಾಕಿಲ್ಲ. ಆದ್ದರಿಂದ ಗಂಡು."

—ಟಿ. ಎಸ್. ದಕ್ಷಿಣಾಮೂರ್ತಿ

# ವೈದ್ಯಕೀಯ ವರದಿಗಳು

## ಉಪವಾಸ ಯಾವಾಗ?

ಆರೋಗ್ಯಕ್ಕೆ ಉಪವಾಸವೂ ಒಂದು ಉಪಾಯವಾದರೂ ಡಾಕ್ಟರರ ಸಲಹೆ ಇಲ್ಲದೆ ಇದನ್ನು ಕೈಕೊಳ್ಳಬಾರದು.

ಉಪವಾಸ ಮಾಡಲಿಕ್ಕೆ ಎರಡು ಕಾರಣಗಳಿವೆ. ೧) ಶರೀರದಲ್ಲಿ ಕರಳು, ಮೂತ್ರ ಪಿಂಡ ಮತ್ತು ತ್ವಚೆಯ ಮೂಲಕ ಸಂಗ್ರಹಿತವಾದ ವಿಷವನ್ನು ಹೊರಹಾಕಲಿಕ್ಕೆ.

೨) ವಿಷವಿರಹಿತವಾದ ಶರೀರವನ್ನು ಯೋಗ್ಯ ಬಗೆಯಲ್ಲಿ ಬೆಳೆಯಿಸಲಿಕ್ಕೆ.

ಸಾಕಷ್ಟು ಆಹಾರ ಸಿಗದೆಂಬ ಕೂಗು ಎಷ್ಟೇ ನಿಜವಾದರೂ ನಾವು ಅವಶ್ಯಕ್ಕಿಂತ ಹೆಚ್ಚು ಸೇವಿಸುತ್ತೇವೆಂಬುದು ಸುಳ್ಳಲ್ಲ. ಹಸಿವು ಸ್ವಾಭಾವಿಕ. ಆದರೆ ನಾಲಿಗೆ ರುಚಿ ಅಲ್ಲ. ಕೆಡಿಸಿದ ಅನ್ನ ಹೆಚ್ಚು ತಿನ್ನುವುದೂ ಶರೀರಕ್ಕೆ ಒಳಿತಲ್ಲ. ಅಂದಾಗ ಬರೀ ಪ್ರೋಟೀನ್ ಮತ್ತು ವಿಟಾಮಿನ್‌ಗಳನ್ನು ಪ್ರಮಾಣಬದ್ಧವಾಗಿ ಸೇವಿಸುವುದು ಒಳಿತೇ ಎನ್ನಬಹುದು. ಅದರಿಂದ ಊಟಕ್ಕೆ ಉಪ್ಪಿನಕಾಯಿಯ ರುಚಿ ಇಲ್ಲದಾಗುತ್ತದೆ! ಆದರೆ ನಾಲಿಗೆ ರುಚಿಗಾಗಿ ಉಣ್ಣುವುದೂ ಹಿತಕರವಲ್ಲ. ನೀವು ಮಾಂಸವನ್ನೇ ತಿನ್ನಬೇಕೆಂದಿಲ್ಲ ಅಥವಾ ಶಾಕಾಹಾರವೊಂದೇ ಯೋಗ್ಯವೆಂದಲ್ಲ. ಸೇರುವುದನ್ನು ಸೇವಿಸಿ. ಆದರೆ ಅವಶ್ಯವೆನಿಸಿದಾಗ ಮಾತ್ರ ಸೇವಿಸಿರಿ. ರುಚಿ ಎಂದು ಗಂಟಲಿಗೆ ತುರುಕಿದರೆ ಕಡಬನ್ನೂ ಕಾರುವಿರಿ. ನಿಮ್ಮ ಶರೀರದ ಗಾತ್ರ ಹೆಚ್ಚುತ್ತಿದೆಯೆ? ಹಾಗಾದರೆ ಆಗಾಗ 'ಏಕಾದಶಿ' ಅಕ್ಷರಶಃ ನಿರ್ಜಲ ಮಾಡಿರಿ. ಆರೋಗ್ಯದಲ್ಲಿ ಆಸಕ್ತಿ ಇದ್ದರೆ ದಿನಕ್ಕೊಂದೇ ಮುಖ್ಯ ಭೋಜನವಿರಲಿ. ಬೆಳಿಗ್ಗೆ ಎದ್ದಾಗ ಖಾಲಿ ಹೊಟ್ಟೆಯನ್ನು ಪೂರ್ತಿ ತುಂಬದೆ ಉಳಿಯುವುದು ನಿಮ್ಮ ಜಾಯಮಾನಕ್ಕೆ ಒಗ್ಗುವುದಿಲ್ಲ ಎನ್ನುತ್ತೀರಾ? ಹಾಗಿದ್ದರೆ ಮತ್ತೆ ನಾಲ್ಕು ತಾಸಿನಲ್ಲೇ 'ಫುಲ್ ಊಟ' ಹೊಡೆಯಬೇಡಿರಿ. "ಖುರ್ಚಿಯಲ್ಲಿ ಕುಳಿತು ಮಾಡುವಂತಹ ನೌಕರಿಯಿದ್ದರಂತೂ ಬೇಡವೇ ಬೇಡ. ಸ್ವಲ್ಪ ತಿನ್ನಿ. ಸುಖವಾಗಿರಿ. ಉಪೋಷಣೆಗೈಯಿರಿ...ಯಥಾಯೋಗ್ಯರಾಗಿರಿ. ಬೇಸರ ತೋರಿ ಕಾರ್ಯಾಸಕ್ತಿ, ವ್ಯಾಯಾಮೇಚ್ಛೆ ಒಲ್ಲವು ಮಾಡಿಬರಲು ಇವು ಸಹಾಯಕ: ಶರೀರಕ್ಕೆ ಸ್ವಾಸ್ಥ್ಯ, ಮನಸ್ಸಿಗೆ ಸೌಖ್ಯ-ಬರುತ್ತದೆ. ಹೀಗೆ ಮಾಡಿದರೆ ನಿಮ್ಮನ್ನು ತಿದ್ದಲು ನಿಸರ್ಗಕ್ಕೆ ನೀವು ಒಂದು ಅವಕಾಶ ಕೊಟ್ಟಂತಾಗುತ್ತದೆ. ಹೃದಯಕ್ಕೂ ಒಂದಿಷ್ಟು ವಿಶ್ರಾಂತಿ ದೊರೆತು ಪುನರ್ವ್ಯವಸ್ಥೆ ಮಾಡಿಕೊಳ್ಳಲು ಅನುಕೂಲವಾಗುವುದು. ವಿಷರಹಿತ ಹೃದಯ ಉತ್ಸಾಹದ ಕಾರಂಜಿಯಾದೀತು. ಆಲಸ್ಯ, ಅನಾರೋಗ್ಯ, ಚಿಂತೆಗಳಿಂದ ಬಂಧಿತವಾದ ಜೀವನ ಬಿಡುಗಡೆಹೊಂದೀತು. ನಿಮ್ಮ ನರನಾಡಿಗಳಲ್ಲಿ ಚೈತನ್ಯ ಹರಿದಾಡಬಹುದು.

## ಟೂಥ್‌ಪೇಸ್ಟ್ ಅಗತ್ಯವೇ?

ಇಂದಿನ ಕಾಲದಲ್ಲಿ ಬೆಳಿಗ್ಗೆ ಎದ್ದ ಕೂಡಲೆ ಮುಖಮಾರ್ಜನ ವಿಧಿಯಲ್ಲಿ ಟೂಥ್‌ಬ್ರಶ್ ಹಾಗೂ ಟೂಥ್‌ಪೇಸ್ಟ್ ಅನಿವಾರ್ಯವಾದವು

ಗಳಾಗಿವೆ. ಚಿಕ್ಕವರಿಗೇ ಬೇರೆ, ದೊಡ್ಡವರಿಗೇ ಬೇರೆ; ಪುರುಷರಿಗೇ ಬೇರೆ. ಸ್ತ್ರೀಯರಿಗೆ ಬೇರೆ ಹೀಗೆ ಟೂಥ್ ಬ್ರಶ್‌ಗಳು ಹುಟ್ಟಿಕೊಂಡಿವೆ. ಅದೇ ರೀತಿ ಅನೇಕ ಪ್ರಕಾರದ ಟೂಥ್ ಪೇಸ್ಟ್‌ಗಳೂ ನಿತ್ಯ ತಯಾರಾಗುತ್ತಿವೆ. ಭಾರತದಂಥ ಬಡದೇಶದಲ್ಲಿ ಕೂಡ ಟೂಥಪೇಸ್ಟಿನ ಪ್ರಸಾರ ಗಣನೀಯ ಪ್ರಮಾಣದಲ್ಲಿ ಆಗಿಬಿಟ್ಟಿದೆ. ಭಾರತೀಯರ ಅನುಕರಣ ಶೀಲತೆಯ ಪರಿಣಾಮ ಇದು. ಆದರೆ ಆಗುವ ಲಾಭ ?

ಸುವಾಸನೆಯ ಸುರುಚಿಯ ಟೂಥ್ ಪೇಸ್ಟ್ ಮಕ್ಕಳನ್ನು ಆಕರ್ಷಿಸಿರುವುದರಲ್ಲಿ ಆಶ್ಚರ್ಯವೇನಿಲ್ಲ. ಅಲ್ಲದೆ ಪ್ರಚಂಡ ಜಾಹೀರಾತಿನ ಸೆಳೆತವೂ ಇದೆ. ಈ ಟೂಥ್‌ಪೇಸ್ಟಿನಲ್ಲಿ ಇರುವುದಾದರೂ ಏನು ?

ಹಲ್ಲುಗಳಿಗೆ ಹೊಳಪನ್ನುಂಟು ಮಾಡಲು ಖಡುವಿನ ಪುಡಿಯಂಥ ದ್ರವ್ಯ, ನೀರು, ಈ ಮಿಶ್ರಣ ಒಣಗದಂತಿಡುವುದಕ್ಕಾಗಿ ಮತ್ತೊಂದು ದ್ರವ್ಯ, ಬಣ್ಣ, ಸುಗಂಧ ದ್ರವ್ಯಗಳು ಇವೆಲ್ಲವನ್ನೂ ಮಿಶ್ರಣ ಮಾಡಿ ಆಕರ್ಷಕ ಟ್ಯೂಬುಗಳಲ್ಲಿ ಒದಗಿಸಿದಾಗ ಟೂಥ್‌ಪೇಸ್ಟ್ ಎಂಬ ಹೆಸರು ತಾಳುತ್ತದೆ. ಹಲ್ಲುಗಳನ್ನೂ, ವಸಡುಗಳನ್ನೂ ಸ್ವಚ್ಛಗೊಳಿಸುವುದೇ ಇದರ ಕಾರ್ಯ.

ವಸಡುಗಳು ಗಟ್ಟಿಯಾಗುತ್ತವೆ, ಹಲ್ಲುಗಳು ಕೆಡುವುದಿಲ್ಲ ಎಂದೆಲ್ಲ ಮಾಡುವ ಜಾಹೀರಾತಿನಲ್ಲಿ ಅಷ್ಟೊಂದು ಅರ್ಥವಿಲ್ಲ ಎಂದು ಹೇಳಬೇಕಾಗುತ್ತದೆ. ಟೂಥ್ ಪೇಸ್ಟಿನಲ್ಲಿ ಔಷಧಿ ಗುಣಗಳಿಲ್ಲ. ದಂತರೋಗಗಳನ್ನು ಅದು ತಡೆಯಲಾರದು ಎಂದು ಬ್ರಿಟಿಶ್ ಡೆಂಟಲ್ ಅಸೋಸಿಯೇಶನ್ನಿನವರು ತಮ್ಮದೊಂದು ವರದಿಯಲ್ಲಿ ಹೇಳಿದ್ದಾರೆ. ಅಲ್ಲದೆ ಟೂಥ್‌ಪೇಸ್ಟ್ ಬಗೆಗಿನ ಅತಿರಂಜಿತ ಜಾಹೀರಾತುಗಳಿಗೆ ಬಲಿ ಬೀಳದಿರಲೂ ಸೂಚಿಸಿದ್ದಾರೆ.

ಹಾಗೆ ನೋಡಿದರೆ ಭಾರತೀಯ ದಂತಧಾವನ ಪದ್ಧತಿಯೇ ಇದಕ್ಕೂ ಒಳ್ಳೆಯದೆನ್ನಬಹುದು. ಬತ್ತದ ಹೊಟ್ಟಿನಿಂದ ಅಥವಾ ಬೆರಣಿಯಿಂದ ತಯಾರಾಗುವ ಹಲ್ಲುಪುಡಿಗಳು ಹಲ್ಲುಗಳನ್ನು ಸ್ವಚ್ಛಗೊಳಿಸಲಿಕ್ಕೆ ಅವನ್ನು ನಿರೋಗಿಯಾಗಿಡುವುದಕ್ಕೆ ಸಹಾಯಕವಾಗಬಲ್ಲವು. ಅಲ್ಲದೆ ಕೆಲ ಆಯುರ್ವೇದ ಗಿಡಮೂಲಿಕೆಯಿಂದ ತಯಾರಿಸುವ ದಂತ ಚೂರ್ಣಗಳು ಇನ್ನಷ್ಟು ಪರಿಣಾಮಕಾರಿ. ಅವು ಪೇಟೆಯಲ್ಲಿ ದೊರೆಯುತ್ತವೆ... ಇವೆಲ್ಲಕ್ಕಿಂತ ತೀರ ಸಾದಾ ಉಪಾಯವೆಂದರೆ ಬೇವಿನಕಡ್ಡಿ ಮಾವಿನಕಡ್ಡಿ ಹುಣಸೇ ಕಡ್ಡಿಗಳನ್ನು ತೆಗೆದುಕೊಂಡು ಅವನ್ನು ಜಜ್ಜಿ ಬ್ರಶ್ಶಿನಂತೆ ಮಾಡಿ ಅವುಗಳಿಂದ ಹಲ್ಲುಜ್ಜುವುದು ಅಧಿಕ ಗುಣಕಾರಿ. ಈ ಮೇಲಿನವುಗಳಲ್ಲಿ ಯಾವ ಕಡ್ಡಿಯೂ ಆಗಬಹುದು. ಕಬ್ಬನ್ನು ಜಗಿದು ತಿನ್ನುವುದು ಕೂಡ ಹಲ್ಲುಗಳಿಗೆ ಆರೋಗ್ಯದಾಯಕ ಎಂದೂ ಸಿದ್ಧವಾಗಿದೆ. ಇಷ್ಟೆಲ್ಲ ಅನುಕೂಲತೆಗಳು ನಮಗೆ ಇರುವಾಗ ಟೂಥಪೇಸ್ಟಿನ ಅಗತ್ಯ ಇದೆಯೇ ಎಂದು ಆಲೋಚಿಸಬೇಕಾದುದು ಕರ್ತವ್ಯವೇ ಅಲ್ಲವೇ ? ✡



ಅಧಿಕಾರಿ (ಲೇಟಾಗಿ ಕಛೇರಿಗೆ ಬಂದ ಸಬಾರ್ಡಿನೇಟ್‌ಗೆ ಸಿಟ್ಟಿನಿಂದ) :
"ಒಂಬತ್ತು ಗಂಟೆಗೆ ನೀನಿಲ್ಲಿರಬೇಕಾಗಿತ್ತಲ್ಲಯ್ಯ." ಎಂದು ಕಿರುಚಿದ.
ಲೇಟಾಗಿ ಬಂದ ಸಬಾರ್ಡಿನೇಟ್ (ಅಮಾಯಕ ದನಿಯಿಂದ) :
"ಯಾಕ್ ಸಾರ್ ? ಏನಾಯಿತು ? !" ಎಂದು, ಅಚ್ಚರಿಗೊಂಡವನಂತೆ ಪ್ರಶ್ನಿಸಿದ.

—ಎಸ್. ವಿಶ್ವನಾಥ.

# ಸೆಕೆಂಡ್ ಹ್ಯಾಂಡ್

ಎನ್. ಎಸ್. ಚಿದಂಬರರಾವ

ದೊಡ್ಡದೊಂದು ತೋಳ ತನ್ನ ಬಾಯಿಯನ್ನಗಲಿಸಿ, ಕ್ರೂರವಾದ ಕಣ್ಣುಗಳಿಂದ ನನ್ನನ್ನೇ ನೋಡುತ್ತಾ, ಯಾವ ಗಳಿಗೆಯಲ್ಲಾದರೂ ಸರಿ ನನ್ನನ್ನು ನುಂಗಿ ನೀರುಕುಡಿಯಲು ಹವಣಿಸುತ್ತಿರುವಂತೆ, ಭೂತಾಕಾರ ತಳೆದು ನಿಂತಿತ್ತು. "ರೀ ಮಿಸ್ಟರ್, ಏನ್ರಿ ಅದು ತೂಕಡಿಸುತ್ತಾ ಇದೀರಿ? ನಾಚಿಕೆ ಆಗೋಲ್ವೆ ನಿಮ್ಗೆ? ಇನ್ನೂ ಎಳೇ ಮಗೂ ಅಂತ ತಿಳಿದಿದ್ದೀರಾ?" ಎನ್ನುವ ಪ್ರೊಫೆಸರರ ಹೀಗಳೆಯುವ ಮಾತುಗಳಿಗೂ ನನ್ನಲ್ಲಿ ಪ್ರತಿಕ್ರಿಯೆ ಶೂನ್ಯವಾದಾಗ, ನನ್ನಲ್ಲಿದ್ದ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಮೇಲೆದ್ದು ನಿಂತು "ಎಕ್ಸ್‌-ಕ್ಯೂಸ್‌ಮಿ ಸರ್– ನನ್ನ ಹೆಲ್ತ್, ಇವತ್ತು ಯಾಕೋ ಸರಿಯಿಲ್ಲ" ಎನ್ನುತ್ತಾ, ಅವರ ಅನುಮತಿಗೂ ಸಹ ಕಾಯದೆ ಕಾಲೆಳೆದುಕೊಂಡು ಹೊರಬಂದಾಗ ಉಳಿದವರೆಲ್ಲ ನನ್ನತ್ತ ಒಂದು ವಿಧವಾಗಿ ನೋಡಿದರೆನ್ನಿಸಿ "ನೋಡಿದರೆ ನೋಡಿದರೇ..." ಎಂಬ ಭಂಡವಾಕ್ಯವನ್ನೇ ಬಂಡವಾಳವನ್ನಾಗಿಟ್ಟುಕೊಂಡು ನೇರ ರಸ್ತೆಗಿಳಿದೆ.

ರಸ್ತೆ ತಾನೇ! ಎರಡು ಕಡೆಗೂ ಮೈಚಾಚಿ ಸೋಮಾರಿಯಂತೆ ಮಲಗಿರುವುದೇ ಅದರ ಸ್ವಭಾವ! ಎಡಕ್ಕೆ ಹೋಗಲೀ, ಬಲಕ್ಕೆ ತಿರುಗಲೀ ಎಂಬ ಜಿಜ್ಞಾಸೆಗಿಷ್ಟು ಬೆಂಕಿಹಾಕ...ನನಗೆ ಎಡಬಲವೇನು–ಎಲ್ಲ ಒಂದೇ ತಾನೇ! ಯಾವ ದಿಕ್ಕಿನಲ್ಲಿಯೂ ಅಲ್ಲಾಉದ್ದೀನನ ಅದ್ಭುತ ದೀಪವಿಲ್ಲವಲ್ಲ! ಇರಬಹುದು. ಈ ಎದುರಿಗೆ ಬಾಯ್ತೆರೆದು ನಿಂತಿರುವ ತೋಳನಂತಹುದನ್ನು ಅಟ್ಟುವುದು ಹೇಗೆ? ಹೆಜ್ಜೆಗಳು ತೀರ ಸಡಿಲಬೀಳುತ್ತಿವೆ ... ಗಂಟಲು ಒಣಗಿದಂತಾಗುತ್ತಿದೆ...ಒಂದು ಲೋಟ ನೀರನ್ನಾದರೂ ಕುಡಿಯೋಣವೆನ್ನಿಸಿ– ಎದುರಿಗೇ ಕಾಣುತ್ತಿದ್ದ ಮೆಜೆಸ್ಟಿಕ್‌ನಲ್ಲಿ ನುಗ್ಗಿ, ಕುರ್ಚಿಯನ್ನು ಆಕ್ರಮಿಸಲು ಧೈರ್ಯ ಸಾಲದೇ, ನೇರವಾಗಿ ಪೆನ್ಸಿಲ್ ಕಿವಿಗೆ ಸಿಕ್ಕಿಸಿದವನ ಬಳಿ ಹೋಗಿ ಅತಿ ವಿನಯದಿಂದ ಧೂರ್ತನಾಗಿ, ಆರ್ತನಾಗಿ "ಒಂದು ಲೋಟ ನೀರು ಕೊಡಪ್ಪಾ" ಎಂದು ಹಲುಬಿದಾಗ "ತಿಂಡಿ, ಕಾಫಿ ಏನೂ ತೆಗೆದುಕೊಳ್ಳೋ ಇರೋರಿಗೆಲ್ಲ ನೀರು ಇಲ್ಲಿ ಸಿಗೋದಿಲ್ರೀ..." ಎಂಬ ಮಾತು ನನ್ನ ಮುಖಕ್ಕೆ ಕರ್ಪೂರದಾರತಿ ಎತ್ತಿದಾಗ ನನ್ನ ಕೆಟ್ಟ ನಸೀಬನ್ನು ಹಳಿಯುತ್ತಾ, ಮೆಟ್ಟಿಲುಗಳನ್ನಿಳಿಯುವಾಗ, ಗಲ್ಲಾ ಪೆಟ್ಟಿಗೆಯ ಮುಂದಿದ್ದ ಭಾರೀ ಆಸಾಮಿ–"ರೀ...ಬನ್ರೀ ಇಲ್ಲಿ...ಬಿಲ್ ಹಣ ಕೊಡದೇ ಹೋಗ್ತೀರಲ್ರಿ ... ನೀವು ನೋಡಿದ್ರೆ ಓದಿದೋರ ಹಾಗೆ ಕಾಣ್ತೀರಿ..." ಎಂದು ಆರಂಭಿಸಿದಾಗ ಅದೇ ಪೆನ್ಸಿಲ್ ಕಿವಿಯಾತ, ಓಡಿಬಂದು "ಇಲ್ಲ ಸಾಮ್ಯಾರ್ರೆ, ಅವರು ಬರೀ ನೀರು ಕೇಳೋಕೆ ಬಂದಿದ್ರು...ನಾನು ಕೊಡಲ್ಲ ಅಂದೆ... ಹೋಗ್ತಾ ಇದಾರೆ ಅಷ್ಟೆ?" ಎಂದು ವಿವರಿಸಿದ.

ಛೆ! ಇದಂತೂ ತೀರ ಅವಮಾನ! ಹೋಗಲಿ,

ಆ ಸಾಹುಕಾರ ಆ ಹುಡುಗನಿಗೆ ನನಗೆ ನೀರು ಕೊಡುವಂತೆ ಆಜ್ಞಾಪಿಸಬಹುದೆಂಬ ನನ್ನ ನಿರೀಕ್ಷೆಯೂ ನೆರವೇರಬಾರದೆ? ಹಾಗಾದರೆ ಈಗ ಮುಂದೆ ಸಾಗುವುದೆಲ್ಲಿಗೆ? ಶೇಷಗಿರಿ ರಾಯರ ಮನೆಗೆ ಹೋಗುವುದೆ? ಆದರೆ...ಇದು ಅವರ ಮನೆಗೆ ಹೋಗುವ ಸಮಯವೂ ಅಲ್ಲ... ಮಕ್ಕಳೆಲ್ಲ ಶಾಲೆಗೆ ಹೋಗಿರುತ್ತಾರೆ. ರಾಯರು ಕೋರ್ಟಿಗೆ...ಕಮಲಮ್ಮ, ನಾಗಮಣಿ, ಪುಷ್ಪ ಎಲ್ಲರೂ ಊಟ ಮಾಡಿ ವಿಶ್ರಾಂತಿ ತೆಗೆದು ಕೊಳ್ಳುತ್ತಿರುತ್ತಾರೆ...ಆ ಮನೆಗೆ ನಾನೀಗ ಹೋಗುವುದು ಹೇಗೆ? ನೀರಂತೂ ಖಂಡಿತ ಸಿಕ್ಕಬಹುದು...ಮಕ್ಕಳಿಗೆ ಪಾಠ ಹೇಳುವ ಬಗ್ಗೆ ಅವರಿಂದ ಕಳೆದ ವಾರ ಹಣ ಬಂದಿದೆ... ಮತ್ತೊಂದು ತಿಂಗಳ ಅಡ್ವಾನ್ಸ್ ಸಹ ಕೇಳಿ ತೆಗೆದುಕೊಂಡಿದ್ದೇನೆ ... ಪಾಠಕ್ಕೆ ಹೋದಾಗ ಲಂತೂ ಒಂದು ಕಪ್ ಕಾಫಿ ಅಯಾಚಿತವಾಗಿ ಸಿಕ್ಕುತ್ತದೆ...ಈಗ ಹೋದರೂ ಕಾಫಿ ಸಿಕ್ಕ ಬಹುದು ... ಅಷ್ಟಕ್ಕಾಗಿಯೇ ಹೋಗಲೆ ? ಥೂ...ನನ್ನಂತಹ ಭಂಡರು ಬದುಕಿರಬಾರದು. ಬೇಡ...ಬೇಡ. ಈ ಅವೇಳೆಯಲ್ಲಿ, ಬರೀ ಹೆಣ್ಣು ಮಕ್ಕಳಿರುವಾಗ ನಾನಲ್ಲಿಗೆ ಹೋಗುವುದೇ ಅನುಚಿತ.

ಮೇಲೆ ಬಿಸಿಲು ಚುರುಕಾಗಿದೆ... ಕೆಳಗೆ ಕಾಲು ಸುಡುತ್ತಿದೆ... ಎರಡನ್ನೂ ತಕ್ಕ ಮಟ್ಟಿಗೆ ಸಹಿಸಿಕೊಳ್ಳುವ ಶಕ್ತಿ ನನ್ನಿಂದ ತೊಲಗಿ ಪಾರವಾಗಿದೆ. ಬರೀ ಒಂದು ಲೋಟ ಕಾಫಿಯಿಂದಲೇ ನನ್ನೆಲ್ಲ ಚಟುವಟಿಕೆಗಳನ್ನು, ಬೆಳವಣಿಗೆಯನ್ನು, ಅಸ್ತಿತ್ವವನ್ನು ಜೀವಂತವಾಗಿಟ್ಟುಕೊಂಡಿರುವ ನನ್ನ ಸಾಧನೆಯ ಬಗ್ಗೆ ಯಾರಿಗೂ ಅನುಕಂಪವಿಲ್ಲ. ಇದೊಂದು ಸಾಧನೆ ಎಂಬ ಜ್ಞಾನವೂ ಅನೇಕರಿಗಿಲ್ಲ–ನನ್ನ ಹೆಜ್ಜೆ ಮಂದಗತಿಯಲ್ಲಿ ಸಾಗುತ್ತಿದೆ. ಅಸಹನೀಯವಾದ ಬಿಸಿಲಿನ ಬೇಗೆ ತಡೆಯಲಾರದೇ ಪಕ್ಕ-ದಲ್ಲಿದ್ದ ಪುರಭವನದ ಉದ್ಯಾನದಲ್ಲಿ ಹೆಜ್ಜೆ ಇಟ್ಟು, ಚನ್ನಕೇಸರೀಮರದ ಕೆಳಗೆ ಹಸಿರು ಹುಲ್ಲಿನ ಮೇಲೆ ಕೂರುತ್ತೇನೆ. ನನ್ನಂತೆಯೇ ಇನ್ನೂ ಹಲವಾರು ಜನ ಅಲ್ಲಲ್ಲಿ ಕುಳಿತಿದ್ದಾರೆ. ಕೆಲವರು ಮಲಗಿದ್ದಾರೆ..."ಸಾರ್..." ಎಂಬ ಕೂಗು ಬಂದಾಗ ತಲೆ ಎತ್ತಿ ನೋಡುತ್ತೇನೆ. ಒಬ್ಬ ಕೊಳಕು ಬಟ್ಟೆಯ ಹುಡುಗ ಕೈಲಿ ಒಂದು ಡಬ್ಬ ಹಿಡಿದು ನಿಂತಿದ್ದ. "ಏನಪ್ಪಾ? ಏನು ಬೇಕು?" ಎಂದು ಕೇಳಿದಾಗ "ಬಿಸಿ ಬಿಸೀ ಕಡ್ಲೇಕಾಯಿ ಸಾರ್...ತಗೋತೀರಾ ಸಾರ್" ಎಂದ. ನನ್ನ ಜಠರ ಕೋಶದ ಭಿತ್ತಿಗಳಿಗೆ ಹೆಣೆದುಕೊಂಡಿದ್ದ ನರನರಗಳೂ ಉದ್ರೇಕಗೊಂಡವು...ಹೌದು...ಆ ಇಡೀ ಡಬ್ಬದಲ್ಲಿರುವ ಕಾಯಿಗಳೆಲ್ಲ ನನಗೆ ಬೇಕು..."ಚೆನ್ನಾಗಿ ಹುರಿದಿದೆ ಏನಯ್ಯಾ? ಎಂದೆ..." ಹೌದು ಸಾರ್... ಮಿಷಿನ್‌ನಲ್ಲಿ ಹುರಿದಿದೀವಿ ಸಾರ್" ಎಂದ. ನಾನು ದಿಗ್ಭ್ರಾಂತನಾದಂತೆ "ಎಲ್ಲಿ ಒಂದೆರಡು ಕಾಯಿ ಸ್ಯಾಂಪಲ್ ತಾ..." ಎಂದೇ ಬಿಟ್ಟೆ. ಆ ಹುಡುಗ ಯಾವುದೋ ಆವೇಶಕ್ಕೆ ಬಲಿಯಾದವನಂತೆ, ಡಬ್ಬದಲ್ಲಿ ಕೈಹಾಕಿ ಮೂರು ಕಾಯಿಗಳನ್ನೆತ್ತಿ ನನ್ನ ಕೈಯಲ್ಲಿ ಹಾಕಿದ "ಹಿಂಗೆ ಸ್ಯಾಂಪಲ್ಲು ಕೊಟ್ರೆ ನಮ್ಮ ಸಾವ್ಕಾರ್ರು ಬೈತಾರೆ ಸಾರ್...ಏನೋ ನೀವು ತಗೊತೀರಿ ಅಂತೆ ಮೂರು ಕಾಯಿ ಕೊಟ್ಟಿದೀನಿ" ಎಂದ.

ಅವನು ಹೇಳಿದುದು ನನಗೆ ಕೇಳಿಸಿದರೂ, ಅದನ್ನು ವ್ಯಾಖ್ಯಾನಿಸಿ, ಅರ್ಥಮಾಡಿಕೊಳ್ಳುವ ಗೋಜಿಗೆ ಹೋಗಲಿಲ್ಲ ನಾನು...ಮೂರು ಕಾಯಿಗಳನ್ನು ಮುಗಿಸಿ ಹಾಕಿದಾಗ ನನ್ನ ಜಠರಾಗ್ನಿ ಇನ್ನಷ್ಟು ತಪ್ತವಾಯಿತು. "ಎಷ್ಟು ಕೊಡ್ಲಿ ಸಾರ್?" ಎಂದು ಆಸೆಯಿಂದ ನನ್ನತ್ತ ನೋಡಿದ. ಹುಡುಗ ನಾನು ಏನು ಮಾಡಲಿ? ಏನಾದರೂ ಮಾಡಿ ಅವನನ್ನು ನಿವಾರಿಸಬೇಕು "ಕಾಯಿ ಚೆನ್ನಾಗಿಲ್ಲ ಕಣೋ ... ಸಾಯಂಕಾಲ ಒಳ್ಳೇದು ತಬೊಂಬಾ ... ತಗೋತೀನಿ" ಎಂದಾಗ ಆ ಹುಡುಗ ಸಾರ್...ಹತ್ತು ಪೈಸಾದ್ದಾದ್ರೂ ತಗೊಳ್ಳಿ ಸಾರ್...ಇವತ್ತು ಏನೂ ವ್ಯಾಪಾರಾನೇ ಆಗಿಲ್ಲ" ಎಂದು ಗೋಗ-ರೆದ. ಇನ್ನು ನನ್ನ ಮರ್ಯಾದೆ ಆ ಸಣ್ಣ ಹುಡುಗನೆದುರು ಹರಾಜಾಗಲಿತ್ತು–ಜೇಬುಗಳನ್ನೆಲ್ಲ ತಡವರಿಸುತ್ತಾ — "ನೋಡೋ ಮಗೂ... ಪರ್ಸ್ ತರೋದೇ ಮರೆತು ಬಂದೆ. ಏನ್ಮಾಡ್ಲಿ.. ಸಂಜೇಕಡೆ ತಗೋಳ್ತೀನಿ..." ಎಂದೆ. ಹುಡುಗ ಏನೇನೋ ಪಟಗುಟ್ಟಿಕೊಳ್ಳುತ್ತಾ ನನ್ನಿಂದ

ದೂರ ತೊಲಗಿದ. ಅವನು ನನ್ನಿಂದ ದೂರ ಹೋಗುತ್ತಿರುವ ದೃಶ್ಯ–ಪ್ರಪಂಚ ದುಡ್ಡಿಲ್ಲದ ಮನುಷ್ಯನಿಂದ ದೂರ ಸರಿಯುತ್ತಿರುವಂತೆ ಕಂಡಿತು.

ಈ ಮಧ್ಯೆ ಮೂರು ಕಡಲೇ ಕಾಯಿಗಳು ನನ್ನಲ್ಲಿ ಹುಟ್ಟಿದ ಬೆಂಕಿ, ತನ್ನ ಕೆನ್ನಾಲಿಗೆಗಳನ್ನು ಚಾಚುತ್ತಾ ನನ್ನನ್ನು ದಹಿಸತೊಡಗಿತು. ಏನಾದರೂ ಬೇಕೇಬೇಕು...ನಾನು ಈ ಉರಿಯಿಂದ ಪಾರಾಗಬೇಕು...ಬೇಗ ಎದ್ದು ನಡೆಯತೊಡಗಿದೆ...ನನ್ನ ಅರಿವಿಲ್ಲದೇ ನನ್ನ ಕಾಲುಗಳು ಶೇಷಗಿರಿರಾಯರ ಮನೆಯತ್ತ ಸಾಗಿದವು. ಹೌದು. ಕಾಫಿ ಸಿಕ್ಕೇ ಸಿಕ್ಕುವ ಜಾಗ ಅದು...ಜೊತೆಗೆ ಒಂದು ಐದು ರೂಪಾಯಿ ಸಾಲ ಕೇಳಿ ಪಡೆದುಕೊಳ್ಳಬೇಕು...ಜೇಬುಗಳಲ್ಲಿ ಹಣವಿಲ್ಲದಿದ್ದರೆ ನಾನೊಂದು ಹೆಣವೇ ಸರಿ–ನಾನು ಸಾಲ ಕೇಳಿದರೆ ಅವರು ಇಲ್ಲ ಎನ್ನಲಾರರು. ಬೇಕಾದರೆ ಪಾತದ ದುಡ್ಡಿನಲ್ಲಿ ಮಜಾ ಹಾಕಿಕೊಳ್ಳಬಹುದಲ್ಲ... ಹಣ ಕೈಗೆ ಬಂದೊಡನೆಯೇ ಅದೇ ಮೆಜೆಸ್ಟಿಕ್‌ನಲ್ಲೇ ಕನಿಷ್ಠ ಮೂರಾದರೂ ಮಸಾಲೆಗಳನ್ನು ಗಿಡಿಯಬೇಕು - ಈ ನಿರೀಕ್ಷೆ ನನ್ನ ಮೈಗೆ ಅದ್ಭುತ ಬಲವನ್ನು ನೀಡಿರಬಹುದು......ಕಣ್ಣು ಬಿಟ್ಟು ನೋಡಿದಾಗ ಶೇಷಗಿರಿರಾಯರ ಮನೆಗೆ ಬಲವಾದ ಬೀಗ ಬಿದ್ದಿರುವುದು ಕಾಣಿಸಿತು.

ಸರಿ, ಪಾಪಿ ಸಮುದ್ರ ಹೊಕ್ಕಂತಾಯಿತು.. ಕಾಲೆಳೆಯುತ್ತಾ ರೂಮಿನ ಕಡೆ ಹೊರಡದೇ ಬೇರೆ ಮಾರ್ಗವಿರಲಿಲ್ಲ. ತರಗತಿಯಲ್ಲಿ ಕೂಡುವ ಚಿತ್ತಸ್ವಾಸ್ಥ್ಯಕ್ಕೆ ಎರವಾಗಿ, ಸ್ನೇಹಿತರ ಋಣ



ದಲ್ಲಿ ಸ್ವಲ್ಪ ನೆರಳನ್ನು ನೀಡುತ್ತಿದ್ದ ಆ ರೂಮಿಗೆ ಹೋಗಲೇಬೇಕಾದ ಅನಿವಾರ್ಯ! ನಡೆಯುತ್ತಿರುವಾಗ ಸುತ್ತಣ ಪ್ರಪಂಚವೆಲ್ಲ ತಿರುಗುವ ಅನುಭವ... ಮೈ ರೆಷೋಲಿ ಹೊಡೆಯುತ್ತಿತ್ತು. ಈ ಜಠರ ರೋಗಕ್ಕೆ ಮದ್ದು ಯಾವುದೆಂಬ ಚಿಂತೆ ಗಾಢವಾದಂತೆ ಅನೇಕ ಪ್ರಶ್ನಾರ್ಥಕ ಚಿಹ್ನೆಗಳು ಕಣ್ಮುಂದೆ ಮೂಡಿದವು. —ಮೊನ್ನೆ ಪೇಪರಿನಲ್ಲಿ, ಯಾರೋ ಒಬ್ಬ ಮಕ್ಕಳೊಂದಿಗ ತನ್ನ ಉದರ ನಿರ್ವಹಣೆಗಾಗಿ ತನ್ನ ಒಬ್ಬ ಮಗನನ್ನು ಮಾರಿಕೊಂಡ ವಿಷಯ ಓದಿದ್ದೆ. ಅದರಲ್ಲಿ ತಪ್ಪೇನೂ ಇಲ್ಲವೆನ್ನಿಸಿತು. ಈ ದೇಹದಲ್ಲಿ ಪಂಚಪ್ರಾಣಗಳು ಉಳಿಯುವುದು ಮುಖ್ಯ...ಇದೊಂದು ನೆರವೇರಿತೆಂದರೆ ಆಮೇಲೆ ಮುಂದಿನದು. ಅಂತೂ ಈ ಆಲೋಚನೆಗಳು ನನಗೆ ತುಂಬ ಸೊಗಸಾಗಿ ಜೊತೆ ನೀಡಿದುವು—ರೂಮಿನ ಬಾಗಿಲಿಗೆ ತಗುಲಿಸಿದ್ದ ಬೀಗವನ್ನು ನನ್ನ ಬಳಿ ಇದ್ದ ಡೂಪ್ಲಿಕೇಟ್ ಕೀಯಿಂದ ತೆಗೆದದ್ದಾಯಿತು.

ರೂಮಿನ ಒಂದು ಮೂಲೆಯಲ್ಲಿ ಕುಳಿತು ಮತ್ತೆ ಯೋಚನೆ...ಪ್ರಾಯಶಃ ಈ ಬೃಹನ್ನಗರದಲ್ಲಿ ನನ್ನ ವಿನಾ ಯಾರಿಗೂ ಈ ಸಮಸ್ಯೆ ಇರಲಾರದೆ? ಪ್ರಾಣಿಗಳು ತಮ್ಮ ಆಹಾರವನ್ನು ಹೇಗೆ ಸಂಪಾದಿಸಿಕೊಳ್ಳುತ್ತವೆ? ಎಂಬತ್ತನಾಲ್ಕು ಕೋಟಿ ಜೀವರಾಶಿಗಳಲ್ಲಿ ಮನುಷ್ಯನೊಬ್ಬನನ್ನು ಬಿಟ್ಟು ಇನ್ನು ಎಂಬತ್ಮೂರು ಕೋಟಿ ತೊಂಬತ್ತೊಂಬತ್ತು ಲಕ್ಷ, ತೊಬತ್ತೊಂಬತ್ತು ಸಾವಿರದ ಒಂಭೈನೂರಾ ತೊಂಬತ್ತೊಂಬತ್ತು ಜೀವಿಗಳು ದಿನಾ ಊಟ ಮಾಡುತ್ತವೆಯೇ? ಹುಲಿ ಆರು ತಿಂಗಳಿಗೊಮ್ಮೆ ತನ್ನ ಜಠರಾಗ್ನಿಯನ್ನು ತಣಿಸಿಕೊಳ್ಳುವುದಂತೆ! ಎಲ್ಲ ಅಂತೆ ಕಂತೆಗಳು! ಬಲು ಬೇಜಾರಾಯಿತು – ಎನ್ನುವ ಅರಿವೂ ಮೂಡದಷ್ಟು ಚೈತನ್ಯಹೀನತೆ! ಮೂಲೆಯಲ್ಲಿದ್ದ ನನ್ನ ಹಳೆಯ ಟ್ರಂಕನ್ನು ತೆರೆದೆ... ಅದರಲ್ಲಿ ಕೆಲವಾರು ಪುಸ್ತಕಗಳು, ಮೂರು ನಾಲ್ಕು ಬಟ್ಟೆಗಳು, ಪ್ಲಾಸ್ಟಿಕ್ಕಿನ ರೇಜರು, ಒಂದು ಅಲ್ಯೂಮಿನಿಯಂ ಲೋಟ...ಹಾಗೇ ತಳದಲ್ಲಿ ಕೈಯಾಡಿಸಿದೆ—ಏನಾದರೂ ಪುಡಿಗಾಸು ಸಿಕ್ಕಬಹುದೇ ಎಂಬ ಕುತೂಹಲ. ನಾನಷ್ಟು ಭಾಗ್ಯಶಾಲಿಯಲ್ಲವೆಂಬುದು ಖಾತ್ರಿಯಾಗಲು ಬಹಳ ಸಮಯ ಬೇಕಾಗಲಿಲ್ಲ.

ಆಕ್ಸ್‌ಫರ್ಡ್ ಡಿಕ್ಷನರಿಯೊಂದು ನನ್ನ ಕೈಗೆ ಸಿಕ್ಕಿತು...ಅದು ನನ್ನದೆ...ಅದರ ಬೆಲೆ ಏಳೂವರೆ ರೂಪಾಯಿಗಳು. ನನಗೇ ಕಳೆದ ತಿಂಗಳು ಡಿಬೇಟ್‌ನಲ್ಲಿ ಬಹುಮಾನವಾಗಿ ಬಂದದ್ದು. ಅದರ ಪುಟಗಳನ್ನು ತಿರುವಿಹಾಕುತ್ತ ಕುಳಿತೆ. 'ಹಂಗರ್' ಎಂಬ ಪದಕ್ಕೆ ಅರ್ಥನೋಡಿದೆ... ಎರಡು ಪದಗಳಲ್ಲಿ ಅದರ ವ್ಯಾಖ್ಯಾನ ನೀಡಿದ್ದ ಕೋಶಕರ್ತೃ. ನನ್ನ ಪ್ರತ್ಯಕ್ಷಾನುಭವವನ್ನು ಆ ಪದದ ಮುಂದೆ ನಮೂದಿಸಲು ಸಾಧ್ಯವೇ? ನಿಜವಾಗಿಯೂ 'ಹಂಗರ್' ಎಂಬ ಪದ ನನಗೆ ಮನದಟ್ಟಾದಂತೆ ಆ ಕೋಶ ಕರ್ತೃವಿಗೆ ಆಗಿಲ್ಲದಿರಬಹುದು. ಎಲ್ಲರಿಗೂ ಆಗುವ ಹಸಿವೆ ನನ್ನ ಹಸಿವೆಗಿಂತ ತೀರ ಭಿನ್ನವಾಗಿರಬೇಕು. ರಾತ್ರಿ ಒಂಬತ್ತಕ್ಕೆ ಊಟ ಮಾಡಿ, ತಿರುಗಿ ಬೆಳಗ್ಗೆ ಒಂಬತ್ತಕ್ಕೆ 'ಹಸಿವೆ'ಯ ನೆಪದಲ್ಲಿ ತಿಂಡಿ ತಿನ್ನುವವರ ಹಸಿವೆ ನನ್ನ ಹಸಿವೆಯ ಮುಂದೆ ಯಾವ ಮೂಲೆ?

ಡಿಕ್ಷನರಿಯನ್ನು ಕೈಯಲ್ಲಿ ಹಿಡಿದುಕೊಂಡು ಕ್ಷಣ ಹೊತ್ತು ಆಲೋಚಿಸಿದೆ. ಕಳೆದ ಒಂದು ತಿಂಗಳಿನ ಅವಧಿಯಲ್ಲಿ ಈ ಹೊಸ ಪುಸ್ತಕವನ್ನು ಒಂದು ಬಾರಿಯೂ ಉಪಯೋಗಿಸಿಲ್ಲ. ಇದರಲ್ಲಿರುವ ಶೇಕಡಾ ಎಪ್ಪತ್ತರಷ್ಟು ಪದಗಳ ಅರ್ಥ ನನಗೆ ಗೊತ್ತೇ ಇದೆ. ಉಳಿದ ಶೇಕಡಾ ಮೂವತ್ತರ ಅರ್ಥ ನನಗೆ ಅಪ್ರಕೃತ. ಇದೀಗ ನನಗೆ ಆ ಇಡೀ ಗ್ರಂಥವೇ ಅಪ್ರಕೃತ ಎನ್ನಿಸಿತು. ಮೊದಲ ಹಾಳೆಯಲ್ಲೇ ಟೈಪು ಮಾಡಿದ ಕಾಗದ ನನ್ನ ಹೆಸರು–ತರಗತಿ–ಪ್ರಥಮ ಬಹುಮಾನ ಅಧ್ಯಕ್ಷರ ಸಹಿ–ಇತ್ಯಾದಿ ಹೊಟ್ಟೆಯಲ್ಲಿ ಬೆಂಕಿ ಬಿದ್ದಿತು. ಈ ಪುಸ್ತಕದ ಬದಲು ಏಳೂವರೆ ರೂಪಾಯಿಗಳನ್ನಾದರೂ ಕೊಟ್ಟಿದ್ದರೆ ಎನ್ನಿಸಿತು. ಛೆ! ಶಾಶ್ವತ ದಾಖಲೆಯಾಗಿ ಕೊಟ್ಟಿರುವ ಪುಸ್ತಕವೆಲ್ಲಿ? ಒಂದೇ ವಾರದಲ್ಲಿ ಜಠರಾಗ್ನಿಯಲ್ಲಿ ಕರಗುವ ಏಳೂವರೆ ರೂಪಾಯಿಗಳೆಲ್ಲಿ? ಆದರೆ...ಆದರೆ ಆ ಏಳೂವರೆ ರೂಪಾಯಿಗಳ ಮೂಲಕ ನನ್ನ ಜಠರದೊಳಕ್ಕೆ ಇಳಿದು ರಕ್ತಗತ

ವಾಗುತ್ತಿದ್ದ ಪದಾರ್ಥಗಳು ಅದೇ ರಕ್ತದಲ್ಲಿಯೇ ಜೀವಕಣಗಳಾಗಿ ನನ್ನ ಇಡೀ ಅಸ್ತಿತ್ವವನ್ನೇ ಕಾಪಾಡಿದಾಗ, ಅದೂ ಶಾಶ್ವತ ದಾಖಲೆಯಾಗುತ್ತಿತ್ತಲ್ಲವೆ?

ತಟ್ಟನೆ ಆ ಪುಸ್ತಕ ಸಮೇತ ಮೇಲೆದ್ದೆ. ರೂಮಿಗೆ ಬೀಗ ತಗಲಿಸಿ ನಿಧಾನವಾಗಿ ಹೆಜ್ಜೆ ಇಡುತ್ತಾ ರಸ್ತೆಗಿಳಿದೆ. ಈದೀಗ ನೇರವಾಗಿ ಮಾರ್ಕೆಟ್ಟಿನ ಬಳಿ ಹೋಗಬೇಕು. ಏನಾದರೂ ತಿನ್ನಲೇಬೇಕೆಂಬ ಚಪಲ ಬಲವಾಯಿತು. ಆದಷ್ಟು ಚುರುಕಾಗಿ ನಡೆಯುತ್ತಿದ್ದ ನನ್ನನ್ನು ಯಾವ ಶಕ್ತಿಯೂ ತಡೆಯದಾಯಿತು. ಇದ್ದಕ್ಕಿದ್ದ ಹಾಗೇ ಕತ್ತೆತ್ತಿ ನೋಡಿದೆ ಎದುರಿಗೆ ನನ್ನ ಪ್ರಾಧ್ಯಾಪಕ ವೀರಬಸಪ್ಪ. ವಿಧಿಯಿಲ್ಲದೆ "ನಮಸ್ಕಾರ ಸಾರ್"– ಎಂದೆ. ಅವರು ಮುಗುಳ್ನಗೆಯ ಪ್ರತ್ಯುತ್ತರ ನೀಡಿ "ಏನು ಈ ಕಡೆ? ಕಾಲೇಜಿಲ್ವಾ? ಅದೇನು ಪುಸ್ತಕ?" ಎನ್ನುತ್ತಾ ನನ್ನ ಕೈಲಿದ್ದ ಡಿಕ್ಷನರಿ ತೆಗೆದುಕೊಂಡು ಮೊದಲ ಪುಟದಲ್ಲಿದ್ದ ಬರಹವನ್ನು ಓದಿ ತಲೆದೂಗುತ್ತಾ– "ಭೇಷ್... ನಿಮ್ಮ ಕೆರಿಯರ್‌ನಲ್ಲಿ ಇವೆಲ್ಲ ತುಂಬ ಮಹತ್ವಪೂರ್ಣ ವಿಚಾರಗಳು... ಕೀಪ್ ಇಟ್ ಅಪ್... ಈ ಪುಸ್ತಕದ ಮುಖ ಬೆಲೆ ಮುಖ್ಯವಲ್ಲ– ಇದರ ಹಿಂದೆ ಎದ್ದು ಕಾಣ್ತಿರೋ ಆ ಪ್ರತಿಭೆ ಮುಖ್ಯ"... ಮುಂತಾಗಿ ಭಾಷಣ ಬಿಗಿದು ಮುಂದೆ ಸಾಗಿದರು. ಅವರ "ಕಾಲೇಜಿಲ್ವಾ?" —ಪ್ರಶ್ನೆಗೆ ಉತ್ತರವನ್ನು ತಡವರಿಸುತ್ತಿದ್ದ ನಾನು– "ನಿಮಗೆ ಕಾಲೇಜಿಲ್ವಾ ಸಾರ್?"—ಎಂದು ಬಿಡಬೇಕೆಂದುಕೊಳ್ಳುವಷ್ಟರಲ್ಲೇ ಅವರು ಮುಂದಕ್ಕೆ !ದಯಮಾಡಿಸಿದುದು ನನಗೆ ಸಮಾಧಾನವೆನಿಸಿತು.

ಇಷ್ಟು ತಡವಾಗಬಾರದು. ಹೊಟ್ಟೆಯು ತಳಮಳ ತೀವ್ರವಾಗಿ ಕಾಡುತ್ತಿದೆ ಎಂದುಕೊಂಡವನೇ ಬೇಗ ಬೇಗ ಹೆಜ್ಜೆ ಹಾಕಿ ಆ ಅಂಗಡಿಯ ಮುಂದೆ ನಿಂತೆ. ಅಂಗಡಿಯಾತ ಒಮ್ಮೆ ನನ್ನ ಕಡೆ ನೋಡಿದ. ಮೌನವಾಗಿ ನಾನು ಆ ಪುಸ್ತಕವನ್ನು ಅವನ ಕೈಯಲ್ಲಿಟ್ಟೆ. ಅವನು ಅದನ್ನು ತೆರೆದುಕೊಂಡವನೇ ಹಿಂದೆ ಮುಂದೆ ತಿರುಗಿಸಿ ನೋಡಿ– "ಏನ್ರಿ... ಇಂಥ ಪುಸ್ತಕಾನೆಲ್ಲ ತರ್ತೀರಿ? ಯಾರು ತಗೋತಾರೆ ಇವನ್ನೆಲ್ಲ? ಏನೋ ಕತೆ ಕಾದಂಬರಿ ಆದ್ರೆ ತಗೋಬಹುದು... ಬ್ಯಾಡ ತಗೊಳ್ರಿ" ಎಂದ. ನನಗೆ ದಿಗ್ಭ್ರಾಂತಿಯಾಯಿತು "ಸ್ವಾಮಿ... ಇದು ಹೊಸಾ ಪುಸ್ತಕ... ಡಿಕ್ಷನರಿ... ಸ್ಕೂಲು ಹುಡುಗ್ರು ಖಂಡಿತ ತಗೊಳ್ತಾರೆ... ಏಳೂವರೆ ಇದರ ಬೆಲೆ..." ಎಂದು ನಾನು ಏನೇನೋ ಪ್ರಾರಂಭಿಸಿದುದನ್ನು ಅವನು ಕೇಳಿಸಿಕೊಳ್ಳದೆ, ಆ ಪುಸ್ತಕವನ್ನು ಅವನ ಕಾಲಿನ ಬದಿಯಲ್ಲಿ ಬಿದ್ದಿದ್ದ ಹಲವಾರು ಪುಸ್ತಕಗಳ ಮಧ್ಯೆ ಎಸೆದು, ತನ್ನ ಮೇಜಿನ ಡ್ರಾ ಎಳೆದು, ಒಂದು ನಾಣ್ಯವನ್ನು ನನ್ನತ್ತ ಎಸೆದ. ಆಸೆಯಿಂದ ಅದನ್ನು ನಾನು ಕೈಗೆತ್ತಿಕೊಂಡು ನೋಡಿದಾಗ ಅದು ಅರ್ಧ ರೂಪಾಯಿನ ನಾಣ್ಯ!

ನಾನು ಸುಮ್ಮನೆ ಅದನ್ನು ಕೈಲಿ ಹಿಡಿದು ನಿಂತಿದ್ದೆ. ಅಂಗಡಿಯವನನ್ನು ಅವನ ಅನ್ಯಾಯದ ಬಗ್ಗೆ ಕೇಳಬೇಕೆಂದರೂ ನಾಲಿಗೆ ಏಳಲಿಲ್ಲ; ಏಳೂವರೆ ರೂಪಾಯಿನ ಪುಸ್ತಕವನ್ನು ಅರ್ಧ ರೂಪಾಯಿಗೆ ಮಾರಿದ ಹಾಗಾಯಿತಲ್ಲ ಎಂದು ತಳಮಳವಾಗಿ– "ಇಷ್ಟೇನಾ ಬರೋದು?"– ಎಂದೆ... "ಸುಮ್ನೆ ಹೋಗ್ರಿ... ಅದೂ ಜಾಸ್ತಿ ಆತು... ನಾಕಾಣೆ ಕೊಡಬೇಕಾಗಿತ್ತು ನ್ಯಾಯವಾಗಿ... ಏನೋ ಹೋಗ್ಲಿ ಅಂತ ಅಷ್ಟು ಕೊಟ್ಟಿದೀನಿ..." ಎಂದು ಅಂಗಡಿಯ ಬಳಿ ಬಂದು ನಿಂತ ಬೇರೊಬ್ಬನತ್ತ ತಿರುಗಿದ. ಪೆಚ್ಚಾಗಿ ಹಿಂದಕ್ಕೆ ಬರುವುದೊಂದೇ ದಾರಿ ಉಳಿದಿತ್ತು ನನಗೆ. ಹತ್ತು ಹೆಜ್ಜೆ ಹಿಂದಕ್ಕೆ ನಡೆದ ಮೇಲೆ ಮತ್ತೆ ಕೆಟ್ಟ ಸಂಕಟ ಶುರುವಾಯಿತು. ಛೇ— ಎಂಥಾ ಮೋಸ... ಏಳೂವರೆ ರೂಪಾಯಿನ ಪುಸ್ತಕ ಅಲ್ಲದೆ ಹೊಚ್ಚ ಹೊಸದು. ಎಲ್ಲದಕ್ಕಿಂತ ಹೆಚ್ಚಾಗಿ, ನಾನು ಮೊದಲು ವೀರಬಸಪ್ಪನವರನ್ನು ಸಂಧಿಸಿದ ಜಾಗಕ್ಕೆ ಬಂದೊಡನೆಯೇ ಅವರು ಹೇಳಿದ ಮಾತು ಕಿವಿಯಲ್ಲಿ ಮೊಳಗ ತೊಡಗಿತು– ಹೌದು... ಆ ದಿನ ಚರ್ಚಾಸ್ಪರ್ಧೆಗೆಂದು ಬಂದ ನಲವತ್ತೆರಡು ಜನರಲ್ಲಿ ಈ ಪುಸ್ತಕ ನನಗೇ ಬರಲು ಕಾರಣವೇನು? ನನ್ನ ಪ್ರತಿಭೆಗೆ ಒಂದು ಜೀವಂತ ನಿದರ್ಶನ

ಆ ಪುಸ್ತಕ... ಛೆ... ಅದನ್ನು ಅರ್ಧ ರೂಪಾಯಿಗೆ, ಒಪ್ಪತ್ತಿನ ಊಟವನ್ನು ನೀಡಲಾರದ ಆ ಅಲ್ಪ ಹಣಕ್ಕೆ ಮಾರಿಕೊಳ್ಳುವುದೇ? ಹಸಿವಿನಿಂದ ಸತ್ತರೂ ಇದು ಕೂಡದು—

ಸರಿ... ಮತ್ತೆ ವೇಗವಾಗಿ ಅವನ ಬಳಿಗೆ ಹೋದೆ... ಅವನು ತಲೆಬಗ್ಗಿಸಿ ಕುಳಿತಿದ್ದ. ಅವನ ಕೈಯಲ್ಲಿ ನಾನು ಕೊಟ್ಟ ಡಿಕ್ಷನರಿ ಇತ್ತು. ನನಗೆ ಉದ್ವೇಗ ಹೆಚ್ಚಾಯಿತು. ಅವನು ಏನು ಮಾಡುತ್ತಾನೆಂದು ನೋಡಿದಾಗ ನನ್ನ ಹೃದಯವೇ ಬಾಯಿಗೆ ಬಂದ ಹಾಗಾಯಿತು. ಬಹುಮಾನದ ವಿವರಗಳಿದ್ದ ಆ ಚೀಟಿಯನ್ನು ಆತ ತನ್ನ ಬಾಯಿಯ ಎಂಜಲನ್ನು ಹಚ್ಚಿ ಕೀಳುವ ಪ್ರಯತ್ನದಲ್ಲಿದ್ದ. ನನಗೆ ನನ್ನ ಕತ್ತನ್ನೇ ಹಿಚುಕಿದಂತಾಯಿತು. "ರೀ... ಅದನ್ನು ಕೀಳಬ್ಯಾಡ್ರೀ ಇಗೋ ತಗಳ್ರೀ ನಿಮ್ದು ದುಡ್ಡು... ನನ್ನ ಪುಸ್ತಕ ನಂಗೆ ವಾಪಸ್ ಕೊಡೀ"— ಎಂದು ಅರಚಿ ಅವನು ಕೊಟ್ಟ ನಾಣ್ಯವನ್ನು ಆ ಮೇಜಿನ ಮೇಲೆಸೆದೆ. ಆತ ತಲೆಯನ್ನೆತ್ತಿ ನನ್ನ ಕಡೆ ಕ್ರೂರವಾಗಿ ನೋಡುತ್ತಾ— "ಯಾವ್ದಿರೀ ನಿಮ್ಮ ಪುಸ್ತಕ? ನನ್ನಂಗಡೀಲಿ ಅರ್ಧ ರೂಪಾಯೀಗೆ ಯಾವ ಪುಸ್ತಕಾನೂ ಬರೋದಿಲ್ಲ... ತಗಳ್ರಿ ನಿಮ್ಮ ದುಡ್ಡು" ಎಂದ. ಎಲಾ ಇವನ! ಐದು ನಿಮಿಷಕ್ಕೆ ಮುಂಚೆ ಪುಸ್ತಕ ನನ್ನ ಬಳಿ ಇತ್ತು. ಈ ಹಾಳು ಅರ್ಧರೂಪಾಯಿ ಆ ಚಂಡಾಲನ ಬಳಿ ಇತ್ತು. ಈಗ ವಾಪಸ್ ಬೇಡ— ಎನ್ನುತ್ತಾನೆ... ಏನು ಮಾಡಲಿ? ಸ್ವಲ್ಪ ನಯವಾಗಿ ಕೇಳಿ ನೋಡಬೇಕು...

"ರೀ... ಸ್ವಾಮಿ... ಆ ಪುಸ್ತಕ ನಂಗೆ ಪ್ರೈಜ್ ಬಂದದ್ದು— ಅದನ್ನು ವಾಪಸ್ ಕೊಟ್ಬಿಡ್ರೀ"— ಎಂದು ಗೋಗರೆದೆ... ಅವನು ಕತ್ತು ತಗ್ಗಿಸಿದಂತೆಯೇ— "ಆ... ಪ್ರೈಜ್ ಬಂದಿದ್ದಾದ್ರೆ ಸೆಕೆಂಡ್ ಹ್ಯಾಂಡ್ ಬುಕ್‌ಸ್ಟಾಲಿಗ್ಯಾಕ್ರೀ ತಂದು ಹಾಕಿದ್ರಿ? ನಿಮ್ದೋ ಅಥವಾ ಫ್ರೆಂಡ್‌ದೋ? ಯಾರಾದ್ರೂ ಪ್ರೈಜ್ ಬಂದ ಪುಸ್ತಕಾನ ಮಾರ್ತಾರೇನ್ರಿ?"— ಎಂದ. ಅವನ ಪ್ರಶ್ನೆ ನನ್ನ ಎದೆಯನ್ನು ಸೀಳ ತೊಡಗಿತು. ಹೌದು. ಅವನ ಪ್ರಶ್ನೆಗೆ ನಾನು ಏನೆಂದು ಉತ್ತರ ಕೊಡಲಿ? ಒಂದು ವಾರದಿಂದಲೂ ಉಪವಾಸವಿದ್ದೇನೆ— ಹೊಟ್ಟೆಗಿಲ್ಲದೆ ಇದನ್ನೇ ಮಾರಬೇಕಾಗಿ ಬಂತು"— ಎಂದು ಹೇಗೆ ತಾನೇ ಹೇಳಲಿ? ಹೆಚ್ಚು ಚರ್ಚೆ ಮಾಡಬಾರದೆಂದು— "ನೋಡಪ್ಪ ದಯವಿಟ್ಟು ವಾಪಸ್ ಕೊಟ್ಬಿಡು... ತಗೋ ನಿನ್ನ ಹಣ" ಎಂದು ತುಂಬ ಕಳಕಳಿಯಿಂದ ವಿನಂತಿಸಿಕೊಂಡೆ.

ಅವನು ನನ್ನನ್ನು ಕತ್ತೆತ್ತಿ ನೋಡಿ ಹೇಳಿದ— ಏನೋ ಮೈಮೇಲೆ ಬರೋಹಂಗೈತಿ... ಅದಕ್ಕೆ ಕೇಳ್ತಾ ಇದೀರಿ? ನೋಡ್ರಿ. ಈ ಪುಸ್ತಕ ನಾನು ನಿಮ್ಗೆ ಕೊಡ್ತೀನಿ... ಪುಸ್ತಕ ಯಾಪಾರ ಮಾಡೋದೇ ನನ್ನ ಕಸುಬು. ಆದ್ರೆ ಈ ಕಸುಬು ಲಾಭ ಇಲ್ದೇ ಮಾಡೋದಲ್ಲ... ಪುಸ್ತಕದ ಬೆಲೆ ಏಳೂವರೆ... ನೀವು ಏಳು ರೂಪಾಯಿ ತಂದು ಕೊಡ್ರಿ... ತಗೊಂಡೋಗ್ರಿ ಯಾರು ಬ್ಯಾಡಾ ಅಂತಾರೆ?" ಎಂದ.

ನನಗೆ ಒಂದು ಕಡೆ ಹಸಿವೆ— ಮತ್ತೊಂದು ಕಡೆ ನನ್ನ ಪ್ರತಿಭೆ— ಎರಡನ್ನೂ ಈ ಸೆಕೆಂಡ್ ಹ್ಯಾಂಡ್ ಪುಸ್ತಕ ಮಾರುವಾತ ತಕ್ಕಡಿಯಲ್ಲಿಟ್ಟು ತೂಕ ಮಾಡುತ್ತಿದ್ದಾನೆ— ಎನ್ನಿಸಿತು. "ಅಪ್ಪಾ... ನ್ಯಾಯವಾಗಿ ಹೇಳು. ಈಗ ಐದು ನಿಮಿಷ ಮುಂಚೆ ಈ ಪುಸ್ತಕಕ್ಕೆ ನೀನೇ ಅರ್ಧ ರೂಪಾಯಿ ಕೊಟ್ಟಿದೀ... ಈಗ ನನ್ಹತ್ರ ಏಳು ರೂಪಾಯಿ ಕೇಳ್ತಾ ಇದೀಯಲ್ಲ... ಇದು ಸರೀನಾ?"— ಎಂದೆ. "ಹಂಗಾದ್ರೆ ಅದೇ ಎಂಟಾಣೆಗೇ ನಾನು ಈ ಪುಸ್ತಕ ಮಾರಬೇಕೂಂತೀರಾ? ಆ ಸಂಪತ್ದೆ ಈ ಅಂಗಡಿ ಯಾಕೆ?— ಅದೆಲ್ಲ ಆಗಾಕಿಲ್ಲ... ಈ ಪುಸ್ತಕ ನಿಮ್ಗೆ ಬೇಕಾದ್ರೆ... ಏಳು ರೂಪಾಯ್... ಹೋಗ್ಲಿ... ಆರು ರೂಪಾಯ್ನಾದ್ರೂ ತರಬೇಕು..." ಎಂದ. ಹಾಗೂ ಹೀಗೂ ಮಾಡಿ, ಐದು ರೂಪಾಯಿ ಕೊಟ್ಟರೆ ಪುಸ್ತಕ ಕೊಡಲು ಒಪ್ಪಿದ. "ನೋಡಪ್ಪಾ... ದುಡ್ಡು ಈಗ ನನ್ಹತ್ರ ಇಲ್ಲ... ಇವತ್ತು ರಾತ್ರಿ ಎಂಟು ಗಂಟೆ ವರ್ಗೆ ಟೈಂ ಕೊಡು. ತಗೊಂಡು ಹೋಗ್ತೀನಿ..." ಎಂದೆ. "ಏ... ತೆಗೀರಿ... ಎಲ್ಲೀ ವ್ಯವಹಾರ ನಿಮ್ದು..." ನೋಡ್ರಿ...

ನೀವು ಯಾವಾಗರ ಬನ್ರಿ... ಆದ್ರೆ ಅಷ್ಟೊತ್ತಿಗೆ ಜಾಸ್ತಿ ರೇಟಿಗೆ ಯಾರಾದ್ರೂ ಈ ಪುಸ್ತಕ ಒಯ್ದ್ರೆ ನಾನು ಜವಾಬ್ದಾರ ಅಲ್ಲ..."– ಎಂದು ಬಿಟ್ಟ.

ನಾನು ಆ ಹಾಳು ಎಂಟಾಣೆಯನ್ನು ಜೇಬಿನಲ್ಲಿಳಿಬಿಟ್ಟು ಮತ್ತೆ ಹಿಂತಿರುಗಿದೆ... ಐದು ರೂಪಾಯಿಗೆ ಯಾರನ್ನು ಮೊರೆ ಹೋಗಲಿ?. ಶೇಷಗಿರಿರಾಯರನ್ನೇ ಕೇಳಿದರೆ? ಒಂದು ತಿಂಗಳ ಮುಂಗಡವನ್ನೂ ಅವರಿಂದ ಪರೀಕ್ಷೆಯ ಫೀಜಿಗಾಗಿ ವಸೂಲಿ ಮಾಡಿಕೊಂಡಿದ್ದೇನೆ... ಮತ್ತೆ ಅವರನ್ನೇ ಹೇಗೆ ಕೇಳುವುದು? ಕೇಳ-ದಿದ್ದರೆ ವಿಧಿಯೇ ಇಲ್ಲ... ಅವರು ಖಂಡಿತ ಕೊಟ್ಟೇ ಕೊಡುತ್ತಾರೆ... ಹಾಗಾದರೆ ಈಗ ಜೇಬಿನಲ್ಲಿರುವ ಈ ಅರ್ಧ ರೂಪಾಯಿ? ಅವರ ಮನೆಗೆ ಹೋಗಲು ಇನ್ನೂ ಬೇಕಾದಷ್ಟು ಸಮಯವಿದೆ. ಮೊದಲು ಏನಾದರೂ ತಿನ್ನಬೇಕು.

ಜೇಬು ಮತ್ತೊಮ್ಮೆ ಖಾಲಿಯಾದಾಗ ಹಸಿವೆ ಸ್ವಲ್ಪ ಹಿಮ್ಮೆಟ್ಟಿತು. ಸಮಾಧಾನವಿಲ್ಲದಿದ್ದರೂ ತಾಪ ಅಡಗಿತ್ತು. ನನ್ನ ಪ್ರತಿಭೆಯ ದುಡಿಮೆ ಆ ಡಿಕ್ಷನರಿ ತಂದಿತ್ತ ಆಹಾರ ಒಪ್ಪೊತ್ತಿನದು. ಮೊದಲು ಆ ಗ್ರಂಥವನ್ನು ಆ ನೀಚನಿಂದ ಬಿಡಿಸಿಕೊಳ್ಳಬೇಕು... ಸಾಯಂ-ಕಾಲ ಆರು ಗಂಟೆಯಾಗುವವರೆಗೂ ಶೇಷಗಿರಿ ರಾಯರು ಸಿಕ್ಕುವುದಿಲ್ಲ. ನನ್ನ ಗೆಳೆಯರೆಲ್ಲ ರೂಮಿಗೆ ಹಿಂದಕ್ಕೆ ಬಂದಿದ್ದರು. ನನ್ನ ಆರೋಗ್ಯದ ಬಗ್ಗೆ ವಿಚಾರಿಸಿದರು. ತಿರುಗಾಡಲು ಕರೆದರು. ತಿರುಗಾಡುವ ಶಕ್ತಿ ಯಾದರೂ ನನಗಿತ್ತೆ? ಪಾಠದ ಮನೆಯ ನೆಪ ಹೇಳಿ ತಪ್ಪಿಸಿಕೊಂಡೆ. ಆರು ಗಂಟೆಯಾಗುತ್ತಿದ್ದ ಹಾಗೇ ಶೇಷಗಿರಿರಾಯರ ಮನೆ ಕಡೆ ಹೊರಟೆ.

ನಾನು ಹೋದೊಡನೆಯೇ– ಎಂದಿನಂತೆ ಸಂಭ್ರಮದ ಸ್ವಾಗತ ಸಿಕ್ಕಿತು. ಮಕ್ಕಳೆಲ್ಲ ಪಾಠಕ್ಕೆ ಅಣಿಯಾಗಿ ಬಂದರು. ಅಷ್ಟರಲ್ಲಿ ನಾಗವೇಣಿ ಬರುವುದು ಕಾಣಿಸಿತು, ಓಹೋ... ಕಾಫಿ ಇರಬಹುದು... ಹೌದು: ಅದು ಮಾಮೂಲೇ ತಾನೇ. ಗಂಟಲಾರಿ ಹೋಗಿತ್ತು... ಅರ್ರೆ ಇದೇನಿದು... ತಿಂಡಿ ಬೇರೆ ಇವತ್ತು... ನಾನಾ ವೈವಿಧ್ಯಮಯ ಭಕ್ಷ್ಯಗಳು... "ನಮ್ಮ ರಾಜೂ ಬರ್ತ್‌ಡೇ ಸಾರ್"— ಎಂದಳು ನಾಗವೇಣಿ... "ರಾತ್ರಿ ಇಲ್ಲೇ ಊಟ ಮಾಡಿ ಸಾರ್..." ಎಂದು ಎಲ್ಲರೂ ಬಲವಂತ ಮಾಡಿದರು. ಹಸಿವಿನ ತೋಳ ದೂರವಾಯಿತು. ಆದರೆ ಅದು ನನ್ನಿಂದ ಕಿತ್ತುಕೊಂಡ ಆ ಅಮೂಲ್ಯ ಗ್ರಂಥ? "ನಿಮ್ಮಂದೆ ಇಲ್ವಾ?"– ಎಂದೆ. "ಉಹುಂ ಅವರು ಬರೋದು ಇವತ್ತು ಒಂಬತ್ತಾಗಬಹುದು... ಇರಿ ಸಾರ್– ಅಲ್ಲೀವರೆಗೂ ಆ ಮೇಲೆ ಊಟಮುಗಿಸ್ಕೊಂಡೇ ಹೋಗ್ರಿ..." ಎಂದಾಗ ನನ್ನ ಆಸೆಯೆಲ್ಲ ತಣ್ಣಗಾಯಿತು, ಹೀಗೆ ಈ ರಾತ್ರಿ ನನಗೆ ಸುಗ್ರಾಸಭೋಜನ ಸಿಕ್ಕುವುದೆಂದು ಗೊತ್ತಿದ್ದಿದ್ದರೆ ನಾನು ಆ ಪುಸ್ತಕವನ್ನು ಆ ರಕ್ಕಸನ ಕೈಗೆ ಹಾಕುತ್ತಿರಲಿಲ್ಲ...

ಅರೆಮನಸ್ಸಿನ ಪಾಠ. ಅಂತೂ ಶೇಷಗಿರಿ ರಾಯರು ಒಂಬತ್ತೂವರೆಗೆ ಬಂದರು. ಸರಿ... ಆ ಪಾಪಿ ಯಾರಿಗೋ ಮಾರಿರುತ್ತಾನೆ ನನ್ನ ಆ ಅಮೂಲ್ಯ ಗ್ರಂಥವನ್ನು! "ಓಹೋ... ನಂದು ಬರೋದೇ ಲೇಟಾಯ್ತು... ಮೇಷ್ಟ್ರೆ... ಏಳ್ರಿ... ಊಟ ಮಾಡೋಣ"– ಎಂದು ರಾಯರು ನನಗೆ ಹೇಳಿ ತಮ್ಮ ಕೈಲಿದ್ದ ಪುಸ್ತಕ, ಫೈಲುಗಳನ್ನು ಮೇಜಿನಲ್ಲಿಟ್ಟು ಒಳಗೆ ಹೋದರು. ಫೈಲಿನ ಮೇಲೆ ನನ್ನ ಡಿಕ್ಷನರಿ ಕಾಣಿಸಿದಾಗ ಉಂಡಷ್ಟೇ ಸಂತೋಷವಾಯಿತು. ✡



# ಅದ್ಭುತ ಸೈಕಲ್ಲು

ಬ್ರಿಟನ್ನಿನ ಲಿಟನ್ ಹ್ಯಾಂಪ್ಟನ್ನಿನ ರೋಟರಿಕ್ಲಬ್ಬಿನಲ್ಲಿ ಒಂದು ಅದ್ಭುತ ಸೈಕಲ್ ಇದೆ.

ಈ ಸೈಕಲ್ ೩೫ ಅಡಿಗಳಷ್ಟು ಉದ್ದ. ಇದರ ತೂಕ ೧೦೦೦ ಪೌಂಡು. ಇದನ್ನು ೨೧ ಜನ ಆರೋಹಿಸಬಹುದು. ಎಲ್ಲರಿಗೂ ಮುಂದಿರುವವನು ಹ್ಯಾಂಡಲ್ ಹಿಡಿದುಕೊಂಡು ಸೈಕಲ್ ನಡೆಸುತ್ತಾನೆ. ಮೇಲೆ ಕುಳಿತ ೨೧ ಜನರಲ್ಲಿ ೧೨ ಜನ ಪೆಡಲ್ ಹೊಡೆಯುತ್ತಿರುತ್ತಾರೆ. ಇದರ ಚೇನ್ ೧೦೦ ಅಡಿ ಉದ್ದವಾಗಿದ್ದು ಮೋಟರ್ ಸೈಕಲಿನಂಥ ಗೇರ್ ಬಾಕ್ಸಿನಲ್ಲಿ ಹಾಯ್ದುಹೋಗಿದೆ.

ಈ ಸೈಕಲ್ಲಿನ ಮುಂಭಾಗದಲ್ಲಿ ಮತ್ತು ಹಿಂಭಾಗದಲ್ಲಿ ದೀಪಗಳಿವೆ. ಗಂಟೆಗಳೂ ಇವೆ. ಇಷ್ಟು ದೊಡ್ಡ ಸೈಕಲ್ಲನ್ನು ನೋಡದಿರುವವರನ್ನು ಎಚ್ಚರಿಸಲು ಇವೆಲ್ಲ ಸಲಕರಣೆಗಳು ಅಗತ್ಯ ಬೇಕಲ್ಲ !

ಲಿಟನ್ ಹ್ಯಾಂಪ್ಟನ್ನಿವ ರೋಟರಿ ಕ್ಲಬ್ಬಿವ ಸದಸ್ಯ ನಿಕೋಲಾ ಶೆಫೆಯರ್ ತನ್ನ ಕಾರಖಾನೆಯಲ್ಲಿ ಈ ಅದ್ಭುತ ಸೈಕಲ್ಲನ್ನು ತಯಾರಿಸಿದ್ದಾನೆ. ರೋಟರಿ ಕ್ಲಬ್ಬಿನ ಸದಸ್ಯರು ಈ ಸೈಕಲ್ಲನ್ನು ಓಡಿಸಿತೋರಿಸಿ ಜನರಿಂದ ೩೫೦೦ ಪೌಂಡು ಹಣ ಸಂಗ್ರಹಿಸಿದ್ದಾರೆ. ರಾಷ್ಟ್ರೀಯ ಲೈಫ್ ಬೋಟ್ ಅಸೋಸಿಯೇಶನ್ನಿಗೆ ಒಂದು ಲೈಫ್ ಬೋಟನ್ನು ಕೊಂಡು ಕಾಣಿಕೆಯಾಗಿ ನೀಡಿದ್ದಾರೆ.

ಸೇವಾ ಕಾರ್ಯಕ್ಕಾಗಿ ನಿಧಿ ಸಂಗ್ರಹಿಸಲೆಂದು ಈ ಸೈಕಲನ್ನು ಒಮ್ಮೆ ಸ್ವೀಡನ್ನಿಗೂ ಕಳಿಸಲಾಗಿತ್ತು.

# ಇರಾಣಿ ಸ್ನಾನಗೃಹದಲ್ಲಿ.....

ಡಾ. ಯು. ಎಸ್. ಜಾಫರಿ

ಇರಾನಿನಲ್ಲಿ ಮಜ್ಜನ ಗೃಹಗಳೂ ಉಂಟು; ಸ್ನಾನದ ಮನೆಗಳೂ ಉಂಟು. ಮಜ್ಜನ ಗೃಹದಲ್ಲಿ ಹೆಣಗಳಿಗೆ ಸ್ನಾನ ಮಾಡಿಸಲಾಗುತ್ತಿದೆಯಾದರೆ ಸ್ನಾನದ ಮನೆಗಳಲ್ಲಿ ಜೀವಂತ ವ್ಯಕ್ತಿಗಳಿಗೇ ಸ್ನಾನಮಾಡಿಸಲಾಗುತ್ತಿದೆ ಇವೆರಡರಲ್ಲಿಯ ಅಂತರ ಇಷ್ಟೇ. ಇಂಥ ಸ್ನಾನದ ಮನೆಯಲ್ಲಿ ನನಗೆ ಬಂದ ಅನುಭವವನ್ನು ಎಂದಿಗೂ ಮರೆಯಲಾರೆ

ತೆಹರಾನ್ ವಿಶ್ವವಿದ್ಯಾಲಯದ ಹಾಸ್ಟೆಲಿನಲ್ಲಿ ನಾನಿರುತ್ತಿದ್ದಾಗ ಮೂರು ನಾಲ್ಕು ಕೋಣೆಗಳಿಗೆ ಒಂದರಂತೆ ಬಾತ್‌ರೂಮ್ ಇತ್ತು. ಅಲ್ಲಿ ಸಾಕಷ್ಟು ಬಿಸಿನೀರು ದೊರೆಯುತ್ತಿದ್ದರೂ ಒಮ್ಮೊಮ್ಮೆ ಹೇಗೋ ಅವ್ಯವಸ್ಥೆಯುಂಟಾಗಿ ಎಷ್ಟೋ ದಿನಗಳ ವರೆಗೆ ಬಿಸಿನೀರು ದೊರೆಯುತ್ತಿರಲೇ ಇಲ್ಲ.

ಹೀಗಾದಾಗಲೊಮ್ಮೆ ಸ್ನಾನಗೃಹಕ್ಕೆ ಹೋದೆ. ಒಳಗೆ ಪ್ರವೇಶಿಸಲು ಸಂಗಮರವರಿ ಕಲ್ಲಿನ ಸೋಪಾನಗಳನ್ನೇರಿಯೇ ಹೋಗಬೇಕು. ನೆಲಗಟ್ಟು ಸಹ ಸಂಗಮರವರಿ ಕಲ್ಲಿನದೇ. ಹೊರಗೆ ನೇತಾಡುತ್ತಿದ್ದ ಫಲಕ ನೋಡಿಯೇ ಈ ಸುಂದರವಾದ ಭವನವು ಸ್ನಾನದಮನೆಯೆಂಬುದನ್ನು ಖಚಿತಪಡಿಸಿಕೊಳ್ಳಬೇಕು ನಾನು ಅನುಮಾನಿಸುತ್ತಾ ಒಳಗೆ ಕಾಲಿಟ್ಟಾಗ ಶಾಂಪುವಿನ ಸೀಸೆಗಳು, ಬೇರೆ ಬೇರೆ ಬಗೆಯ ಸೋಪುಗಳು, ಕೇಶಪ್ರಸಾಧನಗಳು ಮುಂತಾದವುಗಳನ್ನು ಕೌಂಟರಿನ ಮೇಲೆ ಅಂದವಾಗಿಟ್ಟುಕೊಂಡು ಕುಳಿತ ವ್ಯಕ್ತಿಯೊಬ್ಬ ಕಾಣಿಸಿದ. ನಾನು ಓರೆ ಅನುಮಾನಿಸುತ್ತಾ ಒಳಗೆ ಕಾಲಿಡುವುದನ್ನು ಕಂಡು ಆತನಿಗೆ ನಾನು ಹೊಸಬನೆಂಬುದು ಖಚಿತವಾಗಿರಬೇಕು. "ಬನ್ನಿ, ಬನ್ನಿ, ಏನಾಗಬೇಕು?" ಎಂದು ಮುಗುಳ್ನಗುತ್ತಾ, ತುಂಬಾ ವಿನಯದಿಂದ ಕೇಳಿದ.

"ಸ್ನಾನ," ಎಂದಿಷ್ಟೇ ನಾನು ಹೇಳಿದೆ.

"ಉಮೂಮಿಯೋ ಖುಸೂಸಿಯೋ ?" ಆತ ಮತ್ತೆ ನನ್ನನ್ನು ಕೇಳಿದ.

ಸ್ನಾನಗೃಹಕ್ಕೆ ಬರುವ ಮೊದಲು ಅಲ್ಲಿ ಎಷ್ಟು ಖರ್ಚು ತಗಲುತ್ತದೆಂದು ನನ್ನೊಬ್ಬ ಇರಾಣೀ ಮಿತ್ರನನ್ನು ಕೇಳಿದಾಗ ಆತ ಖರ್ಚಿನ ವಿವರಗಳನ್ನೆಲ್ಲಾ ಕೊಟ್ಟಿದ್ದಲ್ಲದೆ ಹೋಗುವಾಗ ಜೊತೆಗೆ ಟಾವೆಲ್ಲು, ಸೋಪು ಹಾಗೂ ಹಣಿಗೆಗಳನ್ನು ತೆಗೆದುಕೊಂಡು ಹೋಗಲು ಮರೆಯಬೇಡ ಎಂದು ಹೇಳಿದ್ದ. ಆದರೆ ಉಮೂಮಿ ಬಗೆಗಾಗಲಿ ಅಥವಾ ಖುಸೂಸಿ ಬಗೆಗಾಗಲಿ ಅವನು ಏನೂ ಹೇಳದ್ದರಿಂದ ನಾನು ವಿಚಾರ ಮಾಡದೆಯೆ 'ಉಮೂಮಿ' ಎಂದು ಕೌಂಟರಿನ ಮೇಲೆ ಕುಳಿತವನಿಗೆ ಹೇಳಿದೆ.

ಇದನ್ನು ಕೇಳಿ ಅವನ ಉತ್ಸಾಹಕ್ಕೆ ತಣ್ಣೀರೆರಚಿದಂತೆಯೆ ಆಯಿತು. ಆತ ಉಪೇಕ್ಷೆಯಿಂದ ಬಲಬದಿಗೆ ಹೋಗೆಂದು ಸನ್ನೆಮಾಡಿದ. ಒಳಗೆ ಹೋದರೆ ಹತ್ತು ಹನ್ನೆರಡು ಅಡಿ ಅಗಲವಾದ ಚಚ್ಚೌಕಾದ ಕೋಣೆ. ಮೇಲೆ ಗೋಲಾಕಾರದ ಛತ್ತು, ಕೋಣೆಯ ಮಧ್ಯದಲ್ಲಿ ಒಂದು ಚಿಕ್ಕ ಹೊಂಡ. ಅದರ ಸುತ್ತಲೂ ನೀಲಿಬಣ್ಣದ

ಹೊಳೆಯುವ ಟೈಲುಗಳನ್ನು ನೆಲಕ್ಕೆ ಹೊಚ್ಚಲಾಗಿತ್ತು. ಅದರ ಮೇಲೆ ಕೆಲ ಜನರು ನಗ್ನಾವಸ್ಥೆಯಲ್ಲೂ ಇನ್ನು ಕೆಲವರು ಅರ್ಧ ನಗ್ನಾವಸ್ಥೆಯಲ್ಲೂ ಹೆಣ ಬಿದ್ದ ಹಾಗೆ ಬಿದ್ದುಕೊಂಡಿದ್ದರು. ನಾನು ಈ ಸ್ಥಳಕ್ಕೆ ಹೊಸಬನೆಂಬುದನ್ನು ನನ್ನ ಮುಖಭಾವವನ್ನು ನೋಡಿಯೇ 'ದಲ್ಲಾಕ'ನು ಗ್ರಹಿಸಬೇಕು. (ಜೀವಂತ ವ್ಯಕ್ತಿಗಳಿಗೆ ಸ್ನಾನಮಾಡಿಸುವವರನ್ನು ದಲ್ಲಾಕನೆಂದೂ ಸತ್ತವರಿಗೆ ಸ್ನಾನಮಾಡಿಸುವವರಿಗೆ ಗುಸಪ್ಸಾಲ ಎಂದೂ ಅಲ್ಲಿನವರು ಕರೆಯುತ್ತಾರೆ). ಕೆಂಪು ಬಣ್ಣದ ಲಂಗೋಟಿಯ ಹೊರತು ಅವನ ಮೈಮೇಲೇನೂ ಇರಲಿಲ್ಲ. ಆತ ಬಂದು ನಿಂತ ರೀತಿಯನ್ನು ನೋಡಿ, ಅವನು ನನ್ನನ್ನು ತೂಗು ಹಾಕಿ ಕಟುಕನ ಹಾಗೆ ಚರ್ಮ ಸುಲಿಯುತ್ತಾನೇನೋ ಅನ್ನಿಸಿ ಎದೆ ಝಲ್ಲೆಂದಿತು.

ಕೋಣೆಯಿಂದ ಹೊರಗೋಡಿ ಬಂದೆ. ಈ ಬಗೆಯ ಸ್ನಾನ ನನ್ನ ಮನಸ್ಸಿಗೆ ಬಂದಿಲ್ಲ ಎಂದು ಕೌಂಟರಿನ ಮೇಲೆ ಕುಳಿತ ವ್ಯಕ್ತಿ ಭಾವಿಸಿರಬೇಕು. ಆತ ನನ್ನ ಕೈಯಲ್ಲಿ ಒಂದು ಟೋಕನ್ ತುರುಕಿ ಎಡಗಡೆಯ ಕೋಣೆಗೆ ಹೋಗುವಂತೆ ಹೇಳಿದ. ಒಳಗೆ ದೊಡ್ಡದೊಂದು ಕೋಣೆ. ಉದ್ದ ಮೂವತ್ತು ಅಡಿಗಳಿಗಿಂತ ಕಡಿಮೆಯಿರಲಾರದು. ಅಗಲ ಹತ್ತು ಅಡಿಗಳಿಗಿಂತಲೂ ಹೆಚ್ಚಾಗಿದ್ದಿತು. ಗೋಡೆಗೆಂಟಾ ಕುರ್ಚಿಗಳನ್ನು ಹಾಕಲಾಗಿತ್ತು. ಅದನ್ನು ನೋಡಿದವರಿಗೆ ಯಾವುದಾದರೂ ಸಮಾರಂಭಕ್ಕಾಗಿಯೇ ಇಷ್ಟು ಶಿಸ್ತಿನಿಂದ ಕುರ್ಚಿಗಳನ್ನು ಜೋಡಿಸಿದ್ದಾರೋ ಎಂಬ ಭಾವನೆ ಬರುವಂತಿತ್ತು. ಸ್ವಲ್ಪ ದೂರದಲ್ಲಿ ಚಿಕ ಚಿಕ್ಕ ಟೇಬಲ್ಲುಗಳು. ಅವುಗಳ ಮೇಲೆ ವೃತ್ತಪತ್ರಿಕೆಗಳು.

ಹೊರಗಿನ ವಾತಾವರಣ ತಂಪಾಗಿದ್ದರೂ ಒಳಗೆ ತುಂಬಾ ಸೆಕೆಯಿತ್ತು. ಸೆಕೆಯನ್ನು ತಾಳಲಾರದೆ ನಾನು ಕೋಟನ್ನು ತೆಗೆದಿಟ್ಟೆ. ಕೈಯಲ್ಲಿನ ಟೋಕನ್ನನ್ನು ಏನು ಮಾಡುವುದು ? ಅಂದುಕೊಳ್ಳುತ್ತಿರುವಾಗಲೇ ಒಬ್ಬಾತ ಒಳಬಂದ. ಸೊಂಟದ ಸುತ್ತ ಕೆಂಪು ವಸ್ತ್ರವನ್ನು ಬಿಗಿದುಕೊಂಡು ಮೈಮೇಲೆ ತುಂಡು ವಸ್ತ್ರವನ್ನು ಹೊದ್ದ ಆತ ಸೂಫಿ ಸಂತನ ಹಾಗೆ ಕಂಡಿದ್ದರಿಂದ ನಾನು ಅವನಿಗೆ ಒಂದು ಸಲಾಮು ಹೊಡೆದೆ. ಪ್ರತಿಯಾಗಿ ಆತ ಅತಿ ವಿನೀತನಾಗಿ ತಲೆತಗ್ಗಿಸಿ ಸಲಾಮು ಮಾಡಿದ. ಆತ ಸೂಫಿ ಸಂತನಲ್ಲ. ಸ್ನಾನ ಮಾಡಿಸಿ ಮೈಮೇಲಿನ ಕೊಳೆಯನ್ನು ತೆಗೆಯುವಾತ ಎಂಬುದು ಆಗಲೆ ನನಗೆ ತಿಳಿದುಬಂದಿತು.

ಸುತ್ತಲೂ ಒಮ್ಮೆ ಕಣ್ಣಾಡಿಸಿದೆ. ಒಂದು ಬದಿಯಲ್ಲಿ ಸ್ತ್ರೀಯರೂ ಇನ್ನೊಂದು ಬದಿಯಲ್ಲಿ ಪುರುಷರೂ ಕುರ್ಚಿಯಲ್ಲಿ ಆಸೀನರಾಗಿದ್ದರು. ಹೆಂಗಸರ ಸಂಖ್ಯೆ ಹತ್ತು ಹನ್ನೆರಡಕ್ಕಿಂತ ಹೆಚ್ಚಾಗಿರಲಿಕ್ಕಿಲ್ಲ. ಬಹುತರವಾಗಿ ಅವರು ಯುರೋಪಿಯನ್ ಡ್ರೆಸ್ಸನ್ನು ಧರಿಸಿದ್ದರು. ಒಬ್ಬಿಬ್ಬರು ಮಾತ್ರ ಬುರುಖಾ ಧರಿಸಿದ್ದರು.

ಪುರುಷರೆಲ್ಲ ಸುಮಾರಾಗಿ ವಯಸ್ಸಾದವರೇ ಇದ್ದರು. ವೇಷಭೂಷಣಗಳನ್ನು ನೋಡಿದಾಗ ಲಖನೌದ ಮೌಲವಿಗಳ ಹಾಗೆಯೇ ಕಾಣುತ್ತಿದ್ದರು. ಅವರ ಪೈಕಿ ಕೆಲವರು ಮೀಸೆ ಬಿಟ್ಟಿದ್ದರೆ ಇನ್ನೂ ಕೆಲವರು ಗಡ್ಡ-ಮೀಸೆಗಳನ್ನು ನುಣ್ಣಗೆ ಬೋಳಿಸಿಕೊಂಡಿದ್ದರು. ಕಾಲ ಕಳೆಯಲು ಸರಾಯಿ ಕುಡಿಯುತ್ತಾ ಯಾವ ಯಾವುದೋ ವಿಷಯದ ಬಗ್ಗೆ ಹರಟೆ ಕೊಚ್ಚುತ್ತಿದ್ದರು. ಕೈಯಲ್ಲಿ ಜಪಮಾಲೆ ಹಿಡಿದಿದ್ದರೂ ಜಪಕ್ಕೂ ಅದಕ್ಕೂ ಯಾವುದೇ ಸಂಬಂಧವಿದ್ದಂತೆ ತೋರಲಿಲ್ಲ. ಬೀಗದ ಕೈಯ ಗುಚ್ಛದೊಂದಿಗೆ ಆಡುವ ಹಾಗೆ ಅದನ್ನು ತಿರುವುತ್ತಾ ಕುಳಿತಿದ್ದರು ಅಷ್ಟೆ. ನಾನೂ ಒಂದು ಕುರ್ಚಿ ಹಿಡಿದು ಅವರೊಂದಿಗೆ ಕುಳಿತುಕೊಂಡೆ.

ಆಚೆಬದಿಯ ಕೋಣೆಯಲ್ಲಿ ಯಾರೋ ಹೊಡೆದಾಡುತ್ತಿದ್ದಂತೆ, ಚೀರುತ್ತಿದ್ದಂತೆ ಕೇಳಿಸಿದಾಗ, ಅಲ್ಲಿ ಏನು ನಡೆದಿದೆ ? ಎಂದು ಬದಿಯಲ್ಲಿ ಕುಳಿತಿದ್ದವರನ್ನು ಕೇಳಿದೆ. ಅವನು ಅದು 'ಹಮ್ಮಾಮ್–ಏ–ಜನಾನಾ' ಎಂದಿಷ್ಟೆ ಉತ್ತರಿಸಿದ. ಮೀನಿನ ಮಾರ್ಕೆಟ್ಟಿನ ಗಲಾಟೆ ಯಾರಿಗೆ ತಾನೆ ಗೊತ್ತಿಲ್ಲ ? ಮೀನಿನ ಮಾರ್ಕೆಟ್' ಅನ್ನು ನಾವು ಉಪಯೋಗಿಸುವಂತೆಯೇ ಇರಾಣಿಗಳು 'ಹಮ್ಮಾಮ್–ಏ–ಜನಾನಾ'ವನ್ನು ಉಪಯೋಗಿಸುತ್ತಾರೆ.

ಎರಡು ಎರಡೂವರೆ ತಾಸು ಕಾಯ್ದ ನಂತರ ನನ್ನ ನಂಬರು ಬಂತು. ಒಬ್ಬಾತ ಬಂದು ನನ್ನನ್ನು ಕರೆದುಕೊಂಡು ಹೋಗಿ, ಮೈಮೇಲಿನ ಬಟ್ಟೆಗಳನ್ನು ತೆಗೆದು ಹಾಕಿ ಸೊಂಟದ ಸುತ್ತಾ ಒಂದು ಅಂಗವಸ್ತ್ರವನ್ನು ಸುತ್ತಿಕೊಳ್ಳಲು ಹೇಳಿದ. ಹಾಗೆಯೆ, ನಿಮಗೆ ಕಾರ್ಮಿಕ ಬೇಕೆ ? ಎಂದು ಕೇಳಿದ. ನಾನು ಈ ಬಗ್ಗೆ ಹೆಚ್ಚು ತಲೆ ಕೆಡಿಸಿಕೊಳ್ಳದೆ, ಬೇಕು ಎಂದು ತಲೆಯಾಡಿಸಿದೆ ಆತ ಹೊರಟು ಹೋದ

ಸ್ವಲ್ಪ ಸಮಯದಲ್ಲಿ ಕಾರ್ಮಿಕ ಬಂದ. ಬಂದವನೆ, ನನ್ನ ಪ್ರಾಣವನ್ನು ತೆಗೆದುಕೊಳ್ಳುವವನಿದ್ದಾನೋ ಏನೋ ಎನ್ನುವಂತೆ ನನ್ನನ್ನು ಗಕ್ಕನೆ ಹಿಡಿದುಕೊಂಡು ನೆಲದ ಮೇಲೆ ಮಲಗಿಸಿ ಬಲವಂತವಾಗಿ ಕೈಕಾಲುಗಳನ್ನು ಹಿಡಿದೆಳೆದು ಸರಿಪಡಿಸಿದ. ಬಳಿಕ ಇಡಿ ಶರೀರದ ಮೇಲೆ ಒಂದೆರಡು ಗ್ಲಾಸಿನಷ್ಟು ನೀರು ಚೆಲ್ಲಿ ಹೊರಟು ಹೋದ.

ಅರ್ಧಗಂಟೆಯ ನಂತರ ಮರಳಿ ಬಂದಾಗ ಕೈಯಲ್ಲಿ ರೋಮಸಹಿತವಾದ ಕುರಿಯ ಚರ್ಮದ ಚೀಲ ಹಿಡಿದಿದ್ದ. ಆತ ಅದನ್ನು ಹಿಡಿದು ಶರೀರದ ಮೇಲೆಲ್ಲಾ ತನ್ನಲ್ಲಿದ್ದ ಶಕ್ತಿಯನ್ನೆಲ್ಲ ಹಾಕಿ ತಿಕ್ಕಿದ. ಚೀಲದ ತುಂಬಾ ಹೊಲಸು ಇತ್ತೋ ಅಥವಾ ನನ್ನ ಶರೀರದಲ್ಲೆ ಅಷ್ಟು ಹೊಲಸು ಇತ್ತೋ, ದೇವರಿಗೇ ಗೊತ್ತು. ಆದರೆ ಕೆಲ ಸಮಯದ ನಂತರ ಆತ ಚೀಲವನ್ನು ಹಿಂಡಿದಾಗ ಅದರಿಂದ ಹೊರ ಬಂದ ಹೊಲಸು ನೋಡಿ ನನ್ನ ಶರೀರದ ಬಗ್ಗೆಯೆ ನನಗೆ ಅಸಹ್ಯ ಬಂತು. ಇದಾದ ನಂತರ ನನ್ನ ಮೇಲೆ ಸ್ವಲ್ಪ ನೀರು ಸುರಿದು ಆತ ಹೊರಟು ಹೋದ.

ಅರ್ಧ ಗಂಟೆಯ ನಂತರ ಅವನು ಮತ್ತೆ ಮರಳಿ ಬಂದ. ಆತನ ದಾರಿ ಕಾಯ್ದು ಕಾಯ್ದು ರೋಸಿ ಹೋದ ನಾನು, "ಸ್ನಾನ ಮಾಡಿಸುವುದಿದ್ದರೆ ಬೇಗ ಮಾಡಿಸಿಬಿಡಿ. ಅರ್ಧ ಮರ್ಧ ಸ್ನಾನ ಮಾಡಿಸಿ ಮೇಲಿಂದ ಮೇಲೆ ಹೀಗೇಕೆ ಹೊರಗೆ ಹೋಗುತ್ತೀರಿ ?" ಎಂದು ಕೇಳಿದೆ. ನಾನು ಮರಳಿ ಬರುವುದರೊಳಗಾಗಿ ಶರೀರದಲ್ಲಿನ ಹೊಲಸು ಅರಳಿಕೊಂಡು ಬರಲಿ ಎಂದು ಹೊರಗೆ ಹೋಗುತ್ತೇನೆ ಎಂದು ಹೇಳಿದ. ಈ ಸಲ ಅವನು ತಂದ ಚೀಲ ಸ್ವಚ್ಛವಾಗಿತ್ತು. ಬಟ್ಟೆ ಒಗೆಯುವ ಸಾಬೂನಿನಿಂದ ಮೈಯನ್ನು ಚೆನ್ನಾಗಿ ತಿಕ್ಕಿ ಮೇಲೆ ಎರಡು ಗ್ಲಾಸು ನೀರು ಸುರಿದ. ಅನಂತರ ನಾನು ತಂದ ಸಾಬೂನನ್ನು ಇಸಿದುಕೊಂಡು ಮೈತುಂಬಾ ತಿಕ್ಕಿ, "ಇನ್ನು ನೀವೆ ಸ್ನಾನ ಮಾಡಿ ಟಾವೆಲ್ಲನ್ನುಟ್ಟುಕೊಂಡು ಕುಳಿತಿರಿ. ನಾನು ಬರುತ್ತೇನೆ," ಎಂದು ಹೇಳಿ ಮತ್ತೆ ಹೊರಗೆ ಹೊರಟು ಹೋದ.

ಅರ್ಧ ಗಂಟೆಯ ನಂತರ ಆತ ಮತ್ತೆ ಮರಳಿ ಬಂದ. ಬಂದವನೆ ಸರಕ್ಕನೆ ನನ್ನನ್ನು ನೆಲಕ್ಕುರುಳಿಸಿ ದೇಹದ ಒಂದೊಂದು ಅಂಗವನ್ನೂ ಎಳೆದಾಗ ಚಟ ಚಟ ಸಪ್ಪಳವಾಗಿ ಎಲುವುಗಳು ಪುಡಿಪುಡಿಯಾಗಿ ಹೋದಂತಾಯಿತು.

ಮೈಯನ್ನು ಹೀಗೆ ನುಗ್ಗು ಮಾಡಿದ ನಂತರ ಎದ್ದು ಬಟ್ಟೆ ಧರಿಸುವಂತೆ ಹೇಳಿದ. ಬಟ್ಟೆ ಧರಿಸಿ ಕೌಂಟರಿನ ಬಳಿ ಬರುತ್ತಲೇ ಏಳೂವರೆ ರೂಪಾಯಿಗಳ ಬಿಲ್ ಬಂತು. ಸ್ನಾನದ ಕೋಣೆಯಲ್ಲಿ ಎರಡು ಗಂಟೆ ಇದ್ದುದಕ್ಕೆ ನಾಲ್ಕು ರೂಪಾಯಿ, ಕಾರ್ಮಿಕನ ಕೂಲಿ ಎರಡು ರೂಪಾಯಿ, ಸಾಬೂನಿನಿಂದ ಸ್ವಚ್ಛಗೊಳಿಸಿದ್ದಕ್ಕಾಗಿ ಒಂದೂವರೆ ರೂಪಾಯಿ ಹೀಗೆ ಒಟ್ಟು ಏಳೂವರೆ ರೂಪಾಯಿಗಳನ್ನು ಅದರಲ್ಲಿ ತೋರಿಸಲಾಗಿತ್ತು. ಸ್ನಾನ ಮಾಡಿಸುವಾತ 'ದಲ್ಲಾಕ್' ಎಂದು ನನಗೆ ಹೇಳಲಾಗಿದ್ದರಿಂದ ನಾನು 'ದಲ್ಲಾಕ್ ದಲ್ಲಾಕ್' ಎಂದು ಆತನನ್ನು ಕೂಗಿ ಕರೆದೆ. ಇದು ಆತನಿಗೆ ಸರಿ ಬರಲಿಲ್ಲ. ಅವನು ಸ್ವಲ್ಪ ಕಟುವಾಗಿಯೆ ಹೇಳಿದ, "ರೀತಿ ನೀತಿಗಳೊಂದೂ ನಿಮಗೆ ಗೊತ್ತಿಲ್ಲ. ಕರೆಯುವುದಾದರೆ ನನ್ನನ್ನು ಆಕಾಯ್ ಕಾರಗರ್ (ಕಾರ್ಮಿಕ ಸಾಹೇಬರೆ.) ಎಂದು ಕರೆಯಬೇಕು ತಿಳಿಯಿತೆ ?" ✡

'ನವನೀತ' ಹಿಂದಿ ಡೈಜೆಸ್ಟಿನಿಂದ

# ಕರ್ನಾಟಕದ ಹನ್ನೊಂದು ಜಿಲ್ಲೆಗಳು ಕೈಗಾರಿಕೆಯಲ್ಲಿ ಹಿಂದುಳಿದಿವೆ

ASP/KSFC-4/74




## ಕೆ.ಎಸ್.ಎಫ್.ಸಿ. ಯವರು ತೀವ್ರ ಹಣಕಾಸಿನ ನೆರವಿನೊಂದಿಗೆ ಶೇಕಡ 15 ರಷ್ಟು ಸಹಾಯ ಧನವನ್ನು ಒದಗಿಸುತ್ತಾರೆ.

ಕರ್ನಾಟಕದ ಹತ್ತೊಂಬತ್ತು ಜಿಲ್ಲೆಗಳ ಪೈಕಿ, ಹನ್ನೊಂದು ಜಿಲ್ಲೆಗಳು ಕೈಗಾರಿಕೆಗಳ ಬೆಳವಣಿಗೆಗೆ ಶಕ್ಯವಾಗಿದ್ದೂ ಹಿಂದುಳಿದಿವೆ. ಆ ಹನ್ನೊಂದು ಜಿಲ್ಲೆಗಳು ಯಾವುವು ಅಂದರೆ: ಬಿದರೆ(1), ಗುಲ್ಬರ್ಗ(2), ಬಿಜಾಪುರ(3), ಬೆಳಗಾಂ(4), ಉತ್ತರ ಕನ್ನಡ(5), ಧಾರವಾಡ(6), ರಾಯಚೂರು(7), ಹಾಸನ(8), ದಕ್ಷಿಣ ಕನ್ನಡ(9) ತುಮಕೂರು(10) ಮತ್ತು ಮೈಸೂರು(11). ಈ ಜಿಲ್ಲೆಗಳಲ್ಲಿ ಕೈಗಾರಿಕೆಗಳ ಬೆಳವಣಿಗೆ ಭರದಿಂದ ಸಾಗುತ್ತಿದೆ. ಕೆ.ಎಸ್.ಎಫ್.ಸಿ. ಯವರು ಈಗಾಗಲೇ ಎರಡು ವರ್ಷದ ಅವಧಿಯಲ್ಲಿ, ಹನ್ನೊಂದು ಜಿಲ್ಲೆಗಳಲ್ಲಿನ 197 ಕೈಗಾರಿಕೆಗಳಿಗೆ ಸಹಾಯಮಾಡಿದ್ದಾರೆ. ಇಲ್ಲಿ ಕೈಗಾರಿಕೆಗಳು ರಾಜ್ಯ ಸರ್ಕಾರದ ಕರಮಾಫಿ ಸಹಾಯ ಧನ, ಸಂಶೋಧನೆಗಳು ಮತ್ತು ಸಹಕಾರಗಳಿಗೆ ಪಾತ್ರವಾಗುತ್ತವೆ.

ಕೆ.ಎಸ್.ಎಫ್.ಸಿ. ಯವರು, ಲಿಮಿಟೆಡ್ ಕಂಪನಿಗಳಿಗೆ 30 ಲಕ್ಷದವರೆಗೂ ಮತ್ತು ಖಾಸಗಿ ಒಡೆತನ, ಪಾಲುಗಾರಿಕೆ ಮತ್ತು ಇತರ ಸಂಸ್ಥೆಗಳಿಗೆ 15 ಲಕ್ಷದವರೆಗೂ ದೀರ್ಘಾವಧಿ ಸಾಲವನ್ನು ಕೊಡುತ್ತಾರೆ. ಸಾಲಗಳು ರುಪಾಯಿ ರೂಪದಲ್ಲಿ, ಮುಂದೆ ಪಾವತಿ ಮಾಡುವ ಖಾತರಿ, ಬಂಡವಾಳ ಪೀಠಿಕೆಯನ್ನು ಕೊಳ್ಳುವ ಒಪ್ಪಂದ ಮತ್ತು ವಿದೇಶಿ ವಿನಿಮಯ ಸಾಲಗಳ ರೂಪದಲ್ಲಿ ದೊರೆಯುತ್ತವೆ.

ಮೈಸೂರು, ರಾಯಚೂರು ಮತ್ತು ಧಾರವಾಡ ಜಿಲ್ಲೆಗಳಲ್ಲಿ ಸ್ಥಾಪಿಸಲ್ಪಟ್ಟ ಕೈಗಾರಿಕೆಗಳಿಗೆ, ಯೋಜನೆಯ ಬಂಡವಾಳದ ಮೊಬಲಗಿನ ಮೇಲೆ ಶೇಕಡ 15 ರಷ್ಟು ಸಹಾಯ ಧನವನ್ನು ಕೇಂದ್ರ ಸರ್ಕಾರದವರು ಕೊಡುತ್ತಾರೆ. ಮತ್ತು ರಾಜ್ಯ ಸರ್ಕಾರದವರು ಬಡ್ಡಿಯಲ್ಲಿ ಶೇಕಡ 1 ರಷ್ಟು ರಿಯಾಯಿತಿಯನ್ನು ಈ ಹನ್ನೊಂದು ಜಿಲ್ಲೆಗಳಲ್ಲಿ ಹೊಸದಾಗಿ ಪ್ರಾರಂಭವಾಗುವ ಕೈಗಾರಿಕೆಗಳಿಗೆ ಕೊಡುತ್ತಾರೆ.

1959 ರಿಂದ 1974 ರವರೆಗೆ, ಕೆ.ಎಸ್.ಎಫ್.ಸಿ.ಯವರು ರೂ 2959 ಲಕ್ಷದ ಆರ್ಥಿಕ ನೆರವನ್ನು, 1484 ಕೈಗಾರಿಕೆಗಳಿಗೆ ನೀಡಿರುತ್ತಾರೆ. ಮುಂದುವರಿಯುತ್ತಿರುವ ಜಿಲ್ಲೆಗಳ 197 ಕೈಗಾರಿಕೆಗಳಿಗೆ ರೂ. 341 ಲಕ್ಷದ ಆರ್ಥಿಕ ನೆರವು ಒದಗಿಸಲಾಗಿದೆ.

ನಿಮ್ಮ ಕೈಗಾರಿಕೆಗಳನ್ನು ಮುಂದುವರಿಯುತ್ತಿರುವ ಜಿಲ್ಲೆಗಳಲ್ಲಿ ಸ್ಥಾಪಿಸಿ. ಹೆಚ್ಚು ಮಾಹಿತಿಗೆ ದಯವಿಟ್ಟು ಬರೆಯಿರಿ.



**ಕರ್ನಾಟಕ ಸ್ಟೇಟ್ ಫೈನಾನ್ಷಿಯಲ್ ಕಾರ್ಪೊರೇಷನ್**

1/1, II ಮೆಯಿನ್ ರೋಡ್,
ಬೆಂಗಳೂರು-560 003

ಬ್ರಾಂಚ್ ಆಫೀಸ್‌ಗಳು :

- ರಾಮಗಡೇಕರ್ ಬಿಲ್ಡಿಂಗ್, (ಸೆಕೆಂಡ್ ಫ್ಲೋರ್) 1534, ಮಾರುತಿಗಲ್ಲಿ, ಬೆಳಗಾಂ 590 002
- ಕೊಡಿಯಾಲ್ ಬೈಲ್, ಪದ್ಮ ಬಿಲ್ಡಿಂಗ್, ಸೆಕೆಂಡ್ ಬ್ಲಾಕ್, ಮಂಗಳೂರು 575 003
- ನಂ. 10-2, ಸೆಕೆಂಡ್ ಫ್ಲೋರ್, ವಿಶ್ವೇಶ್ವರಯ್ಯ ಭವನ್, ಕೆ. ಆರ್. ಸರ್ಕಲ್, ಮೈಸೂರು 570 001
- ಸ್ಟೇಷನ್ ರಸ್ತೆ, ರಾಯಚೂರು 584 101

# ಬರ್ಲಿನದಿಂದ ಗಂಗೆಯ ತಡಿಗೆ

[ಭಾರತ-ಜರ್ಮನಿಗಳ ಸಂಬಂಧವನ್ನು ವೇದಗಳ ಕಾಲದ ವರೆಗೂ ಎಳೆದೊಯ್ಯುತ್ತಾರೆ. ಅದೇನೇ ಇರಲಿ, ಕಳೆದ ಒಂದು ಶತಮಾನದಿಂದ ಜರ್ಮನಿಯಂತೂ ಭಾರತದ ಸಂಸ್ಕೃತಿಯ ಕಟ್ಟಾ ಅಭಿಮಾನಿಯಾಗಿದ್ದು ಭಾರತೀಯ ಧರ್ಮ ಸಂಸ್ಕೃತಿಗಳನ್ನು ತುಂಬ ಆಸಕ್ತಿಯಿಂದ ಅಧ್ಯಯನ ಮಾಡಿ ಅರಿತುಕೊಂಡ ದೇಶ. ಇಂಥ ಜರ್ಮನಿಯಲ್ಲಿಯ ಒಂದು ಕುಟುಂಬ ಭಾರತದೊಡನೆ ಸಂಪರ್ಕ ಬೆಳೆಸಲು ತೋರಿದ ಆತುರ, ನಡೆಸಿದ ಸಾಹಸಗಳ ಕತೆಯೆ “ಬರ್ಲಿನ್ ಬಂದಿತು ಗಂಗೆಯ ತಡಿಗೆ” ಕಾದಂಬರಿಯ ವಸ್ತುವಾಗಿದೆ ಇದರ ಮೂಲ ಲೇಖಕರಾದ ಶ್ರೀ ಭಾ. ದ. ಖೇರ ಅವರು ಖ್ಯಾತ ಪತ್ರಿಕೋದ್ಯಮಿಗಳು ಅಲ್ಲದೆ ಸಾಹಿತಿಗಳೂ ಹೌದು. ಶ್ರೀ ಖೇರರು ಮರಾಠಿಯ ಕೇಸರಿ ಪತ್ರಿಕೆಯಲ್ಲಿ ಬಂದ ಕಥೆಯೊಂದರಿಂದ ಸ್ಫೂರ್ತಿ ಪಡೆದು ಜರ್ಮನಿಯ ಹೈಡಲ್‌ಬರ್ಗಕ್ಕೂ ಭೆಟ್ಟಿ ನೀಡಿ ಸನ್ನಿವೇಶಗಳ ಪ್ರತ್ಯಕ್ಷ ಪರಿಚಯ ಮಾಡಿಕೊಂಡು ಈ ಸುಂದರ ಕಾದಂಬರಿಯನ್ನು ನೀಡಿದ್ದಾರೆ. ವಿಚಾರ ಪ್ರಚೋದಕವಾದ ಈ ಮರಾಠಿ ಕಾದಂಬರಿಯನ್ನು ಸಂಗ್ರಹ ರೂಪದಲ್ಲಿ ಕನ್ನಡಿಗರಿಗೆ ನೀಡುವ ಪ್ರಯತ್ನ ಇಲ್ಲಿ ಮಾಡಲಾಗಿದೆ.]

ಜರ್ಮನಿಯೊಳಗಿನ ಪುರಾತನ ಪ್ರಸಿದ್ಧ ನಗರ ಹೈಡೆಲ್‌ಬರ್ಗ್. ಈ ನಗರದ ಮಧ್ಯದಲ್ಲಿ ಪಶ್ಚಿಮಾಭಿಮುಖವಾಗಿ ಹರಿಯುತ್ತಿದೆ ನೇಕರ ಹೊಳೆ. ಹಳೆಯ ನಗರವು ದಕ್ಷಿಣ ದಡದಲ್ಲಿದ್ದರೆ ಹೊಸ ನಗರವು ಉತ್ತರದ ದಡದಲ್ಲಿ ಹಬ್ಬುತ್ತಿದೆ. ನದಿ ದಂಡೆಗುಂಟ ಸಾಗಿರುವ ‘ಉಫರ ಸ್ಟ್ರಾಸ್’ ಹೈಡಲಬರ್ಗದ ರಾಜಮಾರ್ಗ. ‘ಪ್ರಿನ್ಸ್ ಕಾರ್ಲ’ ಈ ರಾಜಮಾರ್ಗದಲ್ಲಿಯ ನಾಮಾಂಕಿತ ಹೊಟೆಲು ನಗರಕ್ಕೆ ಬಂದವರಿಗೆಲ್ಲ ತನ್ನ ಆದರಾತಿಥ್ಯ ನೀಡುತ್ತದೆ. ಈ ಹಾಟೆಲಿನ ಆವಾರದಲ್ಲಿಯ ವ್ಹರ್ಜಿನ್ ಮೇರಿಯ ಪ್ರತಿಮೆ ಭವ್ಯವಾಗಿದೆ ಅದನ್ನು ನಿರೀಕ್ಷಿಸುತ್ತಿದ್ದಂತೆಯೆ ಹಿನ್ನೆಲೆಯಲ್ಲಿಯ ಕೋಟೆಯ ಭಗ್ನಾವಶೇಷಗಳು ಕಾಣುತ್ತವೆ ನಗರದ ಗತೇತಿಹಾಸ ಕೂಡಲೇ ಕಣ್ಮುಂದೆ ಸುಳಿದು. ಈ ಪ್ರಪಂಚದಲ್ಲಿ ಯಾವುದೂ ಸ್ಥಿರವಲ್ಲ ಎಂಬ ಭಾವನೆ ಮನಸ್ಸಿನಲ್ಲಿ ಹೊಳೆದು ಹೋಗದಿರದು

ಈ ರಾಜಮಾರ್ಗದಿಂದ ಪೂರ್ವ—ದಿಕ್ಕಿಗೆ ಸಾಗಿದಾಗ ಎಡಬದಿಗೆ ಒಂದು ಚಿಕ್ಕ ಓಣಿ ಸಿಕ್ಕುವದು. ‘ಇಂಡಿಯಾ ಸ್ಟ್ರಾಸ’ (ರಸ್ತೆ) ಎಂದು ಅದಕ್ಕೆ ಹೆಸರು. ಭಾರತೀಯ ಸಂಸ್ಕೃತಿಯ ಅಭಿಮಾನಿಗಳಾದ ಬಹಳಷ್ಟು ಜರ್ಮನ್ನರು ಈ ಓಣಿಯಲ್ಲಿ ವಾಸಿಸುತ್ತಾರೆಂದೇ ಇದಕ್ಕೆ ಇಂಡಿಯಾ ಸ್ಟ್ರಾಸ್ ಎಂಬ ಹೆಸರು ಬಂದಿದೆ ಇವರಲ್ಲಿ ಗೀತಾ ನಿತ್ಯಪಾಠ ನಡೆಯುತ್ತದೆ. ಉಪನಿಷತ್ತುಗಳ ಪರಿಚಯ ಇವರಿಗಿದೆ ಇವರು ತಮ್ಮ ಕ್ರಿಸ್‌ಮಸ್ ಹಬ್ಬ ಆಚರಿಸುವ ಮಾತು ಬಿಟ್ಟು ಕೃಷ್ಣಾಷ್ಟಮಿಯನ್ನು ಸಂಭ್ರಮದಿಂದ ಆಚರಿಸುತ್ತಾರೆ

ಇವರ ಕವಿ ಗಟಿಯು ಕಾಳಿದಾಸನ ಶಾಕುಂತಲವನ್ನು ತನ್ನ ತಲೆಯ ಮೇಲಿಟ್ಟುಕೊಂಡು ಕುಣಿದಾಡಿದ್ದರಿಂದ ಇವರೂ ಭವಭೂತಿ ಕಾಳಿದಾಸರನ್ನು ಶಿರಸಾವಹಿಸಿಕೊಂಡು ಗೌರವಿಸುತ್ತಾರೆ.

ಇದೇ ಓಣಿಯಲ್ಲಿ ಮ್ಯೂಲರರ ಕುಟುಂಬ ಅಗ್ರಸ್ಥಾನದಲ್ಲಿತ್ತು. ಸಾಯಂ ಸಂಧ್ಯಾಕಾಲಕ್ಕೆ ಅವರ ಮನೆಯಲ್ಲಿ ಗೀತೆಯ ಎರಡನೇ ಅಧ್ಯಾಯದ ಪಠಣ ತಪ್ಪದೆ ನಡೆಯುತ್ತಿತ್ತು. ಅವರಿಗೆ ಯಾರಾದರೂ ಮ್ಯೂಲರರ ಮನೆಯ ದಾರಿ ಕೇಳಿದರೆ "ವೇದೋಪನಿಷತ್ತುಗಳ ಗಿಳಿಪಾಠ ಎಲ್ಲಿ ಅಖಂಡವಾಗಿ ನಡೆಯುವದೋ ಅದೇ ಮ್ಯೂಲರರ ಮನೆ ಎಂದು ತಿಳಿ" ಎಂದವರು ಹೇಳಬಹುದಿತ್ತು.

ಮ್ಯೂಲರರ ಮನೆಗೆ ಇನ್ನೂ ಕೆಲವು ಗುರುತಿನ ಕುರುಹುಗಳಿದ್ದವು. ಕಾವಿ ಬಣ್ಣದ ಇಟ್ಟಿಗೆಗಳ ಸಾದಾಕಟ್ಟಡ ಅವರ ಮನೆ, ಅಲ್ಲಿ ಅವರ ಮನೆಯ ಕೆಳಗಡೆಯ ಡಿಟ್‌ಮಾರ್ ಓಟ್ಟೊಮಾನ್ ಇಟ್ಟಿದ್ದ ಅಂಗಡಿಯಲ್ಲಿ ಭಾರತೀಯ ವಸ್ತುಗಳು-ದೇವತೆಗಳ ಪ್ರತಿಮೆಗಳು, ನಾನಾತರದ ದೀಪಗಳು, ಚಿತ್ರಗಳು, ಪೀಠೋಪಕರಣಗಳು. ಅಷ್ಟೇಕೆ, ಗಂಗಾಜಲ ಕೂಡ ದೊರೆಯುತ್ತಿದ್ದವು.

ವ್ಯಾನ್‌ಫ್ರೆಡ್ ಮ್ಯೂಲರರ ಹೈಡಲ್‌ಬರ್ಗ ವಿದ್ಯಾಪೀಠದಲ್ಲಿ ಭಾರತೀಯ ಸಂಸ್ಕೃತಿಯ ಪ್ರಾಧ್ಯಾಪಕನಾಗಿ ದೀರ್ಘಕಾಲ ಸೇವೆಸಲ್ಲಿಸಿ ನಿವೃತ್ತನಾಗಿದ್ದಾನೆ. ಅವರ ಮಗ ಫ್ರಾಂಜ್ ಅದೇ ವಿದ್ಯಾಪೀಠದಲ್ಲಿ ತಂದೆಯ ಸ್ಥಾನದಲ್ಲಿಯೆ ಪ್ರಾಧ್ಯಾಪಕನಾಗಿ ನೇಮಕಹೊಂದಿದನು. ಏನರ್ಜ ನಾರ್ಡ್ ಎಂಬವಳು ಅದೇ ವಿಶ್ವವಿದ್ಯಾಲಯದಲ್ಲಿ ಫ್ರಾಂಜನ ವಿದ್ಯಾರ್ಥಿನಿಯಾಗಿದ್ದಳು. ಪ್ರಪಂಚದ ತತ್ವಜ್ಞಾನಗಳ ತುಲನಾತ್ಮಕ ಅಭ್ಯಾಸ ಆಕೆಯ ವಿಷಯವಾಗಿತ್ತು. ಹೀಗಾಗಿ ಫ್ರಾಂಜನ ವಿದ್ಯಾರ್ಥಿನಿಯೂ ಆಕೆ ಆಗಿದ್ದಳು.

ಫ್ರಾಂಜ ಮ್ಯೂಲರರ ತನ್ನ ಮೊದಲನೆ 'ಕ್ಲಾಸ'ನ್ನು ತೆಗೆದುಕೊಳ್ಳಲೆಂದು ವರ್ಗಕ್ಕೆ ಹೋದುದು ಇನ್ನೇನು ಉಪನ್ಯಾಸ ಪ್ರಾರಂಭಿಸಬೇಕೆನ್ನುವಷ್ಟರಲ್ಲಿ ಅವರಿಗೆ ಫೋನ್ ಕರೆ ಬಂತು. ಅವನು ಧಾವಿಸಿ ಹೊರಬರುವದಕ್ಕೂ ತಡಮಾಡಿಬಂದ ಏನರ್ಜ ಒಳನುಗ್ಗುವದಕ್ಕೂ ಸರಿಹೋಯಿತು. ಬಾಗಿಲಲ್ಲಿ ಇವರಿಬ್ಬರ ಡಿಕ್ಕಿಯಾಯಿತು. "ಸರ್ವಧರ್ಮಗಳ ಸಮ್ಮಿಲನವಾಯಿತು" ಎಂದು ವಿದ್ಯಾರ್ಥಿಗಳು ಕೂಗಿಕೊಂಡರು.

ಫ್ರಾಂಜ ತಿರುಗಿ ಬಂದಾಗ ಮುಖದಲ್ಲಿ ಇನ್ನೂ ನಾಚಿಕೆ ಇತ್ತು. ಏನರ್ಜ ಪುಸ್ತಕದಲ್ಲಿ ಮುಖ ಹುದುಗಿಸಿದ್ದಳು.

"ಆಗ ನಡೆದ ಘಟನೆ ನೀವೆಲ್ಲ ನೋಡಿದಿರಿ. ಆ ಬಗ್ಗೆ ನೀವು ಮಾಡಿದ ಪ್ರಲಾಪವನ್ನೂ ನಾವಿಬ್ಬರು ಕೇಳಿದೆವು" ಎಂದು ಫ್ರಾಂಜ ಪ್ರಾರಂಭಿಸಿ. "ಭಿನ್ನ ಧರ್ಮಗಳ ಸಮ್ಮಿಲನವಾದರೂ ಭಿನ್ನ ವ್ಯಕ್ತಿಗಳ ಮಿಲನ ಆಗುವದೆಂಬ ನೇಮವಿಲ್ಲ. ಯಾಕೆಂದರೆ ಧರ್ಮಗಳ ಮಿಲನದ ನಿಯಮಗಳೇ ಬೇರೆ, ವ್ಯಕ್ತಿಗಳ ಮಿಲನದ ನಿಯಮಗಳೇ ಬೇರೆ. ಎರಡು ಭಿನ್ನ ಪ್ರಕೃತಿಯ ಧರ್ಮಗಳ ಮಿಲನ ಒಂದು ವೇಳೆ ಆಗಬಹುದು. ಆದರೆ ಎರಡು ಭಿನ್ನ ವ್ಯಕ್ತಿಗಳ ಮಿಲನವೆಂದಿಗೂ ಆಗಲಾರದು" ಎಂದು ಏನರ್ಜಳತ್ತ ನೋಡಿದನು. ನಾಲ್ಕು ಕಣ್ಣುಗಳು ಕೂಡಿದವು ಮಾತ್ರ ಅವಳಿಗೆ ಎಲ್ಲ ಅರ್ಥವಾಯಿತು

ಫ್ರಾಂಜನಿಗೆ ತಂದೆಯಂತೆಯೆ ಭಾರತೀಯ ಧರ್ಮದ ಹುಚ್ಚು ಇದ್ದರೆ ಸಕಲ ಧರ್ಮಗಳ ವ್ಯಾಸಂಗದಲ್ಲಿ ತೊಡಗಿದ್ದ ಏನರ್ಜಳಿಗೆ ಯಾವದೊಂದರ ಬಗ್ಗೆ ಆತ್ಮೀಯತೆ ಇರಲಿಲ್ಲ

ಹಿಂದೂ ಧರ್ಮವು ಒಂದು ದೀಪಸ್ತಂಭದಂತೆ ಇದೆ ಎಂದು ಫ್ರಾಂಜ ಹೇಳಿದರೆ ಅದರ ಬುನಾದಿಯೆ ಕುಸಿದಿದೆ ಎಂದು ಏನರ್ಜ ವಾದಿಸುತ್ತಿದ್ದಳು. ಆಗ ಫ್ರಾಂಜ "ಅವರವರ ಭಾವಕ್ಕೆ ತಕ್ಕಂತೆ ದೇವರಿರುವನು. ಹಿಂದೂ ಧರ್ಮ ಈ ಸಿದ್ಧಾಂತವನ್ನು ಹೇಳುತ್ತದೆ ಒಬ್ಬ ಕಲ್ಲಿನಲ್ಲಿ ದೇವರನ್ನು ಕಾಣಬಹುದು. ಇನ್ನೊಬ್ಬ ಮರದಲ್ಲಿ ಕಾಣಬಹುದು ನಿನ್ನಂಥವರಿಗೆ! ಇರಲಿ, ಯಾರೂ ಯಾರನ್ನೂ ದೂಷಿಸಬಾರದು. ಹಿಂದೂಧರ್ಮ ನಿಜ

ವಾಗಿಯೂ ದೀಪಸ್ತಂಭದಂತೆಯೇ ಇದೆ" ಎಂದು ಆಕೆಗೆ ಮನವರಿಕೆ ಮಾಡಿಸಲು ಪ್ರಯತ್ನಿಸುತ್ತಿದ್ದನು:

"ನಮ್ಮಿಬ್ಬರ ಪ್ರಕೃತಿ ಭಿನ್ನ. ನಮ್ಮಲ್ಲಿ ಒಮ್ಮತ ಆಗಲಾರದು." ಎಂದು" ಏರ್ನಾಳ ಮಾರುತ್ತರ.

ಇಂಥ ಉತ್ತರದಿಂದ ಫ್ರಾಂಜ ಮನಸ್ಸಿನಲ್ಲಿಯೇ ಮುದುಡಿ ಹೋಗುತ್ತಿದ್ದ. ಅವರೊಂದಿಗೆ ತುಸು ಹೊಂದಿಕೊಳ್ಳಲಿಕ್ಕಾಗಲಿಕ್ಕಿಲ್ಲವೇ ಎಂದೂ ಆಕೆಗೆ ಅನಿಸುತ್ತಿತ್ತು.

ಏರ್ನಾ ಕಾಯಿಲೆಯಿಂದಿದ್ದಾಳೆ ಎಂಬುದನ್ನು ಕೇಳಿದ ಫ್ರಾಂಜ್ ಆಕೆಯನ್ನು ಕಾಣಲು ಆಕೆಯ ಮನೆಗೆ ಹೋದ. ಏರ್ನಾಳ ತಂದೆ-ತಾಯಿ ಇಬ್ಬರೂ ಒಂದು ಚರ್ಚಿನ ಮೇಲ್ವಿಚಾರಣೆಯ ಕೆಲಸದಲ್ಲಿದ್ದುದರಿಂದ ಆಗ ಅವರು ಮನೆಯಲ್ಲಿರಲಿಲ್ಲ. ಮಲಗಿದ್ದಲ್ಲಿಯೇ ಏರ್ನಾ ಕುಡಿಯಲು ನೀರು ಕೇಳಿದಳು. ಫ್ರಾಂಜ ನೀರು ಕೊಟ್ಟನು. ಫ್ರಾಂಜನನ್ನು ಕಂಡ ಏರ್ನಾಳಿಗೆ ಆಶ್ಚರ್ಯ!

ಮೈಯಲ್ಲಿ ಜ್ವರ ಎಷ್ಟಿದೆ! ಯಾರೂ ಇಲ್ಲವೆ ನಿನ್ನ ಬಳಿ ಕುಳಿತಿರಲು?" ಎಂದ ಫ್ರಾಂಜ.

"ನೀವಿದ್ದೀರಲ್ಲ." ಎಂದಳು ಏರ್ನಾ. ಇಬ್ಬರಿಗೂ ಬೇಕಾದದ್ದೇ ಘಟಿಸುತ್ತಿತ್ತು.

"ನಿಮಗೆ ಹೇಗೆ ಗೊತ್ತಾಯಿತು ನನಗೆ ಕಾಯಿಲೆ ಎಂದು?"

"ನೀನು ನಾಲ್ಕೈದು ದಿನ ಕ್ಲಾಸಿಗೆ ಬರಲಿಲ್ಲ. ಸಹಜವಾಗಿ ವಿಚಾರಿಸಿದೆ, ಗೊತ್ತಾಯಿತು. ಕೂಡಲೇ ನಿನ್ನನ್ನು ನೋಡಲೆಂದು ಇಲ್ಲಿಗೆ ಬಂದೆ."

ಈ ಮೊದಲೂ ಅವನು ಏರ್ನಾಳ ಮನೆಗೆ ಬಂದಿದ್ದ. ಆದರೆ ಆಗ ಕಾಲವೆಲ್ಲ ವಾದದಲ್ಲಿ ಕಳೆದು ಹೋಗಿತ್ತು. ಎಷ್ಟೋ ಹೊತ್ತು ವಾದಿಸಿ ಕೊನೆಗೆ ನಮ್ಮದು ಒಮ್ಮತ ಆಗಲಾರದೆಂದು ಎಂದುಕೊಂಡು ಅವರು ಅಗಲಿದ್ದರು. ಈ ಸಲ ಏರ್ನಾಳನ್ನು ನೋಡಲು ಬಂದಾಗ ಅನುಕಂಪದ ಭಾವನೆಗಳೇ ತುಂಬಿಕೊಂಡಿದ್ದವು ಫ್ರಾಂಜನಲ್ಲಿ. ಅಷ್ಟೇ ಅಲ್ಲ. ಆತ ಆಕೆಯನ್ನು ನೋಡಲೆಂದು ಮುಂದೆ ಪದೇ ಪದೇ ಬರುತ್ತಿದ್ದ. ಅವರಲ್ಲಿ ಧರ್ಮದ ಬಗೆಗೆ ವಿವಾದಗಳು ನಡೆಯುತ್ತಿದ್ದರೂ ಅವರ ಮನಸ್ಸುಗಳು ಮಾತ್ರ ಕೂಡುತ್ತ ನಡೆದಿದ್ದವು. ಫ್ರಾಂಜನೊಡನೆ ತಾನು ನಡೆಸುವ ವಾದ ಮೇಲುಮೇಲಿನದು. ಅವನಿಗೆ ಹಿಂದೂ ಧರ್ಮವೇ ಶ್ರೇಷ್ಠ ಇರಲಿ, ತನಗೆ ಕ್ರಿಶ್ಚನ್ ಧರ್ಮವೇ ಶ್ರೇಷ್ಠವಿರಲಿ; ಅದರಲ್ಲೇನಿದೆ; ಹಿಂದೂಧರ್ಮವು ಸಹಿಷ್ಣುವಾಗಿದೆಂದು ಫ್ರಾಂಜ ಅನ್ನುತ್ತಲೇ ಇರುತ್ತಾನೆ, ಅಂದಾಗ...

ಫ್ರಾಂಜನಿಗೆ ೩೫ ವರ್ಷವಾಗಿದ್ದರೂ ವಿವಾಹದ ವಿಚಾರ ಮಾಡಲು ಆತನಿಗೆ ಅವಕಾಶವೇ ದೊರೆತಿರಲಿಲ್ಲ. ತಂದೆಯಿಂದ ಹಿಂದೂ ಧರ್ಮವನ್ನು ಆತ್ಮಸಾತ್ ಮಾಡಿಕೊಳ್ಳುವಲ್ಲಿಯೇ ಆತನ ಆಯುಷ್ಯ ಕಳೆದಿತ್ತು. ಏರ್ನಾಳಿಗೆ ಇನ್ನೂ ಇಪ್ಪತ್ತು ವಯಸ್ಸು. ದಂಪತಿಗಳ ವಯಸ್ಸಿನಲ್ಲಿ ಅಂತರ ಹೆಚ್ಚಿದಷ್ಟು ಗಾರ್ಹಸ್ಥ್ಯ ಜೀವನ ಅಧಿಕ ಸುಖಮಯವಾಗುತ್ತದೆ ಎಂದು ಏರ್ನಾ ಎಲ್ಲಿಯೋ ಓದಿದ್ದಳು. ಅದರಲ್ಲಿಯೂ ಏರ್ನಾ ಕಾಯಿಲೆ ಬಿದ್ದಾಗ ಫ್ರಾಂಜ್ ತೋರಿದ ಸಹಾನುಭೂತಿ ಅವರನ್ನು ಪರಸ್ಪರ ಗಾಢವಾಗಿ ಆಕರ್ಷಿಸಿತು.

ಒಂದಿನ ಮಾತಿಗೆ ಮಾತು ಬಂದಾಗ "ಫ್ರಾಂಜ್, ನಿಜ ಹೇಳಲಿ. ನೀವು ನನ್ನನ್ನು ಪೂರ್ತಿ ಗೆದ್ದಿದ್ದೀರಿ" ಎಂದಳು

"ನೀನೂ ನನ್ನನ್ನು ಗೆದ್ದಿರುವಿ" ಎಂದು ಮೆಲು ನಗೆಯಿಂದಲೇ ಫ್ರಾಂಜ್ ಉತ್ತರಿಸಿದ.

ಹೀಗಾಗಿ ಅವರ ವಿವಾಹವಾಗಲು ತಡವಾಗಲಿಲ್ಲ.

*

ತಂದೆ ಮತ್ತು ಮಗ—ಮ್ಯಾನ್‌ಫ್ರೆಡ್ ಮತ್ತು ಫ್ರಾಂಜ್—ಇವರಿಗೆ ಹಿಂದೂ ಧರ್ಮದ ಪ್ರಸಾರ ಮಾಡುವುದೆಂದರೆ ಎಲ್ಲಿಲ್ಲದ ಹುರುಪು. ಮ್ಯಾನ್‌ಫ್ರೆಡ್‌ನಂತೂ ಈಗ ವಿರಾಮ ಜೀವಿ. ತನ್ನ ಸಕಲ ಅವಕಾಶವನ್ನೂ ಹಿಂದೂ ಧರ್ಮದ ಪ್ರಚಾರಕ್ಕಾಗಿ ಉಪಯೋಗಿಸುತ್ತಿದ್ದ. ಫ್ರಾಂಜ್ ತನ್ನ ಹೆಂಡತಿ ಏರ್ನಾಳನ್ನು ಹಿಂದೂ ಧರ್ಮದತ್ತ ಒಲಿಸಿಕೊಳ್ಳಲು ಉಪನ್ಯಾಸಗಳನ್ನೇ ಬಿಗಿಯುತ್ತಿದ್ದ.

"ಮುಗಿಯಿತೇ ನಿಮ್ಮ ಉಪನ್ಯಾಸ? ನಿಮಗೆ ಇದರಿಂದ ಸ್ವರ್ಗ ಸಿಗಬಹುದು. ಆದರೆ ನನಗೆ ಮಾತ್ರ ನರಕವಾಗಿದೆ" ಎಂದು ಆಕೆ ಸಿಡಿಮಿಡಿ ಹಾರುತ್ತಿದ್ದಳು.

"ಹಾಗಲ್ಲ. ತಿಳಿಸಿ ಹೇಳಿ ಮನವೊಲಿಸಿ ಕೊಳ್ಳಲು ಪ್ರಯತ್ನಿಸಬೇಕು."

"ಆ ತತ್ವ ನಿಮಗೆ ಅನ್ವಯಿಸುವದಿಲ್ಲವೆಂದು ತೋರುತ್ತದೆ. ಫ್ರಾಂಜ್ ನಿರುತ್ತರ...

"ನೀವು ಏಕಾದರೂ ಲಗ್ನವಾದಿರೋ? ಯಾರಿಗೆ ಗೊತ್ತು."

"ವಂಶವೃದ್ಧಿಗಾಗಿ! ಅಪುತ್ರಸ್ಯ ಗತಿಃ ನಾಸ್ತಿ ಎಂದು ಹಿಂದೂ ಧರ್ಮದಲ್ಲಿ ಹೇಳಿದೆ."

"ಇದಕ್ಕಿಂತ ವಂಶ ಕಡಿದು ಹೋದರೂ ಅಡ್ಡಿಯಿಲ್ಲ. ಈ ಮನೆಯಲ್ಲಿ ಮಾತ್ರ ಇದೇ ನಡೆಯಬಹುದಲ್ಲವೇ? ಹುಟ್ಟುವ ಮಗ ಮಾತ್ರ ನಿಮ್ಮ ಹಿಂದೂ ಧರ್ಮದ ಹಾದಿಗೇ ಹತ್ತುವ ನಲ್ಲವೇ? ಅದರ ಬದಲು ನಾನು ಬಂಜೆಯಾದರೂ ಅಡ್ಡಿಯಿಲ್ಲ." ಎಂದು ಕೆರಳಿ ನುಡಿದಳು.

"ಸಮವಧುವಿನ ಭಾವನೆಗಳನ್ನು ಹೇಗೆ ಹೊಸಗಿಹಾಕಬೇಕು ಎಂದು ಹೇಳಿದೆಯೋ ನಿಮ್ಮ ಹಿಂದೂ ಧರ್ಮದಲ್ಲಿ? ಇಂಥ ಬರಡು ಜೀವನ ಸಾಕು." ಎಂದು ಏರ್ನಾ ಕುಸಿದಳು.

ಆಗ ಫ್ರಾಂಜ್‌ನಿಗೆ ಗೊತ್ತಾಯಿತು ಏರ್ನಾಳನ್ನು ಹೇಗೆ ಸಂತೈಸಬೇಕು ಎಂಬುದು. ಆತನ ಅಪ್ಪುಗೆಯಲ್ಲಿ ಏರ್ನಾ ಶಾಂತಳಾದಳು.

ಏರ್ನಾಳ ಮಗ ಮ್ಯಾನ್‌ಫ್ರೆಡ್‌ನಿಗೆ ಸ್ವಾಮಿ ವಿವೇಕಾನಂದರಿಂದ ಗೀತಾಗ್ರಂಥ ಹಾಗೂ ಶಂಕರರ ಪುಟ್ಟಮೂರ್ತಿ ಕಾಣಿಕೆಯಾಗಿ ದೊರೆತಿದ್ದವು. ಸ್ವಾಮಿ ವಿವೇಕಾನಂದರು ಮ್ಯಾಕ್ಸಮುಲ್ಲರರ ಜೊತೆಯಲ್ಲಿ ಜರ್ಮನಿಯನ್ನು ಸಂದರ್ಶಿಸಿದಾಗ ಮ್ಯಾನ್‌ಫ್ರೆಡ್‌ನಿಗೆ ಅವರನ್ನು ಭೆಟ್ಟಿಯಾಗುವ ಯೋಗ

ಲಭಿಸಿತ್ತು. ಅವರಿಂದ–ದೊರೆತ ಆ ಎರಡೂ ಕಾಣಿಕೆಗಳನ್ನು ಮ್ಯಾನ್‌ಫ್ರೆಡ್ ಪ್ರಾಣಪ್ರಿಯವಾಗಿ ಕಾಪಾಡಿಕೊಂಡು ಬಂದಿದ್ದ.

ಏರ್ನಾ ಮ್ಯೂಲರ ಕುಟುಂಬಕ್ಕೆ ಬಂದ ನಂತರ ಮ್ಯಾನ್‌ಫ್ರೆಡ್ ತನ್ನ ಮನೆಯಲ್ಲಿ ಒಮ್ಮೆ ಕೃಷ್ಣಾಷ್ಟಮಿ ಉತ್ಸವ ಆಚರಿಸಿದ. ಸಂಭ್ರಮದಿಂದ ನಡೆದ ಆ ಉತ್ಸವ ಮುಗಿಯಬೇಕಾದರೆ ಮಧ್ಯರಾತ್ರಿ ಮೀರಿ ಹೋಯಿತು. ಏರ್ನಾ ಈ ಸಮಾರಂಭದಲ್ಲಿ ಭಾಗವಹಿಸದೆ ಸಿಡಿಮಿಡಿಗೊಳ್ಳುತ್ತ ತನ್ನ ಕೋಣೆಯಲ್ಲಿಯೇ ಇದ್ದಳು. ಉತ್ಸವ ಪೂರೈಸಿದ ನಂತರ ಫ್ರಾಂಜ್ ಕೋಣೆಗೆ ಬಂದು

"ಅಸ್ವಾಸ್ಥ್ಯವೇ, ಇಂದು ನೀನು ಹೀಗೇಕೆ ಇದ್ದಿ?" ಎಂದು ಏರ್ನಾಳನ್ನು ಕೇಳಿದ.

"ಭಾರತದ ಮಂದಿಗೆ ಮಾಟಮೋಡಿ ಮಾಡಲು ಬರುತ್ತದಂತೆ. ನಿಮಗೆ ತಂದೆ–ಮಕ್ಕಳಿಗೆ ಯಾರೋ ಹಾಗೆ ಮೋಡಿ ಮಾಡಿರಬೇಕು. ಚಿನ್ನದಂಥ ತಮ್ಮ ಧರ್ಮ ಬಿಟ್ಟು ಪರಧರ್ಮದ ಸ್ತುತಿ ನಮ್ಮಲ್ಲೇಕೆ ಬೇಕು! ನಿಮ್ಮ ಈ ಹಿಂದೂಧರ್ಮದ ಹುಚ್ಚು ನನಗೆ ಮದುವೆಗೆ ಮೊದಲೇ ತಿಳಿದಿದ್ದರೆ?"

"ಇದ್ದಿದ್ದರೆ ನನ್ನೊಡನೆ ಮದುವೆಯೇ ಆಗುತ್ತಿರಲಿಲ್ಲ" ಎಂದ ಫ್ರಾಂಜ್ ಶಾಂತವಾಗಿ.

"ಇಂಥ ತಾಳ್ಮೆ ನಿಮಗೆ ಯಾರು ಕಲಿಸಿದರು?"

"ಹಿಂದು ಧರ್ಮವೇ"

"ಈ ನಿಮ್ಮ ಹಿಂದೂಧರ್ಮದ ಹುಚ್ಚು ಒಂದಿನ ನನ್ನ ಘಾತಮಾಡುವದು. ನನ್ನ ಎಲ್ಲ ಬಾಳು ಹಾಳುಮಾಡುವದು. ಒಮ್ಮೊಮ್ಮೆ ಅನಿಸುತ್ತದೆ ಈ ನಿಮ್ಮ ದೇವರ ಕಾಲಲ್ಲಿ ಈ ತಲೆ ಜಜ್ಜಿಕೊಂಡು ಜೀವಕೊಟ್ಟು ಈ ಎಲ್ಲ ಆಟವನ್ನು ಒಮ್ಮೆ ಹಾಯಾಗಿ ಮುಗಿಸಿ ಬಿಡಬೇಕು ಎಂದು."

ಫ್ರಾಂಜ್ ಮ್ಯೂಲರ ಶಾಂತನಾಗಿಯೇ ಆಕೆಯ ಬೆನ್ನ ಮೇಲೆ ಕೈಯಾಡಿಸಹತ್ತಿದನು. ಆಗ ಕಣ್ಣೀರನ್ನು ತಡೆಯುವದು ಏರ್ನಾಳಿಗೆ ಆಗಲಿಲ್ಲ.

ಮದುವೆಯಾದ ಎರಡು ವರ್ಷಕ್ಕೆ ಏರ್ನಾ ಪುತ್ರವತಿಯಾದಳು. ಅದೂ ಗೋಕುಲಾಷ್ಟಮಿಯ ದಿನವೇ. ಮಗುವಿಗೆ ಹೆಸರು ಏನಿಡಬೇಕು ಎಂಬ ಬಗೆ ಮನೆಯಲ್ಲಿ ಚರ್ಚೆ ಪ್ರಾರಂಭವಾಯಿತು.

ತನ್ನ ಮಗನಿಗೆ ಗೋಕುಲಾಷ್ಟಮಿ ದಿನದಂದೇ ಪುತ್ರೋತ್ಸವ ಆಗಬೇಕೆಂದರೆ ಪೂರ್ವಜನ್ಮ ಪುಣ್ಯ ವಿಶೇಷವಾಗಿರಬೇಕು. ಆದ್ದರಿಂದ ಆತನಿಗೆ ಮುಕುಂದ ಎಂದು ಹೆಸರಿಡಬೇಕು ಎಂದು ಮ್ಯಾನ್‌ಫ್ರೆಡ್ ಆಗ್ರಹ ಹಿಡಿದ. ಶ್ರೀಕೃಷ್ಣನೇ ತನ್ನ ಮನೆಯಲ್ಲಿ ಅವತರಿಸಿದ್ದಾನೆ ಎಂದೇ ಆ ವೃದ್ಧ ಪ್ರೊಫೆಸರನ ಭಾವನೆ. "ನೋಡಿ ಈತ ರೋಹಿಣಿ ನಕ್ಷತ್ರದಲ್ಲಿಯೇ ಹುಟ್ಟಿರುವದರಿಂದ ಈತ ಸಾಕ್ಷಾತ್ ಕೃಷ್ಣನೇ ಹೌದು" ಎಂದೂ ಪ್ರತಿಪಾದಿಸಿದರು.

ಏರ್ನಾ ಮಾತ್ರ ಇದಕ್ಕೆ ಎಂದಿಗೂ ಒಪ್ಪಲಿಲ್ಲ. ಆಕೆಯು ತನ್ನ ಮಗುವಿಗೆ ಅಲ್ಬರ್ಟ ಎಂದೇ ನಾಮಕರಣ ಮಾಡಿದಳು ಮತ್ತು ಮುದ್ದಿನಿಂದ ಅಲ್ಬಾ ಎಂದೇ ಆತನನ್ನು ಕರೆಯತೊಡಗಿದಳು. ಆದರೂ ಮ್ಯಾನ್‌ಫ್ರೆಡ್‌ನಿಗೆ ಆತ ಮುಕುಂದನಾಗಿದ್ದ.

"ಕೃಷ್ಣಜನ್ಮವಾದಾಗ ದಶದಿಕ್ಕುಗಳು ಪ್ರಸನ್ನವಾದವು, ದೇವದುಂದುಭಿಗಳು ಮೊಳಗಿದವು, ಗಂಧರ್ವರು ಹಾಡಿದರು, ಅಪ್ಸರೆಯರು ನರ್ತಿಸಿದರು. ಇಡೀ ಜಗತ್ತಿನಲ್ಲಿ ಆನಂದ ತುಂಬಿ ತುಳುಕಾಡಿತು. ಈಗ ನನ್ನ ಮನೆಯಲ್ಲಿಯೂ ಇದೇ ಆಗಲಿದೆ. ಏಕೆಂದರೆ, ನಮ್ಮ ಮನೆಯಲ್ಲಿಯೂ ಕೃಷ್ಣ ಜನ್ಮವಾಗಿದೆ ಎಂದು ಮ್ಯಾನ್‌ಫ್ರೆಡ್ ತನ್ನ ಮೊಮ್ಮಗನ ಕೌತುಕ ಮಾಡುತ್ತಿದ್ದ. ಮಾವನ ಈ ಅರೆಮರುಳನ್ನು ಕಂಡು ಏರ್ನಾಳಿಗೆ ಕಸಿವಿಸಿಯಾಗುತ್ತಿತ್ತು.

ಅಲ್ಬರ್ಟನಲ್ಲಿ ಮ್ಯೂಲರ್ ವಂಶದ ಗುಣಗಳೇ ಇಳಿದು ಬಂದಿದ್ದವು. ಒಂದು ಸಂಜೆ ಮನೆಯಲ್ಲಿ ಯಾರೂ ಇಲ್ಲದ ಸಮಯ. ಏರ್ನಾ ಒಳಗೆ ಕೆಲಸದಲ್ಲಿ ಇದ್ದಳು. ಅಲ್ಬರ್ಟ ತನ್ನ ಅಜ್ಜನ ಕೋಣೆಯಲ್ಲಿ ನುಸುಳಿ ಧ್ಯಾನಸ್ಥ ಶಂಕರನ ಮೂರ್ತಿಯ ಎದುರು ಕುಳಿತು, ಅದರಂತೆ ಪದ್ಮಾಸನ ಹಾಕಿ ಆ ಮೂರ್ತಿಯನ್ನೇ

ನೋಡುತ್ತ, ಧ್ಯಾನಸ್ಥನಾಗಿ ಕಣ್ಣುಮುಚ್ಚಿದನು. ಮಗು ಕಾಣಲಿಲ್ಲ ಎಂದು ಹುಡುಕಿಕೊಂಡು ಬಂದ ಏನ್ಸ್‌ಳಿಗೆ ಈ ದೃಶ್ಯದಿಂದ ಬವಳಿ ಬಂದಂತಾಯಿತು. ಅಂತಃಕರಣ ತತ್ತರಿಸಿತು. ಅವಳ ದೃಷ್ಟಿಯಲ್ಲಿ ಈ ಮೂರನೇ ಪೀಳಿಗೆಯೂ ಹಿಂದೂ ಧರ್ಮದ ಹುಚ್ಚಿಗೆ ಬಿದ್ದು ವ್ಯರ್ಥವಾಗುತ್ತಲಿತ್ತು.

ಆಕೆಯು ರೊಚ್ಚಿನಿಂದಲೇ ಆಲ್ಬರ್ಟನನ್ನು ತನ್ನ ಕೋಣೆಗೆ ಎಳೆ ತಂದಳು.

"ನೀವೆಲ್ಲ ನನ್ನ ಪ್ರಾಣ ಹಿಂಡುತ್ತಿದ್ದೀರಿ. ಇದರಿಂದ ನಿಮಗೇನು ಲಾಭವೋ ನಾನರಿಯೆ? ಅಲ್ಬ, ನೀನಾದರೂ ಅವರ ದಾರಿಯಲ್ಲಿ ಹೋಗಬೇಡ. ನೀನೇ ನನ್ನ ಆಶಾಕಿರಣ. ನೀನೂ ನಿರಾಶೆಗೊಳಿಸಬೇಡ ಮಗೂ" ಎಂದು ಅಲ್ವರೆದು ಹೇಳಿಕೊಂಡಳು. ಮರುಕ್ಷಣದಲ್ಲಿಯೇ ಆಕೆಯ ದನಿ ಏರುತ್ತ ಹೋಯಿತು.

"ಅಲ್ಬ, ನಮ್ಮ ಧರ್ಮ ಬಿಟ್ಟು ನೀನು ಆ ಧರ್ಮದ ಹುಚ್ಚಿಗೆ ಬಿದ್ದೀ. ಅದರಿಂದ ನಮ್ಮ ಕುಟುಂಬದ ಘಾತವೇ ಆಗಿದೆ ನೆನಪಿಡು. ನಾನೆಂದಿಗೂ ನಿನ್ನನ್ನು ಆ ದಾರಿಯಲ್ಲಿ ಹೋಗಗೊಡಲಾರೆ. ತಿಳಿದಿ" ಎಂದು ಗದ್ದರಿಸಿದಳು.

ಆಲ್ಬರ್ಟ ಇಲ್ಲವೆಂಬಂತೆ ಗೋಣು ಹಾಕಿದ.

"ಅಲ್ಬ, ನಿನಗೆ ನಿಜ ಹೇಳಲೆ, ಈ ಹುಚ್ಚು ನಮ್ಮ ಕುಟುಂಬದ ಘಾತಕ್ಕಾಗಿ ನಮ್ಮ ಮನೆ ಹೊಕ್ಕಿದೆ. ನೀನಾದರೂ ಇದರಿಂದ ದೂರ ಉಳಿ. ಇಲ್ಲವಾದರೆ ಘಾತ ಕಟ್ಟಿಟ್ಟದ್ದೇ." ಮುಂದಿನದೆಲ್ಲ ಕಣ್ಣುದುರು ಕಟ್ಟಿದಂತೆ ಆಕೆ ಮಾತಾಡುತ್ತಿದ್ದಳು.

ಶಾಲಾಂತ ಪರೀಕ್ಷೆಯ ನಂತರ ಆಲ್ಬರ್ಟ ಅಜ್ಜನ ಮಾತು ಕೇಳದೆ, ತಾಯಿ ಏನ್ಸ್‌ಳ ಬಯಕೆಯಂತೆ ಎಂಜನಿಯರಿಂಗ ಕಾಲೇಜ ಸೇರಿ ಉತ್ತೀರ್ಣನಾಗಿ ಖ್ಯಾತ ಕ್ರುಪ್ ಕಂಪನಿಯಲ್ಲಿ ನೌಕರಿ ಹಿಡಿದ. ಇಷ್ಟೇ ಅಲ್ಲ, ಕೆಲ ಕಾಲದಲ್ಲಿಯೇ ಆತ ಕ್ರುಪ್ ಕಂಪನಿಯ ಆಧಾರ ಸ್ತಂಭ ಎಂದೂ ಖ್ಯಾತನಾದ.

ಇಷ್ಟೆಲ್ಲ ನಡೆಯುವದರೊಳಗೆ ಎರಡು ತಪಗಳ ಕಾಲವೇ ಸರಿಯಿತು. ಮ್ಯಾನ್‌ಫ್ರೆಡ' ಸಾಕಷ್ಟು ಮುದುಕನಾಗಿದ್ದ. ಅಂತಿಮ ಪ್ರಯಾಣದ ಸಿದ್ಧತೆಯನ್ನು ಶಾಂತಚಿತ್ತದಿಂದ ನಡೆಸಿದ್ದ. ಹಿಂದೂಧರ್ಮದ ಪುನರ್ಜನ್ಮದ ಸಿದ್ಧಾಂತದಲ್ಲಿ ಆತನಿಗೆ ನಂಬಿಕೆ ಇದ್ದಿತು. ಒಂದು ಜನ್ಮದಲ್ಲಿಯ ಪುಣ್ಯದ ಬುತ್ತಿ ಮುಂದಿನ ಜನ್ಮದಲ್ಲಿ ಕೆಲಸಕ್ಕೆ ಬರುವದು. ಯಾವ ಜನ್ಮದಲ್ಲಿ ಪುಣ್ಯದ ಕೊಡ ತುಂಬುವದೋ ಅದೇ ಜನ್ಮದಲ್ಲಿ ಆತನಿಗೆ ಮೋಕ್ಷ ದೊರೆಯುವದು. ಹಿಂದೂ ಧರ್ಮದ ತತ್ವ ಜ್ಞಾನವನ್ನು ಅವಲಂಬಿಸಿದವನು ಮರಣವನ್ನೂ ಶಾಂತಚಿತ್ತದಿಂದ ಎದುರಿಸುವನು ಎಂದು ವಿವೇಕಾನಂದರು ನೀಡಿದ ಉಪದೇಶವನ್ನು ಮ್ಯಾನಫ್ರೆಡ್ ತಲೆಯಲ್ಲಿ ಹೊತ್ತಿದ್ದನು.

ಮ್ಯಾನಫ್ರೆಡ್ ತನ್ನ ದೇಹಾವಸಾನದ

ದಿನವನ್ನು ವಿನ್ನರ್‌ಳಿಗೆ ತಿಳಿಸಿದಾಗ ಆಕೆ ಇದೊಂದು ಹುಚ್ಚು ಎಂದು ಮೊದಲಿಸಿದ್ದಳು. ಆ ದಿನ ಬಂದೇಬಿಟ್ಟಿತು. ಮ್ಯಾನ್‌ಫ್ರೆಡ್ ತೀರ ಸೋತು ಹೋಗಿದ್ದ.

"ನನಗಿಂದು ಮಾತಾಡಲಿಕ್ಕೆ ಆಗುವದಿಲ್ಲ. ದಣಿವು ವಿಪರೀತ. ನನ್ನ ತಲೆದಿಂಬಿನ ಹತ್ತಿರ ಶಂಕರನ ಮೂರ್ತಿ ಇಡಿರಿ. ಬಾಯಲ್ಲಿ ಗಂಗಾಜಲ ಹಾಕಿರಿ ತೀರ್ಥ ಎಂದು." ಮ್ಯಾನ್‌ಫ್ರೆಡ್ ಕೇಳಿದಂತೆ ಫ್ರಾಂಜ ತಂದೆಯ ಬಾಯಿಗೆ ಗಂಗಾಜಲ ಹಾಕಿದ.

"ಗಂಗಾಸ್ನಾನ ಮಾಡುವವರು ವಿಷ್ಣುರೂಪರಾಗುವರು, ಶಿವಲೋಕಪರಾಗುವರು. ಮಾರ್ಕಂಡಾ ಗೀತೆಯನ್ನು ಓದಿ ಹೇಳಲು ಬಂದೀತೆ? ನೈನಂ ಛಿಂದಂತಿ ಶಸ್ತ್ರಾಣಿ..." ಎಂದು ಮೊಮ್ಮಗನ ಬೆನ್ನನ್ನು ಸವರಿದ. ಕೊನೆಗೆ ಮಗನನ್ನೊಮ್ಮೆ ಕೆಕ್ಕರಿಸಿ ನೋಡಿದ ಮ್ಯಾನ್‌ಫ್ರೆಡ್.

"ಫ್ರಾಂಜ, ನನ್ನದೊಂದೆ ಇಚ್ಛೆ. ನನ್ನ ಶವವನ್ನು ಹಿಂದೂ ಧರ್ಮದಂತೆ ದಹನ ಮಾಡಿರಿ. ನಂತರ ಅಸ್ಥಿಗಳನ್ನು ಗಂಗೆಯಲ್ಲಿ ವಿಸರ್ಜಿಸಿರಿ" ಎಂದು ಹೇಳುತ್ತಿರುವಾಗಲೇ ಆತನ ಪ್ರಾಣೋತ್ಕ್ರಮಣವಾಯಿತು.

ಫ್ರಾಂಜ ತನ್ನ ತಂದೆಯ ಅಸ್ಥಿಗಳೊಡನೆ ಭಾರತಕ್ಕೆ ಹೊರಟು ನಿಂತಾಗ ಆತನನ್ನು ಬೀಳ್ಕೊಡಲು ವಿಮಾನ ನಿಲ್ದಾಣಕ್ಕೆ ಬಂದಿದ್ದ ವಿನ್ನರ್.

"ಇದು ನಿಮ್ಮ ಅತಿರೇಕದ ಹುಚ್ಚೆಂದು ತಿಳಿಯಿತು. ನಮ್ಮವರಾರೂ ಮಾಡದ್ದನ್ನು ನೀವು ಮಾಡುವದು ಗಂಗೆಯಲ್ಲಿ ಎಲುಬು ಹಾಕುವದಂತೆ. ಇದೇ ನಿಮ್ಮ ಕೊನೆಯ ಹುಚ್ಚಾಗಲಿ, ಇನ್ನು ಮುಂದೆ ನಾನೆಂದೂ ಹೀಗೆ ನಡೆಸಗೊಡಲಾರೆ. ಹೋಗಿ ಬನ್ನಿ. ಗುಡ್ ಬಾಯ್ ಡೀಯರ್" ಎಂದು ಬೀಳ್ಕೊಟ್ಟಳು.

*

'ಪ್ರಿಯ ವಿನ್ನರ್

ಫ್ರಾಂಜನ ಕಾಗದದ ಮೇಲೆ ಇಷ್ಟು ಓದಿದ್ದೇ ಲೆಕ್ಕಣಿಕೆ ನಿಂತುಹೋಯಿತು. ಭಾರತದಲ್ಲಿಯ ತನ್ನ ಎರಡು ತಿಂಗಳುಗಳ ವಾಸ್ತವ್ಯದ ವಿವರಗಳನ್ನು, ತತ್ಪರಿಣಾಮವಾಗಿ ತಾನು ಕೈಕೊಂಡ ನಿರ್ಣಯವನ್ನು ಅವನು ತನ್ನ ಹೆಂಡತಿಗೆ ತಿಳಿಸಬಯಸಿದ್ದನು. ಏನು ಮಾಡಿದರೂ ಲೆಕ್ಕಣಿಕೆಗೆ ಗತಿಯೇ ಬರಲೊಲ್ಲದು. ಕಿಟಕಿಯೊಳಗಿಂದ ಹೊರಗೆ ಕಣ್ಣು ಹಾಯಿಸಿದನು. ಸಂಕಷ್ಟಿಯ ಚಂದ್ರಬಿಂಬ ಆಗಲೇ ಮೂಡಿನಿಂತಿತ್ತು. ಆಕಾಶಕ್ಕೇ ಬೆಳ್ಳಿಯ ಮುಲಾಮು ಹಾಕಿದಂತೆ ಭಾಸವಾಗುತ್ತಿತ್ತು. ಬೆಳದಿಂಗಳು ಹೀಗೆ ಅರಳಿ ನಿಂತಿದ್ದನ್ನು ಫ್ರಾಂಜ್ ಹೈಡಲ್‌ಬರ್ಗದಲ್ಲಿ ಎಂದಿಗೂ ಕಂಡಿದ್ದಿಲ್ಲ. ಈ ಹಿಂದೂ ಭೂಮಿಯಲ್ಲಿ ಸೂರ್ಯ ಚಂದ್ರರ ಮುಕ್ತಪ್ರಕಾಶದ ದುಂದುಚೆಲ್ಲಾಟ ಎಲ್ಲೆಡೆಯಲ್ಲಿಯೂ ಇರುತ್ತದೆ. ಇದೇ ಸೂರ್ಯ ಚಂದ್ರರ ಪ್ರಕಾಶದಿಂದ ಈ ಭೂಮಿಯಲ್ಲಿ ಜ್ಞಾನದ ಪವಿತ್ರ ರಾಜ್ಯ ನಡೆಯುತ್ತದೆ. ಈ ದೃಶ್ಯ ಜರ್ಮನಿಯಲ್ಲಿ ಕಾಣಿಸುವದಿಲ್ಲ ಎಂಬ ವಿಚಾರಗಳು ಫ್ರಾಂಜನಲ್ಲಿ ಸುಳಿದವು. ಆತನ ವಿಚಾರ ಚಕ್ರ ಹಿಂದುಗಡೆ ಉರುಳುತ್ತ ಹೋಯಿತು.

ಎರಡು ತಿಂಗಳ ಹಿಂದೆ ಫ್ರಾಂಜ್ ಕಲಕತ್ತೆಯ ಡಂ ಡಂ ವಿಮಾನ ನಿಲ್ದಾಣದಲ್ಲಿ ಇಳಿದಾಗ ಆತನಿಗೆ ಪವಿತ್ರ ಗಂಗಾನದಿಯ ಪ್ರಥಮ ದರ್ಶನವಾಯಿತು. ಸಾವಿರಾರು ಹಿಂದುಗಳು 'ಜಯ ಗಂಗೇ ಜಯ ಭಾಗೀರಥಿ' ಎಂದು ಘೋಷಿಸುತ್ತ ಗಂಗಾ ನದಿಯಲ್ಲಿ ಮುಣುಗು ಹಾಕುತ್ತಿರುವದನ್ನು ನೋಡಿದ ಫ್ರಾಂಜನು ಪುಲಕಿತನಾದ. "ಯಾವ ದೇಶದಲ್ಲಿ ಗೀತೆ, ಗಂಗೆ, ಸೂರ್ಯ, ಹಿಮಾಲಯಗಳಿರುವವೊ ಆ ದೇಶವೇ ಪ್ರಪಂಚದ ಪಾಲನೆ ಪೋಷಣೆ ಶಾರೀರಿಕವಾಗಿಯೂ ಮಾನಸಿಕವಾಗಿಯೂ ಮಾಡುವದು" ಎಂದು ಮ್ಯಾನಫ್ರೆಡ್ ಹೇಳಿದ್ದ ಮಾತುಗಳು ಈಗ ಫ್ರಾಂಜನಿಗೆ ನೆನಪಾಗದಿರಲಿಲ್ಲ.

ವಿಮಾನ ಪ್ರಯಾಣದಲ್ಲಿಯ ಸ್ನೇಹಿತ ವಿರೇನ ಬಾಬು ಮುಕರ್ಜಿ ಇತ್ತ ವಿಳಾಸ ಹಿಡಿದುಕೊಂಡು ಫ್ರಾಂಜ ಬಾಂಕಿಪುರಕ್ಕೆ ದಿನೇಶಬಾಬು ಚಟ್ಟೋಪಾಧ್ಯಾಯನನ್ನು ಹುಡುಕಿಕೊಂಡು ಬಂದನು. ದಿನೇಶಬಾಬು ಬಾಂಕೀಪುರದ ಶ್ರೀಮಂತ ವ್ಯಾಪಾರಿ, ಬಾಂಕಿಪುರವು ಗಂಗಾ ತೀರದ ನಗರ. ಗಂಗಾತೀರದಲ್ಲಿ ಸುತ್ತಾಡಿ

ಅಲ್ಲಿಯ ಪಾಶ್ಚಾತ್ಯ ಪದ್ಧತಿಯ 'ಲಿಬರ್ಟಿ' ಹೋಟೇಲಿನಲ್ಲಿಯ ಸ್ವಚ್ಛಂದ ವಿಹಾರವನ್ನು ಕಂಡು ಗಂಗಾ ತೀರದಲ್ಲಿಯೂ ಇಂಥ ವರ್ತನೆಯೇ ಎಂದುಕೊಂಡು ಫ್ರಾಂಜ್ ಕೊನೆಗೆ ದಿನೇಶ ಬಾಬುಗಳ ಮನೆ ತಲುಪಿದ್ದ.

ದಿನೇಶಬಾಬು ಸಣಬಿನ ವ್ಯಾಪಾರಿ. ಆತನ ಒಬ್ಬನೇ ಮಗ ಹನ್ನೆರಡನೆ ವರ್ಷಕ್ಕೆ ಸತ್ತು ಹೋದ. ಆತನ ಜಾತಕ ನೋಡಿದ ಜ್ಯೋತಿಷಿಯು ಹೇಳಿದಂತೆ ಮೃತ್ಯುಂಜಯ ಜಪ ಮಾಡಿಸಿದ್ದರೆ ಆ ಹುಡುಗ ಉಳಿಯಬಹುದಾಗಿತ್ತಂತೆ. ನಂತರ ಜನಿಸಿದ ಮಗಳು ಭಾರತಿ ಈಗ ಸಂಸ್ಕೃತ ವಿಷಯದಲ್ಲಿ ಪದವಿ ಧರೆ. ಆಕೆಯು ಪರದೇಶಕ್ಕೆ ಅದರಲ್ಲೂ ಜರ್ಮನಿಗೆ ಹೋಗಿ ಅಲ್ಲಿಯ ಕುಟುಂಬ ಪದ್ಧತಿಗಳ ಕುರಿತು ಅಭ್ಯಾಸ ಮಾಡಬೇಕು ಎಂಬ ಇಚ್ಛೆ ವ್ಯಕ್ತಪಡಿಸಿದ್ದಳು. ಆಕೆಯ ಜಾತಕವೂ ಪರದೇಶ ಗಮನವನ್ನು ಸೂಚಿಸುತ್ತಿದ್ದಿತು. ಇಷ್ಟೇ ಅಲ್ಲದೆ ಅಲ್ಲಿ ಪ್ರಸಿದ್ಧಿ ಪಡೆದು ಸ್ವದೇಶಕ್ಕೆ ಹಿಂತಿರುಗುವಳು ಎಂದೂ ಅದು ಹೇಳುತ್ತಿತ್ತು. ಅಂತೂ ದಿನೇಶ ಬಾಬು, ನಂದಿನಿ ದೇವಿಯರು ಆಕೆಯ ವಿದೇಶ ಪ್ರಯಾಣವನ್ನು ಅನುಮೋದಿಸಿದ್ದರು.

ಈ ಸಂದರ್ಭದಲ್ಲಿ ಫ್ರಾಂಜ್‌ನು ದಿನೇಶ ಬಾಬುವಿನ ವಾಸ ತಲುಪಿದ್ದ. ಇಲ್ಲಿಯ ಸಂಸ್ಕೃತಿಗೆ ತಕ್ಕಂತೆ ಆತನಿಗೆ ದಿನೇಶ ಬಾಬು ಕುಟುಂಬದಲ್ಲಿ ಸತ್ಕಾರ ದೊರೆಯಿತು. ಮುಂದೆ ಆತನೊಡನೆ ಚರ್ಚೆ ನಡೆದಾಗ ಭಾರತಿ ಕೇಳಿದಳು.

"ನಾನು ನಿಮ್ಮ ದೇಶಕ್ಕೆ ಹೋಗಬೇಕೋ ಬೇಡವೊ?"

"ಇದೆಂಥ ಪ್ರಶ್ನೆ! ನಾನು ಬಂದಿಲ್ಲವೆ ನಿಮ್ಮ ದೇಶಕ್ಕೆ. ಅಂದಾಗ ನೀವು ನಮ್ಮಲ್ಲಿ ಬಂದು ಋಣ ತೀರಿಸಬೇಡವೆ?"

ತನ್ನ ತಂದೆಯ ಅಸ್ಥಿ ವಿಸರ್ಜನೆಗಾಗಿ ಈ ಗೃಹಸ್ಥ ಅಲ್ಲಿಂದ ಇಲ್ಲಿಗೆ ಬಂದಿದ್ದಾನೆ. ಅಂದ ಮೇಲೆ ಇವರಿಗೆಲ್ಲ ಆಶ್ಚರ್ಯವಾಗದಿರಲಿಲ್ಲ.

"ನಮ್ಮ ತಂದೆ ಗಂಗಾತೀರ್ಥ ಕುಡಿದೇ ಪ್ರಾಣಬಿಟ್ಟರು. ಅವರ ಕೊನೆಯ ಇಚ್ಛೆಯಂತೆ ನಾನಿಲ್ಲಿಗೆ ಬಂದಿದ್ದೇನೆ. ನಿಮ್ಮ ಗಂಗಾನದಿಯನ್ನು ನೋಡಿದಾಗ ನನಗೂ ಆಕೆಯ ಉದರದಲ್ಲಿ ವಿಶ್ರಾಂತಿ ಪಡೆಯಬೇಕು ಎನಿಸುತ್ತದೆ" ಎಂದೂ ಫ್ರಾಂಜ್ ನಿವೇದಿಸಿದ.

"ನಿಮ್ಮ ಹೈಡಲ್‌ಬರ್ಗ್‌ದಲ್ಲಿ ನದಿ ಯಾವದು?" ಕೇಳಿದಳು ಭಾರತಿ.

"ನೆಕರ"

"ಅದು ನಿಮಗೆ ಪವಿತ್ರವೆನಿಸುವದಿಲ್ಲವೆ?"

"ನಮ್ಮ ನೆಕರ ನದಿಯಲ್ಲಿ ನೀರಿದೆ. ನಿಮ್ಮ ಗಂಗೆಯಲ್ಲಿ ತೀರ್ಥ ಇದೆ. ಅದೇನೇ ಇದ್ದರೂ ನಮ್ಮ ದೇಶ ನೋಡಲು ನೀವು ಅವಶ್ಯ ಬನ್ನಿರಿ. ನಮ್ಮ ಮನೆಯವರಿಗೊಂದು ಪತ್ರ ಕೊಡುವೆ"

"ನಿಮ್ಮ ಮನೆಯಲ್ಲಿ ಯಾರಾರು ಇದ್ದಾರೆ?"

"ಹೆಂಡತಿ ಮತ್ತು ಮಗ"

"ಅವರಿಗೂ ನಮ್ಮ ಧರ್ಮ ಮೆಚ್ಚುಗೆಯೇ? ನಿಮ್ಮಂತೆಯೆ..."

ಫ್ರಾಂಜ ಉದಾಸೀನವಾಗಿ ನಕ್ಕ.

"ನನ್ನ ಹೆಂಡತಿಗೆ ಮಾತ್ರ ನಿಮ್ಮ ಧರ್ಮ ಬೇಡವಾಗುವದಿಲ್ಲ. ಮಗ ಮಾತ್ರ ನಮ್ಮದೇ ಪಿಂಡ."

"ಹಾಗಾದರೆ ನನಗೂ ಅವನಿಗೂ ಸರಿಹೋಗಬಹುದು? ಆತ ಎಷ್ಟಿದ್ದಾನೆ."

"ಆತ ನಿಮಗಿಂತ ದೊಡ್ಡವ ಬುದ್ಧಿವಂತ. ಕ್ರುಪ್ ಕಂಪನಿಯಲ್ಲಿ ದೊಡ್ಡ ಹುದ್ದೆಯಲ್ಲಿದ್ದಾನೆ. ಗೋಕುಲಾಷ್ಟಮಿಗೆ ಆತ ಹುಟ್ಟಿದ್ದರಿಂದ ಅವನ ಅಜ್ಜ ಆತನಿಗೆ ಮುಕುಂದ ಎಂದು ಹೆಸರಿಟ್ಟರು. ಆದರೆ ನಮ್ಮಮ್ಮಳಿಗೆ ಇದೆಲ್ಲ ಸರಿಬರುವದಿಲ್ಲ."

"ಮುಕುಂದ, ಮುಕುಂದ" ಎಂದು ಭಾರತಿ ಮನಸೋಕ್ತ ನಕ್ಕಳು.

"ನಮ್ಮ ಆರು ಶತಮಾನಗಳಷ್ಟು ಹಳೆಯದಾದ ಹೈಡಲಬರ್ಗ ವಿದ್ಯಾಪೀಠದಲ್ಲಿ ಭಾರತೀಯ ಸಂಸ್ಕೃತಿಯನ್ನು ಕಲಿಸುತ್ತೇವೆ. ಸಂಸ್ಕೃತದ ಎಲ್ಲ ಗ್ರಂಥಗಳೂ ಅಲ್ಲಿವೆ. ನಾನೇ ಕಲಿಸುತ್ತಿದ್ದೆ. ನೀವು ಅಲ್ಲಿಗೆ ಹೋಗಲೇಬೇಕು." ಎಂದು ಫ್ರಾಂಜ ಆಗ್ರಹಪಡಿಸಿದ.

"ನೀವೆಂದು ಹಿಂತಿರುಗುವಿರಿ?"

"ಯೋಗಾಯೋಗ ಹೇಗಿದೆಯೊ ನೋಡಬೇಕು. ನೀವಂತೂ ಹೋಗಿರಿ. ಪರಿಚಯ ಪತ್ರ ಕೊಡುತ್ತೇನೆ. ನಾನಿಲ್ಲಿ ಕುಶಲವಾಗಿದ್ದೇನೆ. ಅಲ್ಲಿ ನೋಡಲು ಬರುವನು ಇಲ್ಲವಾದರೆ..." ಇಷ್ಟೇ ನುಡಿದು ಅವನು ಸುಮ್ಮನಾದನು.

ಈ ಚರ್ಚೆಯ ಪರಿಣಾಮವಾಗಿ ಭಾರತಿ ಜರ್ಮನಿಗೆ ಹೋಗುವದು ಖಚಿತವಾಯಿತು.

ಫ್ರಾಂಜ್ ತಂದೆಯ ಅಸ್ಥಿವಿಸರ್ಜನೆಗಾಗಿ ಕಾಶಿಗೆ ಬಂದು ವಿಧಿಪೂರ್ವಕ ಅಸ್ಥಿವಿಸರ್ಜನೆ ಮಾಡಿ ತಂದೆಯ ಆತ್ಮಕ್ಕೆ ಶಾಂತಿ ನೀಡಿದ. ನಾವೆಯಲ್ಲಿಯೆ ಕುಳಿತು ನದೀವಿಹಾರ ಗೈಯುತ್ತ ದಶಾಶ್ವಮೇಧ, ಮಣಿಕರ್ಣಿಕಾ, ಪಂಚತೀರ್ಥ, ನಾರದಘಾಟಗಳನ್ನೂ ನೋಡಿ ಆನಂದಿಸಿದ, ಸ್ಥಳ ಪುರಾಣ ಕೇಳಿ ಪುಳಕಿತನಾದ.

ನಗರದಲ್ಲಿ ಸಂಚರಿಸುವಾಗ ಆತ ವಿಶ್ವನಾಥನಿಗೆ ಹರಿಕೆ ಸಲ್ಲಿಸಲೆಂದು ನಾಲ್ಕುನೂರು ಮೈಲ ದೂರದಿಂದ ದೀಡರಿಕೆ ಉರುಳುತ್ತ ಬಂದ ಸಾಧುವೊಬ್ಬನನ್ನು ಕಂಡ. ಪಶುವಿನಂತೆ ರಿಕ್ಷಾ ಎಳೆಯುವ ಸದಾಮರನ್ನು ಕಂಡ. ತಿರುಪೆಯವರನ್ನು ನೋಡಿದ. ಈ ದೇವ ಭೂಮಿಯಲ್ಲಿ ದಾರಿದ್ರ್ಯವನ್ನು ಯಾರು ಬಿತ್ತಿದರು? ಇದು ಯಾರ ಕೃತ್ಯ. ಕುರುಡರು ಕುಂಟರು ಬೀದಿಗುಂಟ ಹಾಡುತ್ತ ತಿರುಪೆ ಬೇಡುವದನ್ನು ಫ್ರಾಂಜ ನೋಡಿದಾಗ,

"ದೇವರು ನಿಮ್ಮನ್ನೆಲ್ಲ ಹೀಗೆ ಅಂಗವಿಕಲರನ್ನಾಗಿ ಹುಟ್ಟಿಸಿದ್ದಾರೆ. ಆದರೂ ನೀವು ಆತನ ಭಜನೆ ಮಾಡುವಿರಲ್ಲ?" ಎಂದು ಪ್ರಶ್ನಿಸಿದ.

ಆ ಭಿಕ್ಷುಕರಲ್ಲಿಯ ಒಬ್ಬ ಮುದುಕ,

"ಹಾಗೆನ್ನಬೇಡಿ ಸಾಹೇಬರೆ, ಹಿಂದಿನ ಜನ್ಮದ ಕರ್ಮ ಈಗ ತೀರಿಸುತ್ತಿದ್ದೇವೆ. ಆತನನ್ನು ಆರಾಧಿಸಲೆಂದೇ ಈ ನರದೇಹ ದಯಪಾಲಿಸಿದ್ದಾನೆ. ಈ ಜನ್ಮದಲ್ಲಿ ಆತನನ್ನು ಪಾಡಿ ಪೊಗಳಿ ಉದ್ಧಾರವಾಗುವೆವು" ಎಂದು ಉತ್ತರಿಸಿದ್ದನ್ನು ಕಂಡು ಫ್ರಾಂಜ್ ಅವರ ಶ್ರದ್ಧೆಯನ್ನು ಮೆಚ್ಚಿಕೊಂಡ.

ಡಾ. ಮಾಲವೀಯರು ಫ್ರಾಂಜ ಮ್ಯೂಲರನನ್ನು ಆಮಂತ್ರಿಸಿದರು. ಭರತ ಭೂಮಿಯ ಪಾವಿತ್ರ್ಯದ ಕುರಿತು ಅವರಲ್ಲಿ ಚರ್ಚೆ ನಡೆಯಿತು. ಇಲ್ಲಿ ಅನೇಕ ಚಮತ್ಕಾರಗಳನ್ನು ಕಾಣಬಹುದು ಎಂದಾಗ ಡಾ. ಮಾಲವೀಯಾ ಅವರ ಹೇಳಿಕೆ ಅನುಮೋದಿಸಿದರಲ್ಲದೆ ಹಿಮಾಲಯದಲ್ಲಿ ಪವಾಡಗಳನ್ನು ಮೆರೆಯಬಲ್ಲ ಸಾಧು ಸಂತರು ಅಸಂಖ್ಯಾತರಿದ್ದಾರೆ ಎಂದೂ ತಿಳಿಸಿದರು. ಅಲ್ಲದೆ ಫ್ರಾಂಜರ ಚಿಕಿತ್ಸಕ ಬುದ್ಧಿಗೆ ಸಮಾಧಾನ ದೊರೆಯಬೇಕಾದರೆ ದಕ್ಷಿಣದ ಅರುಣಾಚಲದ ರಮಣ ಮಹರ್ಷಿಗಳ ಆಶ್ರಮಕ್ಕೆ ಹೋಗುವದು ಒಳಿತು ಎಂಬ ಸಲಹೆಯನ್ನು ಡಾ. ಮಾಲವೀಯಾ ನೀಡಿದರು.

ಮರುದಿನವೇ ಫ್ರಾಂಜ್ ಅರುಣಾಚಲದ ದಾರಿ ಹಿಡಿದರು.

ಅರುಣಾಚಲದಲ್ಲಿ ರಮಣಮಹರ್ಷಿಗಳ ಆಶ್ರಮ ಸಮೀಪಿಸಿದಂತೆ ಫ್ರಾಂಜನ ಅಂತಃಕರಣ ಆನಂದದಿಂದ ಉಕ್ಕೇರಿತು. ನಿಸರ್ಗ ರಮಣೀಯ ಪರಿಸರದಲ್ಲಿ ನಿಂತ ಆ ಆಶ್ರಮವನ್ನು ಫ್ರಾಂಜ್ ಕಂಡೊಡನೆ ಅದಕ್ಕೆ ಕೈಜೋಡಿಸಿ ವಂದಿಸಿದರು.

ರಮಣ ಮಹರ್ಷಿಗಳ ದರ್ಶನವು ದುರ್ಲಭವಾದ ಸಂಗತಿ. ಆದರೂ ಫ್ರಾಂಜನಿಗೆ ಅಂದೇ ಮಹರ್ಷಿಗಳ ದರ್ಶನ ಲಾಭವಾಯಿತು. ಪ್ರಶಸ್ತವಾದ ದಿವಾಣಖಾನೆಯಲ್ಲಿ ಒಂದು ಮೂಲೆಗೆ

ಕಿಟಕಿಯ ಕೆಳಗೆ ಇಟ್ಟಿದ್ದ ಮಂಚದ ಮೇಲೆ ಅವರು ಮಂಡಿಸಿದ್ದರು. ಫ್ರಾಂಜ ಸಮೀಪ ಹೋಗಿ ಅವರ ದರ್ಶನ ಪಡೆದುಕೊಂಡ, ಫಲಗಳನ್ನು ಅರ್ಪಿಸಿದ. ಮಹರ್ಷಿ ಇವನತ್ತ ನೋಡಲೆ ಇಲ್ಲ. ಅವರ ಕಣ್ಣು ನೆಲಕ್ಕೆ ನೆಟ್ಟಿತ್ತು, ಆಗೀಗ ಎರಡೂ ಕೈಗಳಿಂದ ತಮ್ಮ ಮುಖವನ್ನು ಅವರು ಸವರಿಕೊಳ್ಳುತ್ತಿದ್ದರು ಇಲ್ಲದಿದ್ದರೆ ನಿಶ್ಚಲ ಪ್ರತಿಮೆಯಂತೆ ಕುಳಿತಿರುತ್ತಿದ್ದರು.

ಮಹರ್ಷಿಗಳಿಗೆ ಅನೇಕ ಪ್ರಶ್ನೆಗಳನ್ನು ಕೇಳಬೇಕೆಂದು ಫ್ರಾಂಜ್ ತವಕಿಸುತ್ತಿದ್ದರೂ ಬಾಯಿಂದ ಮಾತೇ ಹೊರಡುತ್ತಿರಲಿಲ್ಲ. ಕೆಲ ಕ್ಷಣಗಳಲ್ಲಿಯೇ ಮಹರ್ಷಿಗಳ ದೃಷ್ಟಿ ಫ್ರಾಂಜನ ಮೇಲೆ ಬಿದ್ದಿತು. ಮಹರ್ಷಿಗಳೊಡನೆ ದೃಷ್ಟಿ ದೃಷ್ಟಿಯಾದ ಕೂಡಲೆ ಫ್ರಾಂಜನ ಪ್ರಶ್ನೆಗಳೆಲ್ಲ ಭಸ್ಮವಾಗಿ ಹೋದವು. ಈತನ ಶಂಕೆಗಳೆಲ್ಲ ಮಹರ್ಷಿಯ ದೃಷ್ಟಿಸೂರ್ಯನೆದುರು ಮಂಜಿನಂತೆ ಕರಗಿ ಹೋದವು. ಉಳಿದದ್ದು ಕೇವಲ ಅಂತಃಕರಣದ ಶಾಂತಿ, ಹೂವಿಂದ ಪರಿಮಳವು ಸೂಸುವಂತೆ ಮಹರ್ಷಿಗಳ ಸಾನ್ನಿಧ್ಯದಿಂದ ಶಾಂತಿ ಹೊರಸೂಸುತ್ತಿತ್ತು.

"ಏನು ಆಶ್ರಮದ ಊಟ ಹಿಡಿಸಿತೆ?" ಎಂದು ಮಹರ್ಷಿಗಳು ಫ್ರಾಂಜನಿಗೆ ಕೇಳಿದರು.

"ನಿಜ ಹೇಳುವದಾದರೆ ನನ್ನ ಲಕ್ಷ ಊಟದ ಕಡೆಗೆ ಇದ್ದಿಲ್ಲ. ನನ್ನ ಮನಸ್ಸಿಗೆ ಮಾತ್ರ ಸಂತತ ಸಂತರ್ಪಣೆ ನಡೆದಿತ್ತು."

"ವಾಃ ವಾಃ ಚೆನ್ನಾಯಿತು"

"ನಾನು ತತ್ವಜ್ಞಾನ ಓದಿಕೊಂಡಿದ್ದೇನೆ. ಅಂತರಂಗದ ಶಾಂತಿಗಾಗಿ ಇಡಿ ಪಶ್ಚಿಮವನ್ನೆ ಸುತ್ತಾಡಿದೆ, ಸಿಗಲಿಲ್ಲ. ಈಗ ಪೂರ್ವಕ್ಕೆ ಹೊರಳಿದ್ದೇನೆ. ಅದು ನನಗೆ ಇಲ್ಲಿಯೇ ಸಿಗಬಹುದೆಂಬ ಭರವಸೆ ತೋರುತ್ತದೆ."

ರಮಣ ಮಹರ್ಷಿಗಳು ಬರಿ ಗೋಣು ಅಲ್ಲಾಡಿಸಿದರು.

"ನಮ್ಮ ಪಾಶ್ಚಾತ್ಯ ವಿದ್ವಾಂಸರೆಲ್ಲ ತಮ್ಮ ವಿದ್ವತ್ತೆಗಾಗಿಯೇ ವಿಖ್ಯಾತರು. ಆ ವಿದ್ವಾಂಸರಿಗೆ ಈ ವಿಶ್ವದ ಆಧಾರವಾದ ಅಜ್ಞಾತದ ಶೋಧ ಆಗಿಲ್ಲ. ಇಲ್ಲಿ ಆ ಅಜ್ಞಾತದ ಶೋಧ ಹಚ್ಚಿದ ಅನೇಕ ವಿಭೂತಿಗಳಾಗಿ ಹೋಗಿದ್ದಾರೆ. ತಮ್ಮ ಕೀರ್ತಿ ಕೇಳಿ ಇಲ್ಲಿಗೆ ಬಂದಿದ್ದೇನೆ. ದಯವಿಟ್ಟು ಮಾರ್ಗದರ್ಶನ ಮಾಡಿರಿ".

ಮಹರ್ಷಿಗಳು ಸಾವಧಾನದಿಂದ ಆತನ ಕಡೆಗೆ ನೋಡಿ,

"ನನಗೆ ಮಾರ್ಗದರ್ಶನ ಮಾಡಿರಿ ಎನ್ನುವಿರಿ? 'ನನಗೆ' ಅಂದರೆ ಯಾರಿಗೆ? ಈ 'ನಾನು' ಯಾರು?" ಎಂದು ಪ್ರಶ್ನಿಸಿದರು.

"ತಮ್ಮ ಪ್ರಶ್ನೆ ತಿಳಿಯಲಿಲ್ಲ ಸ್ವಾಮಿ"

"ಸ್ವಲ್ಪ ವಿಚಾರ ಮಾಡಿರಿ"

"ನಾನು ಎಂದರೆ ಫ್ರಾಂಜ್ ಮುಲ್ಲರ".

"ನಿಮಗೆ ಈ ಫ್ರಾಂಜ್‌ರ ಪರಿಚಯವಿದೆಯೇ ?"

"ಹೌದು, ತೀರ ಮೊದಲಿನಿಂದಲೂ ಇದೆ" ಎಂದು ಫ್ರಾಂಜ್ ನಕ್ಕ.

"ಇದು ನಿಮ್ಮ ದೇಹ. ನಿಮ್ಮೊಳಗಿನ ಈ 'ನಾನು' ಯಾರು ?"

ಫ್ರಾಂಜ್ ನಿರುತ್ತರನಾದ.

"ನಿಮ್ಮಲ್ಲಿಯ 'ನಾನು' ಯಾರೆಂಬುದರ ಪರಿಚಯ ಮೊದಲು ಮಾಡಿಕೊಳ್ಳಿ. ಆ ಮೇಲೆ ನಿಮ್ಮ ಕೈಗೆ ಸತ್ಯವು ಸಿಗಬಹುದು"

"ಅದಕ್ಕೇನು ಮಾರ್ಗ ?"

"ಅಂತರ್ಮುಖರಾಗಿ ಏಕಾಗ್ರ ಚಿತ್ತದಿಂದ ಧ್ಯಾನ ಮಾಡಬೇಕಾಗುವದು. ಹಾಗೆ ಮಾಡುತ್ತ ಹೋದರೆ ಒಂದು ದಿನ ಖಂಡಿತವಾಗಿ ನಿಮಗೆ ಬೆಳಕು ಕಾಣುವದು."

"ಹಾಗೆ ಮಾಡಿದ್ದೇನೆ. ಪ್ರಗತಿ ಆಗಿಲ್ಲ"

"ಪ್ರಗತಿ ಆಗಿಲ್ಲ ಎಂದು ಹೇಳುವದು ಸುಲಭವಲ್ಲ."

"ಈ ಪ್ರಗತಿ ಸಾಧಿಸಲಿಕ್ಕೆ ಗುರುವಿನ ಅಗತ್ಯ ಇದೆಯೆ ?"

"ಇರಲೂ ಬಹುದು"

"ಗುರುವಿನ ಸಹಾಯದಿಂದ ಆ 'ನಾನಿ'ನ ಅರಿವಾಗುವದೆ ?"

"ಗುರು ಮಾರ್ಗದರ್ಶಕ, ಕೊನೆಗೂ ಅವರವರ ಅನುಭವವೇ ಅವರವರಿಗೆ ಸತ್ಯ"

"ಗುರು ದೊರೆತರೆ ಎಷ್ಟು ದಿನಗಳಲ್ಲಿ ಪ್ರಗತಿ ಆಗಬಹುದು?"

"ಅದು ಶಿಷ್ಯನ ಅರ್ಹತೆಯನ್ನು ಅವಲಂಬಿಸಿದೆ."

"ನಾನಿ"ನ ಪರಿಚಯವಾದೊಡನೆ ಆನಂದ ಪ್ರಾಪ್ತಿ ಆಗುವದೆ?"

"ಆನಂದವೆಂದರೇನು? ಆನಂದವು ಅವರವರ ವೃತ್ತಿ ಧರ್ಮವಾಗಿದೆ. ಮನುಷ್ಯನು ಆಸಕ್ತಿ ಹಿಡಿದರೆ ಅದರ ಬೆನ್ನಿಗೇ ದುಃಖವು ಅಂಟಿಕೊಂಡಿದ್ದೇ. ಆದ್ದರಿಂದ ಸಂತೋಷ ವೃತ್ತಿಯಲ್ಲಿಯೆ ಸಮಾಧಾನವಿದೆ, ಆನಂದವಿದೆ, ಆನಂದದ ನೆಲೆಯು ಅಂತಃಕರಣದಲ್ಲಿದ್ದರೂ ಮಾನವನು ಅದಕ್ಕಾಗಿ ಹೊರಗೆ ಒದ್ದಾಡುತ್ತಿರುತ್ತಾನೆ. ಬರಿ ದುಃಖವನ್ನೇ ಉಡಿ ತುಂಬಿಕೊಳ್ಳುತ್ತಾನೆ"

ರಮಣ ಮಹರ್ಷಿಗಳು ಮೂರು ಸಲ 'ಶಾಂತಿ' ಉಚ್ಚಾರಮಾಡಿ ಸ್ತೋಮವನ್ನು ವಿಸರ್ಜಿಸಿದರು.

ಫ್ರಾಂಜ್ ಅಂದಿನಿಂದಲೇ ಅಂತರ್ಮುಖಿಯಾಗಿ, ರಮಣಮಹರ್ಷಿಯ ಶಿಷ್ಯ ವಿದ್ಯಾನಂದ ಸ್ವಾಮಿಗಳನ್ನು ಗುರುವನ್ನಾಗಿ ಆಯ್ದುಕೊಂಡ. ಧ್ಯಾನ ಧಾರಣಾದಿಗಳನ್ನು ನಡೆಸುತ್ತ ಅಧ್ಯಾತ್ಮ ಮಾರ್ಗದಲ್ಲಿ ಭರದಿಂದ ಮುನ್ನಡೆಯುಹತ್ತಿದ, ವಿರಕ್ತಿಭಾವ ಬೆಳೆಸಿಕೊಂಡ.

ರಮಣಾಶ್ರಮದಲ್ಲಿ ಸಾಧಕನಂತೆ ಇರಹತ್ತಿದ ಫ್ರಾಂಜನಿಗೆ ದಿನಗಳೆದಂತೆ ಸಂನ್ಯಾಸ ಸ್ವೀಕಾರದ ಆಶೆ ಪ್ರಬಲವಾಗಿ ಕಾಡತೊಡಗಿತು. ತನ್ನಷ್ಟಕ್ಕೆ ಸಂನ್ಯಾಸ ಸ್ವೀಕಾರದ ನಿರ್ಣಯ ಕೈಕೊಂಡು ಬಿಟ್ಟು ಮತ್ತು ಒಂದಿನ ವಿದ್ಯಾನಂದರನ್ನೂ ಈ ಬಗ್ಗೆ ವಿಚಾರಿಸಿದ.

ಗೃಹಸ್ಥಾಶ್ರಮಿಗಳು ತಮ್ಮ ಹೆಂಡತಿಯ ಸಮ್ಮತಿ ಇಲ್ಲದೆ ಸಂನ್ಯಾಸಾಶ್ರಮ ಸ್ವೀಕರಿಸಲು ಬರುವದಿಲ್ಲ ಎಂದು ವಿದ್ಯಾನಂದ ಸ್ವಾಮಿಗಳು ತಿಳಿಸಿದರು. ಅಲ್ಲದೆ ಸಂನ್ಯಾಸಿಯಾದವ ಜನತಾಜನಾರ್ದನನ ಸೇವೆಗಾಗಿ ಸರ್ವಸ್ವತ್ಯಾಗ ಮಾಡಬೇಕಾಗುವದು ಎಂದೂ ಅರುಹಿದರು. ಆದರೂ ಫ್ರಾಂಜನ ನಿರ್ಣಯ ಬದಲಾಗಲಿಲ್ಲ. ಈ ಘಟ್ಟದಲ್ಲಿಯೆ ಆತ ತನ್ನ ಹೆಂಡತಿಗೆ ಪತ್ರ ಬರೆಯಲು ಉಪಕ್ರಮಿಸಿದುದು.

"ಪ್ರಿಯ ಏನರ್ಜ

ನನ್ನ ಈ ವರೆಗಿನ ಇಲ್ಲಿಯ ಅನುಭವಗಳನ್ನೂ ಸದ್ಯದ ನಿರ್ಣಯವನ್ನೂ ನಾನು ಅನಿವಾರ್ಯವಾಗಿ ನಿನಗೆ ತಿಳಿಸಬೇಕಾಗಿದೆ. ರಮಣಾಶ್ರಮದ ಸಾಧಕನಾಗಿ ನಾನು ನಡೆಸಿದ ಸಾಧನಕ್ಕೆ ಫಲ ದೊರೆವ ಕಾಲ ಬಂದಿದೆ. ನನಗೆ ಅನಂತದ ಧ್ಯಾಸ ಹತ್ತಿದೆ. ಲೌಕಿಕ ಸಂಸಾರದ ಕವಚದಿಂದ ಹೊರಗೆ ಬರಬೇಕಾಗಿದೆ. ಸಂನ್ಯಾಸಾಶ್ರಮ ಸ್ವೀಕಾರಕ್ಕೆ ನಿನ್ನ ಅನುಮತಿ ದೊರೆತರೆ ನನ್ನ ಮಾರ್ಗ ನಿಷ್ಕಂಟಕವಾಗುವದು. ನೋಡು ಏನರ್ಜ, ನಾವು ನಮ್ಮ ಸಂಸಾರ ಮಾಡಿ ಮುಗಿಸಿದಂತಾಗಿದೆ. ಇನ್ನು ನನ್ನ

ಕೊನೆಯ ಬೇಡಿಕೆಯೊನ್ನು ಮನ್ನಿಸಬೇಕೆಂದು ನಿನ್ನನ್ನು ಕೇಳಿಕೊಳ್ಳುವೆ. ನನ್ನ ಪಿಂಚಣಿ, ಮೆತ್ತಿತರ ಎಲ್ಲ ಆಸ್ತಿ ನಿಮ್ಮ ಪಾಲಿಗೆ ಇರಲಿ. ನಿಮಗೆ ಯಾವ ತೊಂದರೆಯೂ ಆಗಲಾರದು. ಆಲ್ಬರ್ಟನ ಒಲವೂ ಹಿಂದೂ ಧರ್ಮದ ಕಡೆಗೇ ಇದೆ. ಆತನನ್ನು ಅಡ್ಡಗಟ್ಟಬೇಡ. ಈ ಹಿಂದ ಭೂಮಿಯ ಮಹಾತತ್ವ ನಿಮಗೆ ಕಲ್ಯಾಣ ಮಾಡಲಿ.

ಈ ಹಿಂದೆ ನಿನ್ನವನಾಗಿದ್ದ
ಫ್ರಾಂಜ್"

ಎಂದು ಪತ್ರ ಮುಗಿಸಿ ಅಂಚೆಡಬ್ಬಿಗೆ ಹಾಕಿ ಬಂದ.

*

ಹೈಡಲ್‌ಬರ್ಗದ ಇಂಡಿಯಾ ಸ್ಟ್ರಾಸ್‌ದಲ್ಲಿಯ ಮ್ಯೂಲರರ ಮನೆಯ ತಲೆ ಬಾಗಿಲಿನ ಕರೆಗಂಟೆಯನ್ನು ಆ ಸುಂದರಿಯು ಒಮ್ಮೆ ಒತ್ತಿದಳು; ಉತ್ತರ ಇಲ್ಲ. ಮತ್ತೊಮ್ಮೆ ಒತ್ತಿದಳು. ಒಳಗಿನಿಂದ ೪೦-೪೫ ವರ್ಷದ ಪ್ರೌಢೆಯೊಬ್ಬಳು ತಲೆ ಬಾಗಿಲ ತೆರೆದು ನೋಡಿದಳು. ಆದರೆ ಎದುರಿಗೆ ನಿಂತ ಆ ತರುಣಿಯ ಗುರುತು ಒಳಗಿದ್ದ ಏರ್ನಾಳಿಗೆ ಹತ್ತಲಿಲ್ಲ. ಹೇಗೆ ಹತ್ತಬೇಕು. ಆಕೆ ಆ ದೇಶಕ್ಕೆ ಬಂದುದೇ ಇದೇ ಮೊದಲು.

"ತಾವೇ ಏರ್ನಾ ಮ್ಯೂಲರ್ ಅಲ್ವೆ?" ಎನ್ನುತ್ತ ಆ ತರುಣಿ ತನ್ನ ಪರ್ಸಿನಿಂದ ಪತ್ರ ವೊಂದನ್ನು ತೆಗೆದು ಆಕೆಯ ಕೈಗಿತ್ತಳು.

"ನಾನು ಭಾರತಿ. ಭಾರತದಿಂದ ಬಂದಿದ್ದೇನೆ. ನಿಮ್ಮ ಯಜಮಾನರಿಂದ ಪತ್ರ ತಂದಿದ್ದೇನೆ." ಎಂದು ಆಕೆ ಅಂದಳು.

ಆ ಪತ್ರ ಓದಿಕೊಂಡು ಏರ್ನಾ ಕಿಡಿ ಕಿಡಿಯಾದಳು. "ನನ್ನನ್ನು ಆಕರ್ಷಿಸಿದ ದೇಶದ ಈ ಹುಡುಗಿ ನಮ್ಮಲ್ಲಿಗೆ ಬಂದಿದ್ದಾಳೆ. ನಮ್ಮ ಮನೆತನಕ್ಕೆ ತಕ್ಕಂತೆ ಆಕೆಯ ಆದರಾತಿಥ್ಯ ಮಾಡಬೇಕು" ಎಂದಿಷ್ಟೇ ಫ್ರಾಂಜ ಬರೆದಿದ್ದರೂ ಏರ್ನಾಳಿಗೆ ಸಹಿಸಲಾಗಲಿಲ್ಲ.

ರಮಣಾಶ್ರಮದಿಂದ ಫ್ರಾಂಜ್ ಕಳಿಸಿದ್ದ ಪತ್ರ ಏರ್ನಾಳ ಕೈಗೆ ಸಿಕ್ಕು ಆಗಷ್ಟೇ ಎಂಟು ದಿನಗಳಾಗಿದ್ದವು. ತನ್ನ ಗಂಡ ಇನ್ನು ಹಿಂತಿರುಗಲು ಇಷ್ಟ ಪಡುವದಿಲ್ಲ ಎಂದು ತಿಳಿದಿದ್ದರಿಂದ ಏರ್ನಾ ಕಂಗಾಲಾಗಿದ್ದಳು. ಈ ಹುಚ್ಚಿನಿಂದ ತಮ್ಮ ಮನೆತನವನ್ನು ಪಾರು ಮಾಡಲು ಏರ್ನಾ ಎಷ್ಟೆಲ್ಲ ಪ್ರಯತ್ನಿಸಿದ್ದಳು. ಮಗನನ್ನು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕಾಪಾಡಿ ಕ್ರುಪ್ ಸಂಸ್ಥೆಯಲ್ಲಿ ನೌಕರಿಗೆ ಸೇರಿಸಿದ್ದಳು. ಫ್ರಾಂಜ ಕೂಡ ಭಾರತದಿಂದ ಹಿಂತಿರುಗುವಷ್ಟರಲ್ಲಿ ಹಿಂದೂ ಧರ್ಮದ ಬಗ್ಗೆ ಆಕರ್ಷಣೆ ಆತನಲ್ಲಿ ಕಡಿಮೆಯಾಗಬಹುದೆಂದು ಆಶಿಸಿದ್ದಳು. ಆದರೆ ಬರಸಿಡಿಲಿನಂತೆ ಬಂತು ಫ್ರಾಂಜನ ಪತ್ರ. ಮುಂದೆ ಒಂದು ವಾರದಲ್ಲಿಯೇ ಈ ಭಾರತಿ ತಮ್ಮ ಮನೆ ಸೇರಲು ಬಂದಿದ್ದಾಳೆ. ಅಂತೇ ಏರ್ನಾಳ ತಾಳ್ಮೆ ತಪ್ಪಿತು.

ಏರ್ನಾ ಹಿಂದಕ್ಕೆ ಸರಿದವಳೇ ಧಡಾರನೆ ಬಾಗಿಲು ಇಕ್ಕಿಕೊಂಡಳು. ತಂದೆ, ಮಗ, ಮೊಮ್ಮಗ ಮೂವರ ನಾಮಫಲಕಗಳು ಆ ಬಾಗಲಿಗೆ ನೇತಾಡುತ್ತಿದ್ದವು. ಮ್ಯಾನ್‌ಫ್ರೆಡ್ ಇಲ್ಲ. ಫ್ರಾಂಜ್‌ನನ್ನೂ ನೋಡಿಯಾಯಿತು, ಇನ್ನು ಈ ಆಲ್ಬರ್ಟ ಹೇಗಿದ್ದಾನೊ ಎಂಬ ತಂದ್ರಿಯಲ್ಲಿರುವಾಗಲೇ

"ನಿಮಗೆ ಯಾರು ಬೇಕು?" ಎಂಬ ಪ್ರಶ್ನೆಯಿಂದ ಭಾರತಿ ಎಚ್ಚತ್ತಳು.

"ಏರ್ನಾ ಮ್ಯೂಲರರ ಮನೆ ಅಲ್ಲವೆ? ಇದು?" ಎಂದು ತಡವರಿಸಿದಳು. ಭಾರತಿ.

"ನಿಮಗೆ ಯಾರು ಬೇಕು?" ಎಂದು ಮತ್ತೆ ಆ ತರುಣ ಕೇಳಿದ ಮತ್ತು ಕರೆ ಗಂಟೆ ಒತ್ತಿದ. ಬಾಗಿಲು ತೆರೆಯಿತು ಏರ್ನಾಳಿಗೆ ಮತ್ತೆ ಭಾರತಿಯೇ ಕಂಡಳು. ಜೊತೆಗೆ ಆಲ್ಬರ್ಟನನ್ನೂ ನೋಡಿದಳು.

ಆಲ್ಬರ್ಟ ಒಳಗೆ ಹೋಗಿ ಭಾರತಿಗೂ ಒಳಗೆ ಬರಲು ಸನ್ನೆ ಮಾಡಿದ. ಏರ್ನಾ ಕೊಟ್ಟ ಫ್ರಾಂಜ್‌ನ ಪರಿಚಯ ಪತ್ರ ಓದಿದ ನಂತರ ಆಲ್ಬರ್ಟ "ಇನ್ನು ನಿನ್ನ ಹೇಳಿಕೆ ಏನು?" ಎಂದು ತಾಯಿಯನ್ನು ಕೇಳಿದ.

"ಭಾರತ ಎಂದರೆ ನನ್ನ ತಲೆ ತಿರುಗುತ್ತಿರುವಾಗ ಈ ಹುಡಿಗೆಯನ್ನು ಹೇಗೆ ಮನೆಯಲ್ಲಿಟ್ಟುಕೊಳ್ಳಲಿ? ನನ್ನದೇನು ತಪ್ಪಾಯಿತು?"

"ನಿನ್ನದು ತಪ್ಪು ಎಂದು ಅನ್ನುವದಿಲ್ಲ ಆದರೆ..."

"ಆಯಿತು ಹಾಗಾದರೆ, ಭಾರತವು ನನಗೆ ಪೂರ್ತಿ ಘಾತ ಮಾಡಿದೆ. ನಿನ್ನ ತಂದೆ ಸಂನ್ಯಾಸಿ ಆಗುವರಂತೆ! ಇನ್ನೆಷ್ಟು ದಿನ ನಾನು ಸಹಿಸಲಿ"

"ಇದರಲ್ಲಿ ಈ ಹುಡುಗಿಯದೇನು ದೋಷ ಇದೆ"

"ಇವಳ ದೋಷ ಇರಲಿಕ್ಕಿಲ್ಲ. ಈಕೆ ಭಾರತದವಳಲ್ಲವೆ? ನನಗೇನೂ ಲಕ್ಷಣ ಚನ್ನಾಗಿ ಕಾಣುವದಿಲ್ಲ. ನಮ್ಮ ಮನೆತನಕ್ಕೆ ಭಾರತದ ಸಂಬಂಧ ಬಂದಾಗಲೇ ನಾನೊಂದು ಮಾತನ್ನು ಗಟ್ಟಿ ಮಾಡಿಕೊಂಡಿದ್ದೇನೆ, ನಮ್ಮ ಕುಟುಂಬದ ವಿನಾಶ ಆಗಲಿದೆ ಎಂದು. ನನ್ನ ಕಲ್ಪನೆಗಳೆಲ್ಲ ನಿಜವಾಗುತ್ತ ನಡೆದಿವೆ. ಇಲ್ಲವಾದರೆ ಈಕೆಯೊಡನೆ ನನಗೇನು ವೈರ?"

"ಹಾಗಾದರೆ ಈಕೆಯನ್ನು ಮನೆಯಲ್ಲಿ ಇಟ್ಟುಕೊಳ್ಳಲು ಅಡ್ಡಿ ಏನಿದೆ?"

"ಎಂದಿಗೂ ಆಗದು, ಶುದ್ಧ ಸಂಕಟ ನಾನು ಬರಮಾಡಿಕೊಳ್ಳಲಾರೆ. ಆಗ್ರಹ ಬೇಡ" ಎಂದು ಏನರ್ಸ್ಟ ನುಡಿದು ಭಾರತಿಯತ್ತ ತಿರುಗಿ, "ನಿನಗೆ ಇಲ್ಲಿಯ ಕೆಲವು ಸಂಗತಿಗಳು ಗೊತ್ತೇ ಇಲ್ಲ. ಗೊತ್ತಿದ್ದಿದ್ದರೆ ನೀನು ಇಲ್ಲಿಗೆ ಬರುತ್ತಿರಲೇ ಇಲ್ಲ. ನಿಮ್ಮ ದೇಶದ ಮತ್ತು ನಮ್ಮ ಸಂಬಂಧ ಒಳಿತಾಗಲಿಲ್ಲ. ಒಬ್ಬೊಬ್ಬರ ಬಲಿಬೀಳುತ್ತ ನಡೆದಿದೆ. ಈಗ ಉಳಿದೊಬ್ಬ ಈ ಮಗನಾದರೂ ಆ ಶಾಪದಿಂದ ದೂರವಾಗಿರಲಿ. ಈ ತಾಯಿಗೆ ಪುತ್ರಭಿಕ್ಷೆ ನೀಡು" ಎಂದು ಅಲ್ವರೆದು ಕೇಳಿಕೊಂಡಳು

ಪಾಪ! ಭಾರತಿ ತನ್ನ ಬ್ಯಾಗನ್ನೆತ್ತಿಕೊಂಡು ಹಿಂತಿರುಗಿದಳು. ಆದರೆ ಆಲ್ಬರ್ಟ ಆಕೆಗೆ ನಿಲ್ಲಲು ಸನ್ನೆ ಮಾಡಿ, "ಇದು ನಮ್ಮ ಧರ್ಮವೆ? ಬಾಗಿಲಿಗೆ ಬಂದ ಅತಿಥಿಯನ್ನು ಹೊರದೂಡುವದೆ? ಈ ಬಡಪ್ರಾಣಿಯನ್ನು ಹೊರಹಾಕುವದರ ಅರ್ಥವೇನು? ಇಂಥ ಮುಚ್ಚಂಜೆಯಲ್ಲಿ ಅರಿಯದ ಪಟ್ಟಣದಲ್ಲಿ ಆಕೆ ಎಲ್ಲಿಗೆ ಹೋಗಬೇಕು. ಇಂದು ರಾತ್ರಿ ಮಟ್ಟಿಗಾದರೂ ಆಕೆಯನ್ನು ಇರಗೊಡು" ಎಂದು ತಾಯಿಗೆ ವಿನಂತಿಸಿಕೊಂಡನು.

ಏನರ್ಸ್ಟ ಒಪ್ಪಲೇಬೇಕಾಯಿತು. ಆ ಒಂದು ರಾತ್ರಿ ಅವರೆಲ್ಲರ ಬಾಳಿನಲ್ಲಿ ಮುಂದೆ ಎಂಥ ಕ್ರಾಂತಿ ಮಾಡಿತು!

ಅಂದು ರಾತ್ರಿ ಅವರು ಮೂವರೂ ಧರ್ಮದ ವಿಷಯಕ್ಕೆ ಸಾಮಾನ್ಯವಾಗಿ ಚರ್ಚೆ ಮಾಡಿದರು. ಆಲ್ಬರ್ಟ ರಭಸದಿಂದ ಮಾತಾಡುತ್ತ ತನ್ನ ವಾದವನ್ನು ವಿವರಿಸುವಾಗ ಆತನ ಹಣೆಯ ಮೇಲಿನ ಹಸಿರು ನರವೊಂದು ಉಬ್ಬಿ ಗಂಧ ಹಚ್ಚಿದಂತೆ ಎದ್ದು ಕಾಣುತ್ತಿದ್ದಿತು. ಆತ ಮಾತಾಡುತ್ತಿರುವಾಗಲೆಲ್ಲ ಭಾರತಿ ತನ್ಮಯತೆಯಿಂದ ಆತನನ್ನೇ ನೋಡುತ್ತಿದ್ದಳು.

ಬೇರೆ ಬೇರೆ ಧರ್ಮಗಳ ಮಂದಿರಗಳು ಬೇರೆ, ಅವುಗಳ ಭಾಷೆ ಬೇರೆ, ಧರ್ಮ ಗ್ರಂಥಗಳು ಬೇರೆ. ಆದರೆ ಅವುಗಳ ಅಂತರಾತ್ಮದಲ್ಲಿ ನಿಜವಾದ ಭಿನ್ನತೆ ಇದೆಯೆ? ಕ್ರೈಸ್ತ-ಧರ್ಮದಲ್ಲಿ ಒಂದು ಮಧ್ಯವರ್ತಿ ಕಲ್ಪನೆ ಹೀಗಿದೆ "ಸಾವಧಾನರಾಗಿರಿ ಮತ್ತು ಪ್ರಾರ್ಥಿಸಿರಿ. ಏಕೆಂದರೆ ಸ್ವರ್ಗದ ರಾಜ್ಯ ಹತ್ತಿರವೇ ಇದೆ. ಈ ಆದೇಶದ ಅರ್ಥ ಇಷ್ಟೇ. ನೀವು ನಿಮ್ಮ ಅಂತಃಕರಣವನ್ನು ಪವಿತ್ರವಾಗಿರಿಸಿ ಸಿದ್ಧರಾಗಿರಿ" ಎಂದು ಪ್ರತಿಪಾದಿಸುತ್ತಿದ್ದ ಆಲ್ಬರ್ಟ ತನ್ನ ತಾಯಿಯನ್ನು ನೋಡುತ್ತಿದ್ದ, ಆಕೆಯ ಕಣ್ಣುಗಳು ತುಂಬಿಬಂದವು.

"ಎಲ್ಲರಿಗೂ ಸೂರ್ಯನು ಒಬ್ಬನೇ ಆಗಿರುವಂತೆ ಎಲ್ಲರ ಈಶ್ವರನೂ ಒಬ್ಬನೇ ಇದ್ದರೆ ಅವನ ಧರ್ಮವೂ ಒಂದೇ ಆಗಿರತಕ್ಕದ್ದು. ಈ ಮಾತು ನಿನಗೆ ಒಪ್ಪಿಗೆಯೇ"? ಎಂದು ಆತ ಭಾರತಿಯನ್ನು ಕೇಳಿದ.

ಆಕೆ ಒಮ್ಮೆಲೆ ಬೆಚ್ಚಿದಂತಾಗಿ, "ಸರಿ ಸರಿ. ನಿಜವಾಗಿಯೂ ಸರಿ" ಎಂದಳು.

"ಇದೆಲ್ಲ ನಾನೇನು ಕೈಗಂಟು ಹಾಕಿ ಹೇಳುತ್ತಿಲ್ಲ. ಅಜ್ಜಯ್ಯನಿಂದ ಕೇಳಿದ್ದನ್ನು ಹೇಳುತ್ತಿದ್ದೇನಷ್ಟೆ. ಆತನಿಗೆ ಸ್ವಾಮಿ ವಿವೇಕಾನಂದರು ಉಪದೇಶಿಸಿದ್ದರಂತೆ." ಎಂದು ಆಲ್ಬರ್ಟ ವಿವರಣೆ ನೀಡಿದ.

ಮರುದಿನ ಬೆಳಗ್ಗೆ ಭಾರತಿ ತನ್ನ ಬ್ಯಾಗ್ ಎತ್ತಿಕೊಂಡು ಅವರನ್ನು ಬೀಳ್ಕೊಳ್ಳಲು

ಎದ್ದಳು.

"ನೀನೆಲ್ಲಿಗೆ ಹೋಗುವಿ?" ಏನರ್ಜ್.

"ಎಲ್ಲೂ, ದಾರಿ ಒಯ್ದತ್ತ ಎಲ್ಲಿಗಾದರೂ?" ಎಂದು ನಗುತ್ತಲೇ ಭಾರತಿ ನುಡಿದಳು.

"ಎಲ್ಲಿಯೂ ಹೋಗಬೇಡ. ಇಲ್ಲಿಯೇ ಇರು. ಈ ಮನೆ ನಿನ್ನದೆಂದೇ ತಿಳಿದುಕೊ" ಎಂದು ಏನರ್ಜ್ ಅವಳನ್ನು ತಡೆದಳು.

ಏನರ್ಜ್ ತನ್ನ ಗಂಡನ ಭೆಟ್ಟಿಗೆಂದು ಅರೇಣಾ ಚಿಲಿಕ್ಕೆ ಹೋದಳು. ಆಗ ಭಾರತಿಯು ಮನೆಯ ಪಾರುಪತ್ಯ ವಹಿಸಿಕೊಳ್ಳಬೇಕಾಯಿತು. ಪರಕೀಯರ ಮನೆಯಲ್ಲಿ ಕೇವಲ ತರುಣನೊಬ್ಬನೊಡನೆ ವಾಸಿಸುವದರಲ್ಲಿ ಗಂಡಾಂತರ ಇದ್ದೇ ಇದೆ. ಆದರೆ ಭಾರತೀಯ ಸಂಸ್ಕೃತಿಗೆ ಕಲಂಕ ಹತ್ತುವಂಥದೇನನ್ನೂ ತಾನು ಮಾಡಬಾರದೆಂದು ಭಾರತಿ ನಿರ್ಣಯವನ್ನೇ ಕೈಕೊಂಡು ಜಾಗರೂಕಳಾಗಿದ್ದಳು.

ಜರ್ಮನಿಯಲ್ಲಿಯ ಕುಟುಂಬ ಪದ್ಧತಿಯ ಅಭ್ಯಾಸಕ್ಕಾಗಿ ಅವಳು ಹೈಡಲ್‌ಬರ್ಗ ವಿದ್ಯಾಪೀಠಕ್ಕೆ ಬಂದಿದ್ದಳು. ಮ್ಯೂಲರ ಕುಟುಂಬದ ಅತಿಥಿಯಾಗುವ ಯೋಗಾಯೋಗ ಪ್ರಾಪ್ತವಾಯಿತು. ದಿನಪಿಡೀ ಜರ್ಮನ್ ಕುಟುಂಬಗಳ ಪರಿಶೀಲನ ಕಾರ್ಯ ನಡೆದೇ ಇತ್ತು. ಆಕೆಯು ಆ ಕಾರ್ಯದಲ್ಲಿ "ಮನುಷ್ಯ ಅಲ್ಲಿಂದಿಲ್ಲಿಗೆ ಸಮ. ದೇಶ ಬೇರೆ ಎಂದು ಏನೂ ಬದಲಾಗುವದಿಲ್ಲ. ಒಬ್ಬ ಪರಮೇಶ್ವರನ ಮಕ್ಕಳು ಇವರೆಲ್ಲ. ಇವರೆಲ್ಲ ಶ್ರದ್ಧಾಳುಗಳು. ಆದರೆ ಅವರವರ ಶ್ರದ್ಧೆ ಬೇರೆ ಬೇರೆ ಸ್ಥಾನಗಳಲ್ಲಿ ನೆಲೆಸಿದ್ದರಿಂದ ಈ ಜನ ಬೇರೆ ಬೇರೆಯಾಗಿ ಕಾಣುತ್ತಾರಷ್ಟೆ" ಎಂಬ ಭಾವನೆಗಳು ಸುಳಿದುಹೋಗುತ್ತಿದ್ದವು ಆಕೆಯಲ್ಲಿ. ರಾತ್ರಿ ಈ ವಿಚಾರಗಳ ತಂದ್ರಿಯಲ್ಲಿಯೇ ಆಕೆಗೆ ನಿದ್ದೆ ಹತ್ತಿದ್ದೂ ಗೊತ್ತಾಗುತ್ತಿರಲಿಲ್ಲ.

ಒಂದು ಮಧ್ಯರಾತ್ರಿ ಭಾರತಿ ಬೆಚ್ಚಿಬಿದ್ದು ಎಚ್ಚರಾದಳು. ತನ್ನ ಕೋಣೆಯಲ್ಲಿಯೇ ತನ್ನ ಮಂಚದ ಮೇಲೆಯೇ ಆಕೆ ಪವಡಿಸಿದ್ದರೂ ವಿಚಿತ್ರಾನುಭವದ ರೋಮಾಂಚದಿಂದ ಆಕೆ ಎದ್ದಿದ್ದಳು. ಯಾರೋ ಬಂದು ಮಂಚದ ಮೇಲೆ ಕುಳಿತು ತನ್ನನ್ನು ಅಪ್ಪಿ ಚುಂಬಿಸಿದ ಅನುಭವ ಅವಳಿಗಾಗಿತ್ತು. ಪೂರ್ತಿ ಎಚ್ಚರಾದಾಗ ಯಾರೋ ಓಡಿಹೋದಂತೆ ಅನಿಸಿತು. ಎದ್ದು ದೀಪ ಬೆಳಗಿಸಿದಾಗ ಅಲ್ಲಿ ಯಾರೂ ಕಾಣಲಿಲ್ಲ. ಹೊರಗೆ ಬಂದು ನೋಡಿದಳು ಅಲ್ಬರ್ಟ ಹಾಲಿನಲ್ಲಿ ಮಲಗಿದ್ದ.

ಇದೇನು ಸ್ವಪ್ನವೊ? ಸತ್ಯವೊ? ಎಂಬ ಬಗ್ಗೆ ಆಕೆಯ ಮನಸು ವಿಚಾರಮಾಡಹತ್ತಿತು. ಯಾವ ನಿರ್ಣಯಕ್ಕೂ ಬರಲಾಗಲಿಲ್ಲ. ಮರುದಿನ ಆಕೆ ಅಲ್ಬರ್ಟನಿಗೆ ತನ್ನ ದುಗುಡವನ್ನೆಲ್ಲ ತಿಳಿಸಿ ಆತನ ಅಭಿಪ್ರಾಯ ಕೇಳಿದಳು.

"ಅದು ಸತ್ಯವಿತ್ತೆಂದೇ ಭಾವಿಸೋಣ. ಆಗ ನಿನ್ನ ಹೇಳಿಕೆ ಏನು?" ಎಂದ ಅಲ್ಬರ್ಟ.

"ಹಾಗಾದರೆ ನಾನು ಇಲ್ಲಿ ಇರುವದರ ಬಗ್ಗೆ ವಿಚಾರಮಾಡಬೇಕಾಯಿತು."

"ಈ ಸಂಗತಿ ಸತ್ಯವಾಗಿದ್ದರೆ ನೀನು ಈ ಮನೆಬಿಟ್ಟು ಹೋಗುವಿ."

ಭಾರತಿ ಹೌದೆಂದು ಗೋಣು ಹಾಕಿದಳು.

"ಸರಿ. ಇದೆಲ್ಲ ಸ್ವಪ್ನವೇ ಆಗಿದ್ದರೆ?"

"ಹಾಗಿದ್ದಲ್ಲಿ ಅದು ನನಗೆ ಸೇರುವದು."

ಆಗ ಅಲ್ಬರ್ಟ ದೊಡ್ಡದಾಗಿ ನಕ್ಕ.

"ಅಂದರೆ ಸತ್ಯದಿಂದ ದೂರ ಓಡುವದು ಮತ್ತು ಸ್ವಪ್ನಕ್ಕೆ ಅಂಟಿಕೊಳ್ಳುವದು ಇದೇ ಅಲ್ಲವೆ ಈ ಪ್ರಕಾರ. ಆದರೆ ಮನುಷ್ಯ ಸ್ವಪ್ನಕ್ಕೆ ಹೆದರಬೇಕು. ಸತ್ಯಕ್ಕೆ ಹೆದರಬಾರದು" ಎಂದು ಹೇಳಿ ಆಕೆಯನ್ನು ದಿಟ್ಟಿಸಿದ.

"ನಿಮ್ಮ ಭಾರತೀಯ ಸಾಹಿತ್ಯದಲ್ಲಿ ಇಂಥದೊಂದು ಸ್ವಪ್ನಕಥೆ ಇದೆ, ನನ್ನ ಅಜ್ಜ ಹೇಳುತ್ತಿದ್ದರು."

"ಹೌದು, ಉಷಾ ಸ್ವಪ್ನದ ಕಥೆ. ಆಕೆಯ ಸ್ವಪ್ನದಲ್ಲಿ ಅವಳ ಭಾವೀ ಪ್ರಿಯಕರ ಅನಿರುದ್ಧ ಯಾವಾಗಲೂ ಬರುತ್ತಿದ್ದ ಮತ್ತು ಆಗ..."

ಆಕೆಗೆ ವಾಕ್ಯ ಪೂರ್ತಿಮಾಡಲಾಗಲಿಲ್ಲ. ಅಲ್ಬರ್ಟ ನಗುತ್ತಿದ್ದ. ಆಕೆ ತನ್ನ ಮಾತನ್ನು ಮುಗಿಸುವ ಹಟದಿಂದ

"ಛೆ, ನನ್ನ ಸ್ವಪ್ನ ಹಾಗಿದ್ದಿಲ್ಲ. ಅವರದೇ ಬೇರೆ. ನನ್ನದೇ ಬೇರೆ" ಎಂದಳು.

"ಈಕೆ ಆಧುನಿಕ ಉಷೆ! ಇವಳ ಕಥೆಯಲ್ಲಿ

ಇವೆಲ್ಲ ಸಂಗತಿ ಬರಲಿಕ್ಕೇ ಬೇಕು."

ಅವನೆಷ್ಟು ಸವಿಸವಿ ಮಾತಾಡುತ್ತಿದ್ದ. ಅವಳಿಗೇನೊ ಕಚಗುಳಿಯಿಟ್ಟಂತಾಯಿತು. ಮುಂದೆ ಹದಿನೈದು ದಿನ ಆಕೆ ನಿತ್ಯ ಆತನನ್ನು ಕಾಡಿದರೂ ಈ ಘಟನೆಯು ಬಗೆಗೆ ಆತನಿಂದ ನಿರ್ದಿಷ್ಟ ಉತ್ತರ ಬರಲೇ ಇಲ್ಲ. ಕೊನೆಗೊಂದು ದಿನ ಆತ "ಯೋಗ್ಯ ವೇಳೆಗೆ ನಿನಗೆ ಎಲ್ಲವನ್ನೂ ಹೇಳುವೆ" ಎಂದು ಭರವಸೆ ನೀಡಿದ. ಭಾರತಿ ದಾರಿ ಕಾಯಬೇಕಾಯಿತು.

ರಮಣಾಶ್ರಮದಲ್ಲಿ ಏನ್ನಾಳಿಗೆ ಫ್ರಾಂಜ್‌ನ ಭೆಟ್ಟಿಯಾಯಿತು, ಕಾವಿ ಬಟ್ಟೆ ಧರಿಸಿದ ಆತನನ್ನು ಈಕೆ ಗುರುತಿಸುವದೇ ಕಠಿಣವಾಯಿತು. ಹೆಂಡತಿಯು ಅನುಮತಿಯು ದಾರಿ ಕಾಯುತ್ತಿದ್ದ ಫ್ರಾಂಚ್ ಇನ್ನೂ ಸಂನ್ಯಾಸ ಸ್ವೀಕರಿಸಿದ್ದಿಲ್ಲವಾದರೂ ಕಾವಿ ಬಟ್ಟೆ ಧರಿಸಲು ಪ್ರಾರಂಭಿಸಿದ್ದ. ಅವನನ್ನು ನೋಡಿದ ಕೂಡಲೆ ಕೆಲಸ ಕೆಟ್ಟಿತೆಂದು ಬಗೆದಳು. ಹೋಗಿ ರಮಣ ಮಹರ್ಷಿಯನ್ನೇ ಕಂಡಳು. ಅವರು ಏನೂ ಅನ್ನಲಿಲ್ಲ, ಆಕೆಯುನ್ನೊಮ್ಮೆ ನೋಡಿದರು ಮಾತ್ರ. ಆ ದೃಷ್ಟಿ ಸಹಿಸಲಾಗದೆ ಏನ್ನಾ ಥರಥರನೆ ನಡುಗಿದಳು. ಆ ದೃಷ್ಟಿಯಿಂದ ಆಕೆಯು ಮನಸ್ಸಿನ ವಿಕಲ್ಪಗಳೆಲ್ಲ ಅಳಿದು ಹೋದವು. ಮಹರ್ಷಿಗಳು ಅವಳನ್ನು ನೋಡಿ ನಗುತ್ತ ಹರಸುತ್ತಿದ್ದಂತೆ ಕಂಡಿತು.

ವಿದ್ಯಾನಂದ ಸ್ವಾಮಿಗಳು ಆಕೆಯನ್ನು ಪಕ್ಕದ ಹಜಾರಕ್ಕೆ ಕರೆದೊಯ್ದು ವಿಚಾರಿಸಿದರು ತನ್ನ ಗಂಡನನ್ನು ಕರೆದೊಯ್ಯಲು ಬಂದಿರುವದಾಗಿ ಆಕೆ ಹೇಳಿದಳು.

"ಈಗ ಅವರನ್ನು ಕರೆದೊಯ್ಯಲಿಕ್ಕೆ ನೀನಾರು ? ಬರಲಿಕ್ಕೆ ಅವರಾದರೂ ಯಾರು? ಪೂರ್ವ ಕರ್ಮಾನುಸಾರ ಅವಶ್ಯವಿದ್ದಷ್ಟು ದಿನ ಆತನ ಜೀವ ಸಂಸಾರದಲ್ಲಿತ್ತು. ಈಗ ಆತ ಮೋಕ್ಷಪ್ರಾಪ್ತಿಯ ದಾರಿಯಲ್ಲಿ ನಡೆಯು ಹತ್ತಿದ್ದಾನೆ. ಆತನಿಗೆ ಆತಂಕ ಒಡ್ಡಿ ಪಾಪಕ್ಕೆ ಈಡಾಗಬೇಡ" ಎಂದು ವಿದ್ಯಾನಂದ ಸ್ವಾಮಿಗಳೇ ಆಕೆಗೆ ತಿಳಿಸಿ ಹೇಳಿದರು.

ಏನ್ನಾ ಏಕಾಂತದಲ್ಲಿ ತನ್ನ ಪತಿಯನ್ನು ಕಂಡೊಡನೆ ಮೊದಲು ಅಕ್ಕಸದಿಂದ ನಿಂದಿಸಿದಳು. ಅನಂತರ ವಿನಯದಿಂದ ಕೇಳಿಕೊಂಡಳು. ಫ್ರಾಂಜ್ ಯಾವುದಕ್ಕೂ ಬಗ್ಗಲಿಲ್ಲ. ಏನ್ನಾ ನಿರಾಶೆಯಿಂದ ಸ್ವದೇಶಕ್ಕೆ ಹಿಂತಿರುಗಿದಳು ಏಕಾಕಿಯಾಗಿ

ಏನ್ನಾ ಹೈಡಲಬರ್ಗದಲ್ಲಿಯ ತನ್ನ ಮನೆಯನ್ನು ತಲುಪಿದೊಡನೆ ಮಾಡಿದ ಮೊದಲ ಕೆಲಸವೆಂದರೆ ಮನೆಯಲ್ಲಿಯ ಭಾರತೀಯ ಸಂಸ್ಕೃತಿಯ ಕುರುಹುಗಳನ್ನೆಲ್ಲ ನಾಶ ಮಾಡಿದ್ದು. ಸಂಸ್ಕೃತ ಪುಸ್ತಕಗಳನ್ನೆಲ್ಲ ಬೀದಿಗೆಸೆದಳು. ಶಂಕರನ ಹಾಗೂ ಬಾಲಮುಕುಂದನ ಮೂರ್ತಿಗಳನ್ನು ಕಿತ್ತಿ ಹಾಕಿದಳು. ಭಾರತೀಯ ಸಂಸ್ಕೃತಿಯನ್ನೇ ತನ್ನ ಮನೆಯಿಂದ ಕಿತ್ತಿ ಹಾಕುವಂತೆ ಆಡಿದಳು.

"ಈ ಊರನ್ನೇ ಬಿಟ್ಟು ಹೋಗೋಣ. ಇಲ್ಲಿ ನನಗೇನೂ ಸುಖ ಸಿಗಲಿಲ್ಲ"–ಏನ್ನಾ.

"ಹೀಗೇಕೆನ್ನುವಿರಿ ?" ಎಂದಳು ಭಾರತಿ.

"ಈ ಊರು ವಿದ್ಯೆಯ ತವರೂರು. ಈ ಕೇರಿ ಭಾರತೀಯ ಸಂಸ್ಕೃತಿಯ ಅಡ್ಡೆ. ಇಲ್ಲಿ ಅಧ್ಯಾತ್ಮಿಕ ವಿದ್ಯೆ, ವೇದಾಂತ ಚರ್ಚೆಗಳ ಸುಭಿಕ್ಷೆಯು ಕಾಣುವದು. ನನ್ನ ಮಾವ, ಗಂಡ ಇವರಿಗೂ ಇದೇ ಹುಚ್ಚು ಹಿಡಿದಿತ್ತು. ಅದರಲ್ಲಿಯೆ ಹಾಳಾಗಿ ಹೋದರು. ನನ್ನ ಮಗನನ್ನು ಮಾತ್ರ ಈ ಅಪಘಾತದಿಂದ ಉಳಿಸಿಕೊಂಡೆ" ಎಂದು ಅರಚಿದಳು ಏನ್ನಾ.

ಏನ್ನಾಳ ಕಲ್ಪನೆಯಂತೆ ಅವಳ ಸುಖ ಸುಟ್ಟು ಬೂದಿಯಾಯಿತು. ಆದರೆ ಇವೆಲ್ಲಕ್ಕೆ ಭಾರತೀಯ ಸಂಸ್ಕೃತಿ ಹೇಗೆ ಕಾರಣ ? ಸುಖಕ್ಕೆ ಅಡ್ಡ ಬರುವ ಧರ್ಮ ಅದೆಂಥ ಧರ್ಮ. ಜನ ತಪ್ಪಬಹುದು. ಆದರೆ ಧರ್ಮ ತಪ್ಪಲಾರದು ಎಂದೆಲ್ಲ ಉತ್ತರಿಸಬೇಕೆಂದು ಭಾರತಿ ಮಾಡಿದ್ದಳು. ಆದರೆ ಬಾಯಿ ಬಿಡಲಿಲ್ಲ.

ರಾತ್ರಿ ಅಲ್ಬರ್ಟ ಬಂದ ನಂತರ ಏನ್ನಾ ಮತ್ತೆ ತನ್ನ ಭಾರತ ಸಂಚಾರದ ಪುರಾಣ-ಓದಿದಳು. ತನ್ನ ಕುಟುಂಬದ ಸರ್ವಸ್ವಘಾತವಾಯಿತು ಎಂದು ಆಕ್ರೋಶ ಮಾಡಿದಳು ಭಾರತೀಯ ಸಂಸ್ಕೃತಿಯನ್ನು ಮತ್ತಷ್ಟು ನಿಂದಿಸಿದಳು.

ಕಾಲಚಕ್ರ ಉರುಳುತ್ತಲೇ ಇತ್ತು.

# ಸೋನಾ

ಸ್ಯಾಂಡಲ್ ಸೋಪ್

ಶುದ್ಧವಾದ ಮೈಸೂರು ಶ್ರೀಗಂಧ ತೈಲದ ಶ್ರೀಮಂತ ಸುಗಂಧ...

ನೀವು ಸ್ನಾನ ಮಾಡುವಾಗ ಸೋನಾ ತನ್ನ ಶುದ್ಧವಾದ ಮೈಸೂರು ಗಂಧದೆಣ್ಣೆಯ ಆಹ್ಲಾದಕರ ಪರಿಮಳವನ್ನು ಸುತ್ತಲೂ ಹರಡುತ್ತದೆ. ಸೋನಾ ಸಾಬೂನಿನ ನವುರಾದ ನೊರೆಯಲ್ಲಿ ನಾವೀನ್ಯತೆಯಿದೆ. ಯಾವಾಗಲೂ ಸೋನಾ ಸ್ಯಾಂಡಲ್ ಸೋಪನ್ನೇ ಉಪಯೋಗಿಸಿ, ಘಮಘಮಿಸುವ ಪರಿಮಳದಲ್ಲಿ ತೇಲಾಡಿರಿ.




ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್

ದ್ವಿತೀಯ ಮಹಾಯುದ್ಧದ ಪರಿಣಾಮವು ಮ್ಯೂಲರ ಕುಟುಂಬದ ಮೇಲೆ ಎಳ್ಳಷ್ಟೂ ಆಗಿದ್ದಿಲ್ಲ. ಮ್ಯಾನ್‌ಫ್ರೆಡ್, ಫ್ರಾಂಜರ ಕಾಲ ಹಿಂದಾಗಿತ್ತು. ಈಗ ತಾನು ಸರಿಯಾದ ದಾರಿಯಲ್ಲಿ ನಡೆಯುತ್ತಿದ್ದೇನೆಂಬ ಆತ್ಮ ವಿಶ್ವಾಸ ಅಲ್ಬರ್ಟನಲ್ಲಿ ಮೂಡಿತ್ತು. ತನ್ನ ಮಾತು ಕೇಳಿ ತಾಯಿ ಏರ್ನಾ ಭಾರತಿಗೆ ಮನೆಯಲ್ಲಿ ಆಶ್ರಯ ನೀಡಿದ್ದಕ್ಕೆ ಆತನಿಗೆ ಸಂತೋಷವಾಗಿತ್ತು. ಆತ ಭಾರತಿಯನ್ನು ಸೂಕ್ಷ್ಮವಾಗಿ ಪರೀಕ್ಷಿಸುತ್ತಿದ್ದ. ಒಳ್ಳೆಯ ಹುಡಿಗಿ ಎಂಬ ಅಭಿಪ್ರಾಯವನ್ನು ಆಕೆಯ ಬಗ್ಗೆ ಕಟ್ಟಿಕೊಂಡಿದ್ದ. ತಾಯಿ ಭಾರತಕ್ಕೆ ಹೋಗಿದ್ದಾಗ ಇವರಲ್ಲಿ ಸಲಿಗೆ ಹೆಚ್ಚಿತು. ಹಿಂದೂ ಧರ್ಮದ ಬಗ್ಗೆ, ವಿವೇಕಾನಂದರ ಬಗ್ಗೆ ಅಲ್ಬರ್ಟ ಭಾರತಿಯೊಡನೆ ಹೆಚ್ಚುಚ್ಚು ಚರ್ಚಿಸತೊಡಗಿದ್ದ, ಪರಸ್ಪರರನ್ನು ಅರಿತುಕೊಳ್ಳಲು ಅವರ ಮನಸ್ಸುಗಳು ಆತುರಗೊಂಡಿದ್ದವು. ಆದರೆ ಏರ್ನಾ ಭಾರತದಿಂದ ನಿರಾಶೆಗೊಂಡು ಹಿಂತಿರುಗಿದ್ದರಿಂದ ಅವರಿಬ್ಬರೂ ಸದ್ಯ ತೆಪ್ಪಗಿದ್ದರು.

ನಾಲ್ಕು ದಿನಗಳ ನಂತರ ಅಲ್ಬರ್ಟ ಸಂಜೆಗೆ ಮನೆಗೆ ಬಂದವನೆ ಭಾರತಿಯನ್ನು,

"ನೆರೆಯ ಹಳ್ಳಿಯಲ್ಲಿ ನಮ್ಮ ಕಂಪನಿ ಒಂದು ಕೆಲಸ ಪ್ರಾರಂಭಿಸಿದೆ; ನಾನು ಹೋಗಬೇಕು; ನೀನೂ ನನ್ನೊಂದಿಗೆ ಬರುವಿಯಾ" ಎಂದು ವಿಚಾರಿಸಿದ; ಆಕೆ ಒಪ್ಪಿದಳು; ತನ್ನ ಯೋಜನೆ ಫಲಿಸುತ್ತಿರುವದನ್ನು ಕಂಡು ಅಲ್ಬರ್ಟ ಒಳಗೊಳಗೇ ಹಿಗ್ಗಿದ;

"ಈ ಗುಡ್ಡದ ಆಚೆಗೆ! ಲಿಬಡೋರ್ಫ ಅಂದರೆ ಪ್ರಣಯದ ಗ್ರಾಮ ಇದೆ. ನೀನೂ ಹಳ್ಳಿಯಲ್ಲಿ ನಿನ್ನ ಸಂಶೋಧನ ಕಾರ್ಯ ಮುನ್ನಡೆಸಿದಂತಾಗುತ್ತದೆ."

"ಅಲ್ಲೇನು ಪ್ರಣಯದ ಬೆಳೆ ಬರುವದೆ ?"

"ಈಗ ಬರಲಿದೆ" ಎಂದು ನಕ್ಕ.

ಭಾರತಿಯು ವಿಷಯಾಂತರ ಮಾಡಿದ್ದರಿಂದ ಆಕೆಯ ಮನಸ್ಸಿನ ಆಳ ಅಲಬರ್ಟನಿಗೆ ತಿಳಿಯಲಿಲ್ಲ. ಲಿಬಡೋರ್ಫ ಹಳ್ಳಿಗೆ ಹೋದ ಬಳಿಕವೂ ಇವರ ಮನಸ್ಸಿನ ಅನಿಶ್ಚಿತತೆ ಹಾಗೇ ಉಳಿಯಿತು;

ಯುದ್ಧೋತ್ತರ ಕಾಲದಲ್ಲಿ ಕ್ರುಪ್ ಕಂಪನಿಗೆ ಶಸ್ತ್ರಾಸ್ತ್ರಗಳನ್ನು ತಯಾರಿಸುವ ಕೆಲಸವಿಲ್ಲದ್ದರಿಂದ ಚಲಚ್ಚಿತ್ರ ನಿರ್ಮಾಣ ಕಾರ್ಯ ಆರಂಭಿಸಿತ್ತು. ಅಂಥದೊಂದು ಚಿತ್ರದ ಚಿತ್ರೀಕರಣಕ್ಕಾಗಿ ಅವರ ತಂಡ ಲಿಬಡೋರ್ಫಗೆ ಬಂದಿತ್ತು. ಅಲ್ಬರ್ಟ ಭಾರತಿ ಇವರಿಗಾಗಿ ಮೂರು ಕೋಣೆಗಳ ಪುಟ್ಟ ಮನೆಯೊಂದನ್ನೇ ಬಿಟ್ಟು ಕೊಡಲಾಗಿತ್ತು.

ಲಿಬಡೋರ್ಫದಲ್ಲಿಯ ಸ್ವತಂತ್ರ ಸ್ವಚ್ಛಂದ ವಾತಾವರಣದಲ್ಲಿ, ಆಕರ್ಷಕ ನಿಸರ್ಗ ಸೌಂದರ್ಯದ ಮಡಿಲಲ್ಲಿ ಅವರಲ್ಲಿ ಪರಸ್ಪರ ಆಕರ್ಷಣೆ ಹೆಚ್ಚುತ್ತ ನಡೆಯಿತು. ಭಾರತಿ ಸಂಯಮ ಶೀಲಳಾದಷ್ಟು ಅಲ್ಬರ್ಟನನ್ನು ಕೆಣಕಿದಂತಾಗುತ್ತಿತ್ತು. ಒಂದು ರಾತ್ರಿ ಅಲ್ಬರ್ಟ ಆಕೆಯನ್ನು ತಡವಿದ;

"ಭಾರತಿ ನಿಜ ಹೇಳು, ನಿನಗೆ ಇಂಥದೇನೂ ಸೇರುವದಿಲ್ಲವೇ?"

"ಏ, ನೀನೇಕೆ ನನ್ನನ್ನು ಅರಿತುಕೊಳ್ಳುವದಿಲ್ಲ? ನಾನು ಭಾರತೀಯಳು, ಕುಮಾರಿಯಾಗಿ ಇಂಥ ಚಲ್ಲಾಟ ನಡೆಸಲಾರೆ."

"ನಿಮ್ಮ ಶಕುಂತಲೆ, ನಿಮ್ಮ ಉಷೆ, ನಿಮ್ಮ ಗೌರಿ ಇವರೆಲ್ಲ ಪ್ರೀತಿ ಮಾಡಿರಲಿಲ್ಲವೆ?".

"ಅವರೆಲ್ಲರೂ ತಮ್ಮ ಪ್ರಿಯಕರನಿಗೆ ಮೊದಲು ಮನಸ್ಸು ಕೊಟ್ಟಿದ್ದರು, ನಂತರ ತಮ್ಮ ತನುಲತೆ..."

"ಅಂದರೆ? ನೀನು ನನಗೆ ನಿನ್ನ ಮನಸ್ಸನ್ನು ಕೊಟ್ಟೇ ಇಲ್ಲ, ಹಾಗಾದರೆ?"

ಭಾರತಿ ಮೌನವಾಗಿದ್ದಳು. "ನೀನು ನನ್ನ ಮನಸ್ಸನ್ನು ಎಂದೋ ಕದ್ದು ಓಡಿರುವಿ" ಎಂದು ಹೇಳಬೇಕೆನಿಸಿತು ಆಕೆಗೆ. ಆದರೆ ಆಕೆಯ ಬಾಯಿಂದ ಮಾತು ಹೊರಬರಲೇ ಇಲ್ಲ.

"ನಾನು ನಿನಗೆ ನನ್ನ ಮನಸ್ಸು ಕೊಟ್ಟ ಬಗ್ಗೆ ಎಂದು ಹೇಳಿದ್ದೇನೆ" ಎಂಬ ಶಬ್ದಗಳು ಹೊರಬಿದ್ದವು. ಇಷ್ಟೇ ಪ್ರಚೋದನೆ ಅಲ್ಬರ್ಟನಿಗೆ ಸಾಕಾಗಿತ್ತು.

ಅಂದು ಅವರ ಪ್ರೇಮದ ಬೆಳೆ ಫಲಿಸಿತು.

ಅವರು ಮನೆಗೆ ಹಿಂತಿರುಗಿದಾಗ ಅವರ ಮನಸ್ಸಿಗೆ ಆನಂದವಾಗಿತ್ತೊ, ಇಲ್ಲವೊ ಅವರಿಗೇ

ತಿಳಿಯದಂತಾಗಿತ್ತು. ಆದರೆ ಅನಿಸುತ್ತಿದ್ದದ್ದು ಇಷ್ಟೇ– ಮನಸ್ಸಿನ ದೈವೀ ಪ್ರೇಮಕ್ಕೆ ದೇಹದ ಆಸುರಿ ಲಾಲಸೆಯು ಕುಂದನ್ನು ತಂದಿತ್ತು.

ಆಲ್ಬರ್ಟ– ಭಾರತಿ ಲಿಬಡೋರ್ಫ ಸಂಚಾರದಿಂದ ಹೈಡಲಬರ್ಗಕ್ಕೆ ಹಿಂತಿರುಗಿದ್ದು ಪರಸ್ಪರ ವಿವಾಹವಾಗಬೇಕು ಎಂಬ ದೃಢ ನಿರ್ಧಾರದಿಂದಲೇ. ಆದರೆ ಅವರು ಮನೆಗೆ ಬರುವಷ್ಟರಲ್ಲಿ ಏನ್ನಾ ದುಃಖ ಸಾಗರದಲ್ಲಿ ಮುಳುಗಿ ಹೋಗಿದ್ದಳು. ಇವರು ಬಂದರೂ ಇವರನ್ನು ಏನ್ನಾ ತಲೆಯೆತ್ತಿ ನೋಡದೆ ಆಲ್ಬರ್ಟನ ಕೈಗೆ ಒಂದು ಪತ್ರವನ್ನಿತ್ತಳು. ರಮಣಾಶ್ರಮದ ವಿದ್ಯಾನಂದ ಸ್ವಾಮಿಗಳ ಪತ್ರವಾಗಿತ್ತು ಅದು- ಅದರ ಸಾರಾಂಶ ಇಷ್ಟೇ.

"ಫ್ರಾಂಜ್ ಮ್ಯೂಲರ ನಾಲ್ಕು ದಿನ ರಕ್ತದ ಒತ್ತಡದಿಂದ ನರಳಿ ಪ್ರಾಣ ತ್ಯಾಗ ಮಾಡಿದರು. ಈ ಸುದ್ದಿ ನಾನು ನಿಮಗೆ ತಿಳಿಸಬೇಕಾದುದು ನನ್ನ ದುರ್ಭಾಗ್ಯ. ನಿಮ್ಮ ಮ್ಯುಲರ್ ಸಾಹೇಬರಿಗೆ ಭಾರತದ ಬಗ್ಗೆ ಎಂಥ ಹುಚ್ಚು ಮತ್ತು ಇಲ್ಲಿಯೇ ಅವರ ನಿಧನವಾಗಬೇಕೆಂದರೆ ಎಂಥಾ ಯೋಗಾಯೋಗ! ನಿಮ್ಮ ಸಮ್ಮತಿ ಇಲ್ಲವೆಂದು ಗೊತ್ತಾದ ಕೂಡಲೆ ಅವರು ಸಂನ್ಯಾಸ ಸ್ವೀಕಾರದ ತಮ್ಮ ನಿರ್ಣಯವನ್ನು ತ್ಯಜಿಸಿದರು. ಆದರೂ ತಮ್ಮ ಸಾಧನೆಯನ್ನು ಮುಂದುವರಿಸಿದರು. ಬಹಳಷ್ಟು ಪ್ರಗತಿ ಸಾಧಿಸಿದ್ದರು. ಅವರು ಕಾಯಿಲೆ ಬಿದ್ದಾಗ ಅವರಿಗೆ ತಮ್ಮ ಅವಸಾನದ ಸೂಚನೆ ಸಿಕ್ಕಿರಬೇಕು. ಭಾರತದಲ್ಲಿ ನಿಧನ ಹೊಂದುವ ನಾನೆಂಥ ಭಾಗ್ಯಶಾಲಿ. ನನಗೆ ಮೋಕ್ಷ ಸಿಗದಿದ್ದರೂ ಚಿಂತೆಯಿಲ್ಲ, ಭಾರತದಲ್ಲಿಯೇ ಪುನರ್ಜನ್ಮ ಲಭಿಸಲಿ ಎಂದು ಹಾರೈಸಿದರು. ಅವರ ಅಪೇಕ್ಷೆಯಂತೆ ಅರುಣಾಚಲದ ಪವಿತ್ರ ಭೂಮಿಯಲ್ಲಿ ಅವರ ದೇಹದ ದಹನ ಮಾಡಿ ಎಲ್ಲ ಅಸ್ಥಿಗಳನ್ನು ಗಂಗೆಯಲ್ಲಿ ವಿಸರ್ಜಿಸಿದೆವು."

ಆಲ್ಬರ್ಟ ಪತ್ರ ಓದಿ ಮುಗಿಸಿದರೂ ಏನ್ನಾ ಇನ್ನೂ ಅಳುತ್ತಲೇ ಇದ್ದಳು.

"ದೈವ ಹೀಗೆ ನನ್ನ ಮೇಲೆ ಸೇಡು ತೀರಿಸಿಕೊಂಡಿದೆ, ಭಾರತದ ಬಗೆಗಿನ ನನ್ನ ಅಪಾರ ದ್ವೇಷಕ್ಕಾಗಿ ಯಾವುದೋ ದುಷ್ಟ ಶಕ್ತಿಯು ಹೀಗೆ ಸೇಡು ತೀರಿಸಿಕೊಂಡಿತು. ನಾ ಸಹಿಸಲಾರೆ. ಏನು ಮಾಡಲಿ..." ಎಂದು ಏನ್ನಾ ಪರಿತಪಿಸಿದಳು.

ಆಲ್ಬರ್ಟ್ ಭಾರತಿ ಇಬ್ಬರೂ ಮೌನವಾಗಿದ್ದರು.ತಮ್ಮ ಬಗೆಗೇ ಅವರಿಗೆ ನಾಚಿಕೆ ಬಂದಂತಾಯಿತು, ಆಗಂತೂ ಅವರ ಬಾಯಿಂದ ಮಾತುಗಳೇ ಹೊರಬರಲಿಲ್ಲ. ಮದುವೆಯ ಅವರ ನಿರ್ಧಾರ ಅವರಲ್ಲಿಯೇ ಉಳಿಯಿತು.

ಏನೇ ಆಗಲಿ, ತಮ್ಮ ವಿವಾಹಕ್ಕೆ ಏನ್ನಾಳ ಒಪ್ಪಿಗೆ ಪಡೆಯಬೇಕಲ್ಲ. ಎರಡು ತಿಂಗಳು ಉರುಳಿದ ತರುವಾಯ ಆಲ್ಬರ್ಟ ತನ್ನ ಕರ್ತವ್ಯ ಪಾಲನೆ ಎಂಬಂತೆ ತಾಯಿಯ ಎದುರು ತಮ್ಮ ಲಗ್ನದ ಪ್ರಸ್ತಾಪ ಮಾಡಿದ. ಆ ಮಾತು ಕೇಳಿ ಆಕೆ ಕೋಪದಿಂದ ಕಂಪಿಸಹತ್ತಿದಳು.

"ಅಂದು ನಿನ್ನನ್ನು ಮನೆಯೊಳಗೆ ಕರೆದುಕೊಂಡೆ. ಅದೇ ನನ್ನ ತಪ್ಪು. ಆದರಿಂದ ನನ್ನ ಘಾತವೇ ಆಯಿತು. ಈ ಮನೆಯಿಂದ ನೀನು ಹೊರಟುಹೋಗು" ಎಂದು ಏನ್ನಾ ಭಾರತಿಗೆ ಅಬ್ಬರಿಸಿದಳು.

ಆಲ್ಬರ್ಟನಿಗೆ ದಿಗ್ಭ್ರಮೆಯಾಯಿತು.

"ಮಗು, ಈಗ ಮಾತ್ರ ನೀನು ಕೈ ಹಾಕಬೇಡ. ಈ ಪೀಡೆ ತೊಲಗಿತೆಂದರೆ ನಿನಗೆ ನಾಲ್ಕು ದಿನ ಸುಖ ಸಿಕ್ಕೀತು. ನಾ ಸುಳ್ಳಾಡುವದಿಲ್ಲ. ಆ ಮಾಟದ ದೇಶದ ಹೆಣ್ಣು ನಮ್ಮ ಮನೆಗೆ ಕಾಲಿಟ್ಟಳು, ನಮ್ಮ ಮನೆಯ ಸುಖವೆಲ್ಲ ಮಂಗಮಾಯವಾಯಿತು. ಭಾರತದ ಈ ಹುಡಿಗಿಯ ಮೋಹದಲ್ಲಿ ಬೀಳಬೇಡ. ಸಂಕಟದೊಡನೆ ಲಗ್ನ ಮಾಡಿಕೊಳ್ಳಬೇಡ" ಎಂದು ಮಗನಿಗೆ ಏನ್ನಾ ಬುದ್ಧಿವಾದ ಹೇಳಿದಳು.

"ಆಕೆ ನನ್ನ ಘಾತ ಮಾಡಿಲ್ಲ. ನಾನೇ ಅವಳ ಘಾತ ಮಾಡಿದ್ದೇನೆ. ಬೇಕಾದರೆ ನನ್ನನ್ನೇ ಈ ಮನೆಯಿಂದ ಹೊರದಬ್ಬು. ಅವಳನ್ನು ಮನೆಯಲ್ಲಿ ಇಟ್ಟುಕೋ. ಅವಳು ಹೋದರೆ ಮನೆಯ ಭಾಗ್ಯವೇ ಹೊರಗೆ ಹೋದೀತು." ಎಂದು ತಾಯಿಗೆ ಹೇಳಿಬಿಡಬೇಕೆಂದು ಆಲ್ಬರ್ಟನಿಗೆ ಅನಿಸಿದರೂ ಆತನ ಬಾಯಿಂದ ಆಗ

226-17

ಮಾತೇ ಹೊರಬೀಳಲಿಲ್ಲ.

ಮಿರ್ಯಾಲರ ಕುಟುಂಬದಿಂದ ಭಾರತಿ ಹೊರಬಿದ್ದಳು- ಅಕ್ಷರಶಃ ಅವಳು ಬೀದಿ ಪಾಲಾದಂತೆ ಆಯಿತು. ಪಾಲಿಗೆ ಬಂದಿದ್ದು ಪಂಚಾಮೃತ ಎಂದರೂ ಅದನ್ನು ಒಪ್ಪಿಕೊಳ್ಳಲು ಆಕೆಗೆ ಪರಮಾವಧಿ ದುಃಖವಾಗುತ್ತಿತ್ತು. ಆಕೆ ತಾಯಿಯಾಗಲಿದ್ದಳು. ಕೌಮಾರ್ಯಾವಸ್ಥೆಯಲ್ಲಿ ಲಭಿಸುವ ತಾಯ್ತನ ಪವಿತ್ರವೆಂದು ಪರಿಗಣಿಸಲು ಬಂದೀತೆ? ಭಾರತೀಯ ಸಂಸ್ಕಾರದ ಆಕೆಗೆ ಇದೇಕೋ ವಿಚಿತ್ರ ಅನಿಸತೊಡಗಿತು: ತನ್ನ ದೇಶದಲ್ಲಿಯೂ ಕುಂತಿ ಶಕುಂತಲೆಯರ ಉದಾಹರಣೆಗಳಿದ್ದವು. ಪಾಶ್ಚಾತ್ಯರ ಪವಿತ್ರ ಕುಮಾರಿ ಮಾತೆ ಮೇರಿಯೂ ಅವಳಿಗೆ ಗೊತ್ತು. ನಿಜವಾದ ಪ್ರೇಮದ ಆಧಾರವುಳ್ಳ ಮಾತೃತ್ವವನ್ನು ಒಟ್ಟಾರೆ ಪವಿತ್ರವೆಂದೇ ಮನ್ನಿಸಬೇಕು ಎಂಬ ಆಧಾರವೇ ಅವಳಿಗೆ ಪುರಾಣ ಗ್ರಂಥಗಳಿಂದ ಸಿಗುತ್ತಿತ್ತು.

ಅವಳ ಸುದೈವವಿಷ್ಟೇ, ಆಲ್ಬರ್ಟ ಅವಳಿಗೆ ಬೆಂಬಲವಾಗಿ ನಿಂತಿದ್ದ. ಆತನ ಮಿತ್ರನೊಬ್ಬ ನಿಟಿ ವರ್ಗವಾಗಿದ್ದರಿಂದ ಆಲ್ಬರ್ಟ ಆತನ ಕೋಣೆಯಲ್ಲಿ ಭಾರತಿಯು ಉಳಿದುಕೊಳ್ಳಲು ಏರ್ಪಾಡು ಮಾಡಿದ. ದಿನಾಲೂ ಆಕೆಯನ್ನು ಭೆಟ್ಟಿಯಾಗಿ ಆಕೆಗೆ ಧೈರ್ಯ ಹೇಳುತ್ತಿದ್ದ.

"ನೀನು ಚಿಂತಿಸಬೇಡ, ತಾಯಿಯ ದುಃಖ ಇನ್ನೂ ಹಸಿಯಿದೆ. ಕೆಲದಿನ ಕಳೆಯಲಿ, ನಾವು ಲಗ್ನವಾಗೋಣ. ನೀನು ಎಳ್ಳಷ್ಟೂ ಶಂಕಿಸಬೇಡ."

"ನನಗೇನೂ ಶಂಕೆಯಿಲ್ಲ."

"ಕೈಯಲ್ಲಿ ಸಿಕ್ಕ ರತ್ನ ಯಾರಾದರೂ ಕಳೆದುಕೊಳ್ಳುವರೇ?" ಎಂದು ಆಲ್ಬರ್ಟ ಸಂತೈಸಿದಾಗ ತನ್ನ ತಾಯ್ತನದ ಕಲ್ಪನೆಯಿಂದ ಆಕೆ ಪುಲಕಿತಳಾಗುವಳು.

ಕೆಲದಿನಗಳು ಉರುಳಿದ ನಂತರ ಆಲ್ಬರ್ಟ ಭಾರತಿಯ ಕೋಣೆಗೆ ಬಂದು ತನಗೆ ಬಡತಿಯಾದ ಸಂತೋಷದ ಸಮಾಚಾರ ಹೇಳಿದ.

"ಸಿಹಿ ಇಲ್ಲದ ಇದೆಂಥ ಸಿಹಿ ಸುದ್ದಿ" ಎಂದು ಆಕೆ ಅಂದಾಗ, "ಎಷ್ಟು ಬೇಕು ಸಿಹಿ, ಇಲ್ಲವೆಂದವರಾರು" ಎಂದು ಆತ ಮುಂಬಾಗಿದ.

ಆಕೆ "ಇದಿರಲಿ, ಏನು ಸಮಾಚಾರ ಹೇಳು?" ಎಂದು ಪ್ರಶ್ನಿಸಿದಳು.

"ನಮ್ಮ ಕಂಪನಿ ಭಾರತದಲ್ಲಿ ಅಲ್ಲಿಯವರ ಸಹಕಾರದಿಂದ ಚಲಚ್ಚಿತ್ರಗಳನ್ನು ತಯಾರಿಸಲಿದೆ, ನನಗೆ ಬಡತಿ ಕೊಟ್ಟು ಭಾರತಕ್ಕೆ ಕಳಿಸಲಿದ್ದಾರೆ." ಎಂದು ಆತ ತಿಳಿಸಿದಕೂಡಲೇ ಭಾರತಿ ರಝರ್ರನೆ ಇಳಿದು ಹೋದಳು.

"ನಿಮ್ಮ ದೇಶಕ್ಕೆ ಹೋಗಲು ಯಾರೂ ಸಿದ್ಧರಿದ್ದಿಲ್ಲ. ನನ್ನ ಅಜ್ಜ–ಅಪ್ಪನನ್ನು ಆಕರ್ಷಿಸಿದ ದೇಶವನ್ನು ಕಣ್ತುಂಬ ನೋಡಬೇಕೆಂಬ ಆಸೆ ನನಗೆ. ಅಂತೇ ಒಪ್ಪಿಕೊಂಡು ಬಿಟ್ಟೆ."

ಭಾರತಿ ಮೌನವಾಗಿದ್ದನ್ನು ಕಂಡು

"ಈ ಸುದ್ದಿ ಕೇಳಿ ನೀನು ಕುಣಿದಾಡುವಿ ಎಂದಿದ್ದೆ. ನೋಡು ನಾ ನಿನ್ನ ನಾಡಿಗೆ ಹೊರಟಿದ್ದೇನೆ."

"ಅದು ಶಕ್ಯವಿಲ್ಲ, ಆಲ್ಬರ್ಟ, ಶಕ್ಯವಿಲ್ಲ"

"ಏಕೆ?"

"ನಿನ್ನ ತಾಯಿಯನ್ನು ಕೇಳು."

ಆಲ್ಬರ್ಟ ತನ್ನ ಮನೆಗೆ ಹೋಗಿ ತಾಯಿ ಮಿನರ್ವಾಳಿಗೆ ತನಗೆ ದೊಡ್ಡ ಬಡತಿ ಸಿಕ್ಕಿರುವದಾಗಿಯೂ ಅದಕ್ಕಾಗಿ ಪರದೇಶಕ್ಕೆ ಹೋಗಬೇಕಾಗಿದೆ ಎಂದೂ ತಿಳಿಸಿದನು.

"ಭಾರತ ಬಿಟ್ಟು ಬೇಕಾದ ದೇಶಕ್ಕೆ ಹೋಗು."

"ನಾನು ಭಾರತಕ್ಕೇ ಹೋಗಬೇಕು."

"ನಾನು ಸತ್ತಮೇಲೆ ನೀನು ಅಲ್ಲಿಗೆ ಹೋಗುವಿಯಂತೆ. ನೀನು ಭಾರತಕ್ಕೆ ಹೋದರೆ ನಾನು ಜೀವಂತ ಉಳಿಯುವದು ಅಷ್ಟರಲ್ಲಿಯೇ ಇದೆ."

"ನೌಕರಿಗಾಗಿಯೂ ನಾನು ಭಾರತಕ್ಕೆ ಹೋಗಬಾರದು ಎಂದು ನಿನ್ನ ಮತವೇ?"

"ಬೇಕಾದ್ದು ಮಾಡಿಕೋ. ಹೇಳಿ ಹೇಳಿ ನನಗೆ ಸಾಕಾಗಿದೆ. ನಿಮ್ಮನ್ನು ತಡೆದಾದರೂ ಏನು ಪ್ರಯೋಜನ"

"ನಿನಗೆ ಇಷ್ಟು ಬೇಡವಾಗಿದ್ದರೆ ನಾನು ಹೋಗುವದಿಲ್ಲ" ಎಂದು ತಾಯಿಗೆ ಭರವಸೆ ನೀಡಿ ಆಲ್ಬರ್ಟ ಹಿಂತಿರುಗಿದ.

ಮರುದಿನವೇ ಆಲ್ಬರ್ಟ ತನ್ನ ಕಂಪನಿಯ

ಆಫೀಸಿಗೆ ಹೋಗಿ ವರಿಷ್ಠಾಧಿಕಾರಿಯನ್ನು ಕಂಡನು. ಅಲ್ಲದೆ ತನ್ನ ತಾಯಿಯ ಆಜ್ಞಾಪಾಲನೆಗಾಗಿ ತಾನು ಭಾರತಕ್ಕೆ ಹೋಗುವುದಿಲ್ಲ ಎಂದು ನಿವೇದಿಸಿದನು.

"ನಾನು ನಿನ್ನನ್ನು ಆಕ್ಷೇಪಿಸುವುದಿಲ್ಲ. ಭಾರತಕ್ಕೆ ಹೋಗಬೇಡ. ಎರಡು ತಿಂಗಳ ಮಟ್ಟಿಗೆ ತೆಹರಾನಕ್ಕೆ ಹೋಗಿ ಅಲ್ಲಿಯ ಎಣ್ಣೆ ಗಣಿಗಳ ಪರಿಶೀಲನೆ ಮಾಡಿ ಬಾ. ಅಷ್ಟರಲ್ಲಿ ಕೆನ್ಯಾದಲ್ಲಿ ನಮ್ಮ ಕಂಪನಿಯ ಕೆಲಸ ಪ್ರಾರಂಭವಾಗುವುದು. ಅಲ್ಲಿಗೆ ಹೋದರಾಯಿತು. ಭಾರತಕ್ಕೆ ಏಕೆ ಹೋಗಬೇಕು, ಆಯಿತಲ್ಲ" ಎಂದು ಆ ವರಿಷ್ಠಾಧಿಕಾರಿಯು ಆಲ್ಬರ್ಟನಿಗೆ ತೆಹರಾನದ ಕೆಲಸ ಹಚ್ಚಿದನು. ಆಲ್ಬರ್ಟನೂ ಒಪ್ಪಿಕೊಂಡು ನೇರವಾಗಿ ಮನೆಗೆ ತೆರಳಿ ತನ್ನ ತಾಯಿಗೆ ಈ ಮಾರ್ಪಾಡನ್ನು ತಿಳಿಸಿದ.

ಏನರ್ಾ ಕೂಡಲೆ ಒಪ್ಪಿಕೊಂಡಳು. ಆಲ್ಬರ್ಟ ತೆಹರಾನಕ್ಕೆ ಹೋದರೆ ಅವನಿಗೆ ಭಾರತಿಯ ನೆನಪು ಮಾಸೀತು ಎಂದು ಆಕೆಯ ಎಣಿಕೆ.

ನಂತರ ಆಲ್ಬರ್ಟ ಭಾರತಿಯ ಕೋಣೆಗೆ ಹೋಗಿ ಆಕೆಗೂ ಈ ಬದಲಾವಣೆಯ ವಿಚಾರ ತಿಳಿಸಿದ. ಆದರೆ ಆಕೆಗೆ ಎಳ್ಳಷ್ಟೂ ಸಮಾಧಾನವಾಗಲಿಲ್ಲ. ಈಗ ಆಗುತ್ತಿರುವುದೆಲ್ಲ ತನ್ನ ಒಳಿತಿಗಾಗಿ ಅಲ್ಲ. ತನಗೆ ಇನ್ನು ಉಳಿಗಾಲವಿಲ್ಲ ಎಂದು ಆಕೆಗೆ ಒಂದೇಸಮನೆ ಅನಿಸುತ್ತಿದ್ದಿತು.

ಪ್ರಯಾಣದ ಸೂಚನೆಗಳನ್ನು ಪಡೆಯುವುದಕ್ಕಾಗಿ ಕಂಪನಿಯ ಮುಖ್ಯ ಕಚೇರಿಗೆ, ಬರ್ಲಿನ್ನಿಗೆ ಬರಬೇಕು ಎಂಬ ಆದೇಶದ ಮೇರೆಗೆ ಆಲ್ಬರ್ಟ ಭಾರತಿಯನ್ನು ಕರೆದುಕೊಂಡೇ ಬರ್ಲಿನ್ನಿಗೆ ತೆರಳಿದನು. ಅಲ್ಲಿ ಕ್ರುಪ್ ಸಾಹೇಬರು ಈತನಿಗೆ ಭಾರತಕ್ಕೆ ಹೋಗಲೇಬೇಕು ಎಂದು ದುಂಬಾಲು ಬಿದ್ದರು. ಪ್ರಸಂಗಬಿದ್ದಲ್ಲಿ ನಿಮ್ಮ ತಾಯಿಗೆ ಸುಳ್ಳು ಹೇಳಿದರಾಯಿತು ಅಂದರು. ಅಂತೂ ಆಲ್ಬರ್ಟನನ್ನು ಭಾರತಕ್ಕೆ ತೆರಳಲು ಒಪ್ಪಿಸಿದರು.

ಭವ್ಯ ಭಾರತೀಯ ಸಂಸ್ಕೃತಿಯ ಚಿತ್ರ ತೆಗೆಯಬೇಕು ಎಂದು ಕ್ರುಪ್ ಸಾಹೇಬನ ಮನೀಷೆ ಪವಿತ್ರ ಗಂಗಾ ಮಾತೆಯನ್ನು ತಮ್ಮ ಚಿತ್ರದಲ್ಲಿ ಚಿತ್ರಿಸಬೇಕಾಗಿತ್ತು, ಅವನಿಗೆ.

"ತಮ್ಮ ಚಿತ್ರಕ್ಕೆ ಭಾರತೀಯ ಕಥೆಯೇ ಬೇಕಷ್ಟೆ. ನಮ್ಮ ಕುಟುಂಬವೇ ಅದನ್ನು ಒದಗಿಸಬಲ್ಲದು. ನಮ್ಮ ಮುಕ್ಯಾಲರ ಕುಟುಂಬ ಗಂಗೆಗೆ ಸೇರಿತು. ಅಂದರೆ ಬರ್ಲಿನ್ ಗಂಗೆಗೆ ಸೇರಿತು. ಭವ್ಯೋತ್ಕಟ ! ಕರುಣೋದಾತ್ತ" ಎಂದು ಆಲ್ಬರ್ಟ ನುಡಿದ.

ಫ್ರಾಂಕಫರ್ಟ ವಿಮಾನ ನಿಲ್ದಾಣದಲ್ಲಿ ಆಲ್ಬರ್ಟನನ್ನು ಬೀಳ್ಕೊಡಲು ಬಂದಿದ್ದ ಭಾರತಿ "ನಮ್ಮ ಆಣೆಯನ್ನು ಮಾತ್ರ ನೆನಪಿನಲ್ಲಿಟ್ಟುಕೊ" ಎಂದು ಗದ್ಗದಿತಳಾಗಿ ಹೇಳಿದಳು. ಆತನಿದ್ದ ವಿಮಾನ ಕಣ್ಮರೆಯಾಯಿತು.

ಮರುದಿನ ನಸುಕಿನಲ್ಲಿ ಆಲ್ಬರ್ಟನಿದ್ದ ವಿಮಾನ ತೆಹರಾನದಲ್ಲಿ ಇಳಿಯಿತು. ಪ್ರಯಾಣಿಕರೆಲ್ಲ ಇಳಿದು ಉಪಹಾರ ತೀರಿಸಿಕೊಂಡರು. ವಿಮಾನ ಮುಂದಿನ ಪ್ರಯಾಣಕ್ಕೆ ಸಿದ್ಧವಾಗುತ್ತಿತ್ತು. ಅಷ್ಟರಲ್ಲಿ ಪರಿಚಾರಿಕೆಯೊಬ್ಬಳು ಬಂದು "ದಿನೇಶಬಾಬು ಚಟ್ಟೋಪಾಧ್ಯಾಯ ಯಾರು ? ಅವರಿಗೆ ತಂತೀ ಸಂದೇಶ (ಟೆಲೆಕ್ಸ) ಇದೆ" ಎಂದು ಹಾಳೆಯನ್ನು ಅವರ ಕೈಗಿತ್ತು ಹೋದಳು.

ಮರುಕ್ಷಣದಲ್ಲಿ ವಿಮಾನವು ತನ್ನೆಲ್ಲ ಪ್ರಯಾಣಿಕರೊಡನೆ ಅಂತರಿಕ್ಷದಲ್ಲಿತ್ತು. ಆಲ್ಬರ್ಟನ ಪಕ್ಕದಲ್ಲಿಯೆ ದಿನೇಶಬಾಬು ಕುಳಿತಿದ್ದರು.

"ನೀವು ಕಲಕತ್ತೆಯಲ್ಲಿ ಇರುವಿರಲ್ಲವೆ ?" ಎಂದು ಆಲ್ಬರ್ಟ ದಿನೇಶಬಾಬೂನನ್ನು ಕೇಳಿದ.

"ಇಲ್ಲ. ಬಾಂಕಿಪುರದಲ್ಲಿದ್ದೇನೆ"

"ಭಾರತಿ ನಿಮ್ಮ ಮಗಳೆ?"

"ನಿಮಗೇನು ಗೊತ್ತು"? ಎಂದು ದಿನೇಶ ಬಾಬು ಕೇಳಿದ.

ಆಗ ಆಲ್ಬರ್ಟ ತನ್ನ ಸಾದ್ಯಂತ ಸಂಗತಿಯನ್ನು ಅವನಿಗೆ ತಿಳಿಸಿದ. ತಾನು ಭಾರತಿಯನ್ನು ವಿವಾಹವಾಗಲಿರುವುದನ್ನು ಹೇಳಿದ. ತನ್ನ ತಂದೆ ನಿಧನರಾದುದನ್ನೂ ನಿವೇದಿಸಿದ.

"ಅರೆರೆ, ಅವರು ಎಂಥ ಭಾವಿಕ ಮನುಷ್ಯ" ಎಂದು ದಿನೇಶಬಾಬು ಉದ್ಗರಿಸಿದ.

"ನನ್ನ ಅಜ್ಜ-ತಂದೆಯರ ಅಸ್ಥಿಗಳು ಪವಿತ್ರ ಗಂಗೆಯಲ್ಲಿ ಸೇರಿದವು. ಈಗ ನಮ್ಮ




Thomas/DCM 16 8/kan

ಸಾಹೇಬರು ಗಂಗಾನದಿಯ ಬಗ್ಗೆ ಚಿತ್ರ ತೆಗೆಯಲಿದ್ದಾರೆ. ಆದಕ್ಕಾಗಿಯೇ ನನ್ನನ್ನು ಅಲ್ಲಿಗೆ ಕಳಿಸಿದ್ದಾರೆ. ನನ್ನ ತಾಯಿ ಒಪ್ಪಲಿಲ್ಲ ಆದರೂ ಹೊರಟಿದ್ದೇನೆ" ಎಂದ.

"ಎಲ್ಲ ಹೆಂಗಸರೂ ಅಷ್ಟೆ. ಈಗ ನೋಡಿ, ಇಂದು ನನಗೆ ಗಂಡಾಂತರವಿದೆಯಂತೆ. ಆದ್ದರಿಂದ ನನ್ನ ಪ್ರಯಾಣವನ್ನು ಮುಂದುವರಿಸಬಾರದೆಂದು ನನ್ನ ಹೆಂಡತಿ ಸಂದೇಶ ಕಳಿಸಿದ್ದಾಳೆ ಭಾರತದಿಂದ. ಅವಳ ಮಾತು ಕೇಳಿ ಇಲ್ಲಿಯೇ ಉಳಿತರೆ ನಮ್ಮ ವ್ಯವಹಾರ ಹೇಗೆ ಸಾಗಬೇಕು. ಏನಿದೆ ಇದರಲ್ಲೆಲ್ಲ" ಎಂದ ದಿನೇಶಬಾಬು.

ದಿನೇಶ ಬಾಬುವಿಗೆ ಹಠಾತ್ತಾಗಿ ಭಾರತಿಯ ನೆನಪು ಬಂತು. ಆಲ್ಬರ್ಟನನ್ನು ವಿಚಾರಿಸಬೇಕೆಂದಿದ್ದರು: ಅಷ್ಟರಲ್ಲಿ.

"ಅತ್ಯಂತ ಕೆಟ್ಟ ಹವಾಮಾನದ ಮೂಲಕ ವಿಮಾನವನ್ನು ಅಬೇದಾನ ವಿಮಾನ ನಿಲ್ದಾಣಕ್ಕೆ ಒಯ್ಯಲಾಗುತ್ತಿದೆ" ಎಂದು ಚಾಲಕರ ಕೊಠಡಿಯಿಂದ ಸಂದೇಶ ಬಂತು. ವಿಮಾನ ನಿಲ್ದಾಣ ಕಣ್ಣಿಗೆ ಕಾಣಹತ್ತಿತು. ಆದರೆ ವಿಮಾನವನ್ನು ಕೆಳಗಿಳಿಸಬೇಕೆಂದರೆ ಅದರ ಒಡಲೊಳಗಿನ ಗಾಲಿಗಳು ಹೊರಬಲಿಲ್ಲ. ವಿಮಾನ ನೆಲಕ್ಕೆ ಕುಪ್ಪಳಿಸಿ ಕ್ಷಣಾರ್ಧದಲ್ಲಿ ಬೆಂಕಿಹತ್ತಿ ಬೂದಿಯಾಯಿತು.

ವಿಮಾನದಲ್ಲಿಯ ದೇಹಗಳೆಲ್ಲ ಸುಟ್ಟು ಕರಕಾಗಿ ಗುರುತಿಸಲು ಬಾರದಂತೆ ಆಗಿದ್ದವು. ವಿಳಾಸಗಳ ಮೇಲಿಂದ ವಿಮಾನ ನಿಲ್ದಾಣಾಧಿಕಾರಿಗಳು ಆ ಶವಗಳನ್ನು ತಮಗೆ ಸಾಧ್ಯವಿದ್ದಷ್ಟು ಗುರುತಿಸಿ ಅವರವರ ಆಪ್ತರಿಗೆ ಕಳಿಸಿಬಿಟ್ಟರು.

ಬಾಂಕಿಪುರದಲ್ಲಿ ದಿನೇಶಬಾಬುಗಳ ಅಸ್ಥಿಗಳು ಗಂಗಾನದಿಯಲ್ಲಿ ಸೇರಿದವು

ಹೈಡೆಲಬರ್ಗದಲ್ಲಿ ಏನಾ ತನ್ನ ಮಗ ಆಲ್ಬರ್ಟನ ಶವವನ್ನು ಅಪ್ಪಿಕೊಂಡು ಶೋಕಿಸುತ್ತಿದ್ದಳು ಅಕಸ್ಮಾತ್ ಆಕೆಯ ದೃಷ್ಟಿ ಅತನ ಕೈಯ ಕಡೆಗೆ ಹೋಯಿತು. ಆ ಮುಂಗೈಯಲ್ಲಿದ್ದ ವಾಚು ಆಲ್ಬರ್ಟನದಾಗಿರಲಿಲ್ಲ. ಅದನ್ನು ಬಿಚ್ಚಿ ನೋಡಿದಳು. ಅದರ ಬೆನ್ನ ಮೇಲೆ "ದಿನೇಶಬಾಬು" ಎಂದು ಹೆಸರಿತ್ತು.

ಅಂದರೆ ಈ ಶವ ಆಲ್ಬರ್ಟನದಲ್ಲ!

ಆಕೆ ವಿಮಾನ ಕಂಪನಿಗೆ ತಕರಾರು ಮಾಡಿದಳು, ಬೇರೆ ಶವ ಕಳಿಸಿಕೊಟ್ಟಿದ್ದಕ್ಕಾಗಿ. ಅದಕ್ಕೆ ಅವರು, "ನಿಮ್ಮ ಶವ ಬಾಂಕಿಪುರಕ್ಕೆ ಹೋಗಿತ್ತು. ಅಲ್ಲಿ ಅವರ ಪದ್ಧತಿಯಂತೆ ಅದಕ್ಕೆ ಅಂತ್ಯಸಂಸ್ಕಾರ ನಡೆದು ಅದರ ಅಸ್ಥಿಗಳು ಗಂಗಾನದಿ ಸೇರಿವೆ. ಈಗ ನಿಮಗೆ ಬಂದ ಶವದ ಸಂಸ್ಕಾರವನ್ನು ನಿಮಗೆ ಸರಿಕಂಡ ರೀತಿಯಲ್ಲಿ ಮಾಡಬಹುದು, ಆ ಎಲ್ಲ ಶವಗಳು ಗುರುತಿಸಲಾಗದಷ್ಟು ಕರಕಾಗಿದ್ದವು" ಎಂದು ಉತ್ತರ ಬಂತು. ಈ ಎಲ್ಲ ಸಂಗತಿ ಪತ್ರಿಕೆಗಳಲ್ಲಿಯೂ ಪ್ರಕಟವಾಯಿತು.

ಈ ವೃತ್ತಾಂತ ಓದಿಕೊಂಡು ಭಾರತಿ ಏನಾಳ ಮನೆಗೆ ಧಾವಿಸಿದಳು- ಇಬ್ಬರಿಗೂ ಅಪಾರದುಃಖವಾಗಿತ್ತು. ತನ್ನ ಪ್ರಿಯಕರನ ಶವ ಬಾಂಕಿಪುರಕ್ಕೆ ಹೋಗಿ ತಂದೆಯ ಶವ ಹೈಡಲಬರ್ಗಕ್ಕೆ ಬಂದುದನ್ನು ಕಂಡು ಭಾರತಿ ಸ್ತಂಭೀಭೂತಳಾಗಿದ್ದಳು. ಇಬ್ಬರೂ ಕೆಲಹೊತ್ತು ಕಣ್ಣೀರು ಹಾಕಿದ ನಂತರ ಭಾರತಿ

"ನಾನು ಇನ್ನು ನನ್ನ ಈ ಮನೆಯಲ್ಲಿ ಉಳಿಯಲು ಬರುತ್ತೇನೆ ?" ಕೇಳಿದಳು.

"ಸಂತೋಷದಿಂದ ಬಾ. ಅತಿಥಿ ಎಂದು ಉಳಿ."

"ಛೇ, ಅತಿಥಿ ಎಂದಲ್ಲ. ನಿಮ್ಮ ಸೊಸೆ ಎಂದು, ನಿಮ್ಮ ಮಗನ ಹೆಂಡತಿ ಎಂದು."

ಏನಾಳ ಕಣ್ಣಲ್ಲಿ ಒಮ್ಮೆಲೆ ನೀರೂರಿತು.

"ಅವನೀಗ ಹೋದ. ಅವನ ಹೆಂಡತಿ ಎಂದು ಉಳಿಯುವದರಲ್ಲಿ ಈಗ ಏನು ಅರ್ಥವಿದೆ !"

"ಅರ್ಥ ಈಗಲೇ ಇದೆ. ನಾವು ಭಾರತೀಯ ಸ್ತ್ರೀಯರು ಸ್ವಾರ್ಥಿಗಳಲ್ಲ. ನಿಮ್ಮ ಮಗನೊಂದಿಗೆ ನನ್ನ ಪ್ರತ್ಯಕ್ಷ ಮದುವೆಯಾಗಿದ್ದಿಲ್ಲ. ಆದರೆ ನಾವಿಬ್ಬರೂ ತ್ರಿಕರಣ ಪೂರ್ವಕ ವಿವಾಹಬದ್ಧರಾಗಿದ್ದೆವು. ಈಗ ನಾನು ಆ ಲಗ್ನ ಬಂಧನ ಮುರಿಯಲಾರೆ, ಈ ಮನೆಯಲ್ಲಿ ನಿಮ್ಮ ಮಗನ ವಿಧವೆ ಎಂದು ಇರಲು ಕೊಡಿ. ಇಷ್ಟು ಭಿಕ್ಷೆ ಹಾಕಿರಿ."

"ಭಿಕ್ಷೆ ಅನ್ನಬೇಡ. ಸಂತೋಷದಿಂದ ಇಲ್ಲಿ ಉಳಿ." ಏನರ್ಾ ಕಂಠ ತುಂಬಿ ನುಡಿದಳು.

"ಅಲ್ಲವೇ, ನನ್ನ ಇಡೀ ಮನೆ ಆ ನಿನ್ನ ಗಂಗೆಗೆ ಸೇರಿತು. ಈಗ ನಾನು ನಿನಗೆ ಯಾವ ಬಾಯಿಂದ ಬೇಡ ಎನ್ನಲಿ. ಮಗ ಶಾಶ್ವತ ವಾಗಿ ಈ ಮನೆಯಿಂದ ಹೊರಬಿದ್ದುಹೋದ. ಮತ್ತು ಆತನ ಹೆಂಡತಿ ಇಲ್ಲಿ ಶಾಶ್ವತವಾಗಿ ಉಳಿಯಲು ಬಂದಳು. ಇನ್ನೂ ಒಂದು ದುಃಖ ವೆಂದರೆ, ನಮ್ಮ ಮುಲ್ಲರ ವಂಶ ಕಡಿದು ಹೋಯಿತಲ್ಲ! ಬೇರು ಸಹಿತ ಕಿತ್ತು ಹೋಯಿತು!"

ಭಾರತಿ ತಲೆ ತಗ್ಗಿಸಿ ಉತ್ತರಿಸಿದಳು.

"ಹಾಗೆನ್ನಬೇಡಿ ನಿಮ್ಮ ಮುಲ್ಲರ ವಂಶ ವನ್ನ ಹೊಟ್ಟೆಯಲ್ಲಿ ಬೆಳೆಯುತ್ತಿದೆ. ಆ ವಂಶ ದೀಪಸಹಿತ ನಾನೀ ಮನೆಗೆ ಬಂದಿದ್ದೇನೆ. ಶಾಶ್ವತವಾಗಿ ಉಳಿಯಲಿಕ್ಕೆ."

ಆ ಮಾತು ಕೇಳಿ ಏನರ್ಾ ಪುಲಕಿತಳಾದಳು. ಅವಳ ವೃತ್ತಿ ಬಧಿರವಾದಂತಾಗಿ ಎಂದೂ ಕಂಡಿರದ ಗಂಗಾತೀರ ಅವಳಿಗೆ ಗೋಚರಿಸಿತು. ದಿನೇಶಬಾಬುಗಳ ಅಸ್ಥಿಗಳೊಂದಿಗೆ ಅವನ್ನು ಗಂಗೆಯಲ್ಲಿ ವಿಸರ್ಜಿಸಲು ತಾನು ಭಾರತಿಯ ಸಂಗಡ ಭಾರತಕ್ಕೆ ಹೊರಟಂತೆ ಅನಿಸಿತು. ಆ ಮೇಲೆ ಗಂಗೆಯ ತಡಿಯಲ್ಲಿ ಆಲ್ಬರ್ಟನ ಹುಡುಗ–ತನ್ನ ಮೊಮ್ಮಗ ಆಡುತ್ತಿರುವ ದನ್ನು ಕಂಡಳು. ಗಂಗೆಯ ಕಡೆಗೆ ಹೊರಟ ಮುಲ್ಲರ ಕುಟುಂಬದ ನಾಲ್ಕನೆ ತಲೆಮಾರು ಇದು.

ಎರಡೂ ಸಂಸ್ಕೃತಿಗಳ ಸಂಗಮವಾಗು ತ್ತಿತ್ತು. ಬರ್ಲಿನ್ ಸಂಸ್ಕೃತಿ ಕೊನೆಗೆ ಗಂಗೆಗೆ ಕೂಡುತ್ತಿದ್ದುದು ಅವಳಿಗೆ ಸ್ಪಷ್ಟವಾಗಿ ಕಂಡಿತು. ✵



ನನಗೆ ವ್ಯಾಪಾರವೆಂದರೆ ಬಹಳ ಮೆಚ್ಚು. ಅದು ಪ್ರತಿಸ್ಪರ್ಧೆಗೆ ಅವಕಾಶ ನೀಡು ತ್ತದೆ. ಅದರಲ್ಲಿ ಕಾರ್ಯಗಳಿಗೂ ಪುರಸ್ಕಾರ ಸಿಗುತ್ತದೆ. ಅದರಲ್ಲಿ ಶ್ರದ್ಧೆ ಅನಿವಾರ್ಯ ವಾಗಿ ಬೇಕಾಗುತ್ತದೆ. ನಾಳೆಯ ಕಲ್ಪನೆಯಲ್ಲಿ ಮುಳುಗಿ ಇಂದಿನ ಕರ್ತವ್ಯವನ್ನು ಉಪೇಕ್ಷಿಸಲು ಅದು ಬಿಡುವುದಿಲ್ಲ. ಅದು ಸಂಪೂರ್ಣ ಸ್ವಾರ್ಥ ಪರಾಯಣವಾಗಿದ್ದು ಮೋಸದ ಭಾವನೆಯಿಂದ ಮುಕ್ತವಾಗಿದೆ. ಅಕ್ಷಮತೆಯನ್ನು ಆಗಿಂದಾಗ್ಗೆ ಶಿಕ್ಷಿಸು ತ್ತದೆ ಮತ್ತು ಯೋಗ್ಯತೆ ಮತ್ತು ಶ್ರದ್ಧೆಗೆ ಪುರಸ್ಕಾರ ಕೊಡುತ್ತದೆ. ಅಲ್ಲದೆ, ಪ್ರತಿ ದಿನವೂ ಒಂದು ಹೊಸ 'ಎಡ್ವೆಂಚರ್' (ಸಾಹಸ) ಆಗಿರುವುದರಿಂದ ನನಗೆ ಅತ್ಯಂತ ಪ್ರಿಯವಾಗಿದೆ.

—ಆರ್. ಎಚ್. ಕ್ಮೆಬೆಲ್

This magazine owned by the Karnataka Patrika Private Ltd. is printed & published by Bhomeshwar Das Kohli at the Samyukta Karnatak Press: Koppikar Road, Hubli. Representatives: Bombay: V. S. Mani, Phone: 472794. Calcutta: H. Muzamdar: Phone: 46-4238; Madras: P. N. Srinivasan, Phone: 83748; New Delhi: P. R. Chopra, Phone: 224130.

Registered with the Registrar of Newspapers for India under No. 3633/57

